




# ಕನ್ನಡ ಸಾಹಿತ್ಯ ಪರಿಷತ್ತಿನ ಮಾಸಪತ್ರಿಕೆ

ಸಂಪುಟ 19 ]　　ಜನವರಿ 1956　　[ ಸಂಚಿಕೆ 1

## ಮೂವತ್ತೆಂಟನೆಯ ಕನ್ನಡ ಸಾಹಿತ್ಯ ಸಮ್ಮೇಳನದ ವಿಶೇಷ ಸಂಚಿಕೆ

### ವಿಷಯ ಸೂಚಿಕೆ



ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು 2

# 38ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ರಾಯಚೂರು

1955




ಸಮ್ಮೇಳನಾಧ್ಯಕ್ಷರಾದ
ಶ್ರೀ ಆದ್ಯ ರಂಗಾಚಾರ್ಯರು



ನಾಟಕ ಗೋಷ್ಠಿಯ ಅಧ್ಯಕ್ಷರು

**ನಾಟಕರತ್ನ ಶ್ರೀ ಜಿ. ಎಚ್. ವೀರಣ್ಣನವರು**

[ಪಡಿಯಚ್ಚು: ಕಟಕ ಅಡ್ವರ್ಟೈಸಿಂಗ್ ಅವರ ಕೃಪೆ



ಮಹಿಳಾ ಗೋಷ್ಠಿಯ ಅಧ್ಯಕ್ಷರು

**ಶ್ರೀಮತಿ ಪುಟ್ಟಮ್ಮ ಪಾಟೀಲ್ ಅವರು**



ಲೇಖಕ ಗೋಷ್ಠಿಯ ಅಧ್ಯಕ್ಷರು
**ಶ್ರೀ ನಿರಂಜನ ಅವರು**

## ಸಮ್ಮೇಳನದ ದೃಶ್ಯಗಳು :





ಸಮ್ಮೇಳನಾಧ್ಯಕ್ಷರಿಗೆ ಸ್ವಾಗತ



ವೇದಿಕೆಯಮೇಲೆ ಹೈದರಾಬಾದ್ ಮರಾಮತ್ ಶಾಖೆಯ ಮಾನ್ಯ ಮಂತ್ರಿ ಡಾ॥ ಮೇಲ್ಕೋಟೆ ಅವರು, 37ನೆಯ ಸಮ್ಮೇಳನಾಧ್ಯಕ್ಷರಾದ ಶ್ರೀ ಕಾರಂತರು ಮತ್ತು ಸಮ್ಮೇಳನಾಧ್ಯಕ್ಷರು.



ಡಾ॥ ಪಂಜೆ ಮಂಗೇಶರಾಯರ ಭಾವಚಿತ್ರ ಅನಾವರಣದ ಸಂದರ್ಭದಲ್ಲಿ ಶ್ರೀ ಶ್ರೀರಂಗರು ಮಾತನಾಡುತ್ತಿರುವುದು. ಕುಳಿತಿರುವವರು, ಸ್ವಾಗತ ಸಮಿತಿ ಅಧ್ಯಕ್ಷರಾದ ಡಾ॥ ಬಿ. ಜಿ. ದೇಶಪಾಂಡೆ ಮತ್ತು ಪರಿಷತ್ತಿನ ಅಧ್ಯಕ್ಷರಾದ ಶ್ರೀ ಎ. ಎನ್. ಮೂರ್ತಿರಾವ್ ಅವರು.

# 38ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ರಾಯಚೂರು

## ಪರಿಷತ್ತಿನ ಅಭಿನಂದನೆ

ಮೂವತ್ತೆಂಟನೆಯ ಸಾಹಿತ್ಯ ಸಮ್ಮೇಳನವು, ಹೈದರಾಬಾದಿನ ಪ್ರಮುಖ ನಗರಗಳಲ್ಲೊಂದಾದ ರಾಯಚೂರಿನಲ್ಲಿ ಈ ಸಲ ಸೇರಿದ್ದಿತು. ಕನ್ನಡದ ಎಲ್ಲ ವ್ಯವಹಾರಗಳಲ್ಲಿಯೂ ಪರ್ವಕಾಲವಾದ ಈ ಸಮಯದಲ್ಲಿ ಕನ್ನಡದ ಗಂಡುಮೆಟ್ಟಾದ ರಾಯಚೂರು ಈ ಸಮ್ಮೇಳನವನ್ನು ಕರೆದು ಅದರ ಹೊಣೆಯನ್ನು ಹೊತ್ತು ಅದ್ಭುತವಾದ ಯಶಸ್ಸನ್ನು ಗಳಿಸಿರುವುದು ಎಲ್ಲ ಕನ್ನಡಿಗರಿಗೂ ಆನಂದದ ಸಂಗತಿ. ಇದಕ್ಕೆ ರಾಯಚೂರಿನ ಸಾರ್ವಜನಿಕರೂ, ಮುಖ್ಯವಾಗಿ ಶ್ರೀಯುತರಾದ ಡಾ॥ ಭಗೀರಥರಾವ್ ದೇಶಪಾಂಡೆ, ರಾ. ಗು. ಜೋಷಿ, ರಾ. ವೆಂಕಟಶೆಟ್ಟಿ, ಡಿ. ಮಾಣಿಕರಾವ್, ರಂಗರಾವ್, ಕೆ. ಎಲ್. ಸರಾಫ್, ಡಿ. ಸಂಗಮೇಶ್ವರ್, ಡಾ॥ ರಾಮಕೃಷ್ಣ ಮುಂತಾದ ಮಹನೀಯರ ಉತ್ಸಾಹ, ತ್ಯಾಗ, ನುಡಿಯ ಅಭಿಮಾನ ಇವು – ಕಾರಣ. ಇವರೂ ಇವರ ಅನೇಕ ಮಿತ್ರರೂ ಶ್ರಮವಹಿಸಿ ಉತ್ಸವವು ಯಶಸ್ವಿಯಾಗುವುದಕ್ಕೆ ಸಹಾಯ ಮಾಡಿದರು.

ಬಿಡಾರ, ಊಟ, ತಿಂಡಿ, ವಾಹನ ಸೌಕರ್ಯ ಮುಂತಾದ ಎಲ್ಲ ವಿಚಾರಗಳಲ್ಲಿಯೂ ಪೂರ್ವಸಿದ್ಧತೆಗಳನ್ನು ಮಾಡಿದ್ದರಿಂದ ಬಂದ ಪ್ರತಿನಿಧಿಗಳಿಗೆ ಎಲ್ಲವೂ ಸುಗಮವಾಯಿತು.

ಸ್ವಾಗತ ಸಮಿತಿಯ ಸದಸ್ಯರೆಲ್ಲರೂ ಒಬ್ಬ ವ್ಯಕ್ತಿಯಂತೆ ನಿಂತು ಕೆಲಸ ಮಾಡದಿದ್ದಿದ್ದರೆ ಇಂತಹ ದೊಡ್ಡ ಕೆಲಸವನ್ನು ಇಷ್ಟು ಸುಲಭವಾಗಿ ನೆರವೇರಿಸಲಾಗುತ್ತಿರಲಿಲ್ಲ. ಸಮ್ಮೇಳನಾಧ್ಯಕ್ಷರೂ, ಗೋಷ್ಠಿಗಳ ಅಧ್ಯಕ್ಷರೂ ಇತರ ರೀತಿಯಲ್ಲಿ ಭಾಗವಹಿಸಿದ ವಿದ್ವಾಂಸರೂ ಈ ಸಮ್ಮೇಳನಕ್ಕೆ ತುಂಬ ಕಳೆಯನ್ನು ತಂದುಕೊಟ್ಟರು. ಈ ಮಾನ್ಯರಿಗೆಲ್ಲ ಪರಿಷತ್ತು ತುಂಬ ಋಣಿಯಾಗಿದೆ.

ಸಮ್ಮೇಳನಕ್ಕೆ ಹೈದರಾಬಾದಿನ ಮಾನ್ಯ ಮುಖ್ಯ ಮಂತ್ರಿಗಳಾದ ಶ್ರೀ ಬಿ. ರಾಮಕೃಷ್ಣರಾಯರೂ, ಮಂತ್ರಿಗಳಾದ ಡಾ॥ ಮೇಲ್ಕೋಟೆಯವರೂ ದಯಮಾಡಿ ಸಂದೇಶವನ್ನಿತ್ತು ಉಪಕಾರ ಮಾಡಿದರು. ಸಮ್ಮೇಳನದ ಖರ್ಚಿಗಾಗಿ ಐದು ಸಹಸ್ರ ರೂಪಾಯಿಗಳನ್ನು ಕೊಡಿಸಿಕೊಟ್ಟರು. ಇವರಿಬ್ಬರಿಗೂ ಪರಿಷತ್ತು ಹೃತ್ಪೂರ್ವಕವಾಗಿ ಕೃತಜ್ಞತೆಯನ್ನರ್ಪಿಸುತ್ತದೆ.

ವೃತ್ತಪತ್ರಿಕೆಗಳವರು ಪ್ರತಿನಿಧಿಗಳನ್ನು ಕಳಿಸಿಕೊಟ್ಟು, ಸಮ್ಮೇಳನದ ಕಾರ್ಯಕಲಾಪಗಳು ಕನ್ನಡದ ಎಲ್ಲ ಜನರಿಗೂ ಸಕಾಲದಲ್ಲಿ ತಲಪುವಂತೆ ವರದಿಯಾಗಲು ಸಹಾಯ ಮಾಡಿದರು. ನಾಡಿನ ಎಲ್ಲ ಕಡೆಗಳಿಂದ ವಿದ್ವಾಂಸರೂ ಉತ್ಸಾಹಿಗಳೂ ಕಾರ್ಯಕರ್ತರೂ ಸೇರಿ ಸಮ್ಮೇಳನವು ಕಳೆ ತುಂಬುವಂತೆ ಮಾಡಿದರು. ಮಲೆಯಾಳಂ ಸಾಹಿತ್ಯದ ಪರವಾಗಿ ಶ್ರೀ ಗುಪ್ತನ್ ನಾಯರ್ ಅವರು ದಯಮಾಡಿಸಿ ಆ ಭಾಷೆಯ ವಿಚಾರವಾಗಿ ಸ್ವಾರಸ್ಯವಾದ ಭಾಷಣ ಮಾಡಿದರು.

ರಾಯಚೂರಿನ ಪುರಸಭೆಯ ಅಧ್ಯಕ್ಷರು ಅಪರಂಜಿ ಗುರುನಾಥರಾವ್ ಅವರ ನೇತೃತ್ವದಲ್ಲಿ ಸಮ್ಮೇಳನದವರಿಗೆ ಪೌರಸತ್ಕಾರವನ್ನಿತ್ತು ಗೌರವಿಸಿದರು. ಊರಿನ ಗಣ್ಯ ವರ್ತಕ

ರಾದ ಗಿರಧಾರಿಲಾಲ್ ದಾಮೋದರದಾಸ್ ರಾಠಿಯವರು ಪ್ರತಿನಿಧಿಗಳಿಗೆಲ್ಲಾ ಭೋಜನ ಕೂಟವನ್ನು ಏರ್ಪಡಿಸಿ ಸಂತೋಷ ಪಡಿಸಿದರು. ಲಕ್ಷ್ಮೀ ವೆಂಕಟೇಶ್ವರ ದೇಸಾಯಿ ಕಾಲೇಜಿನ ಪ್ರಿನ್ಸಿಪಲರಾದ ಶ್ರೀ ಮಾಗಲ್ ಅವರು, ಅವರ ಮನೆಯಲ್ಲಿ ಸಂತೋಷಕೂಟ ವನ್ನೇರ್ಪಡಿಸಿದ್ದರು.

ಸಂಜೆ ಮನರಂಜನೆಯಲ್ಲಿ ಭಾಗವಹಿಸಿ ಸಭಿಕರಿಗೆ ಬೇಸರ ಕಳೆಯಲು ಬಾಗಲ ಕೋಟೆಯಿಂದಲೂ, ಧಾರವಾಡದಿಂದಲೂ, ಸಾಗರದಿಂದಲೂ ನಾಟಕಗಳ ಅಭಿನಯ ಕಾರರೂ, ಸಂಗೀತಗಾರರೂ ದಯಮಾಡಿಸಿದ್ದರು. ಧಾರವಾಡ ಮತ್ತು ಹೈದರಾಬಾದ್ ಕೇಂದ್ರಗಳ ಆಕಾಶವಾಣಿ ಕಾರ್ಯಾಲಯದವರು ಮೂರು ದಿನಗಳ ಕಾರ್ಯಕಲಾಪ ಗಳನ್ನು ವರದಿ ಮಾಡಿ, ಕನ್ನಡಿಗರೆಲ್ಲರೂ ಇದನ್ನು ಕೇಳುವ ಸುಯೋಗವನ್ನು ಒದಗಿಸಿ ಕೊಟ್ಟರು.

ಈ ಸಲದ ಸಮ್ಮೇಳನಕ್ಕೆ ಪ್ರತಿನಿಧಿಗಳು ಬಂದುಹೋಗುವುದಕ್ಕೆ ಭಾರತದ ರೈಲ್ವೆ ಇಲಾಖೆಯವರು ಅರ್ಧ ರಿಯಾಯಿತಿಯನ್ನಿತ್ತು ತುಂಬ ಸಹಕರಿಸಿದರು.

ಇವರೆಲ್ಲರಿಗೂ, ಇವರಿಗೆ ಸಹಾಯಕರಾಗಿ ಹಿಂದೆ ನಿಂತು ದುಡಿದ ಇತರರಿಗೂ ಪರಿಷತ್ತು ತನ್ನ ಕೃತಜ್ಞತೆಯನ್ನು ಸಮರ್ಪಿಸುತ್ತದೆ.

**ಡಿ. ಸಿ. ಸುಬ್ಬರಾಯಪ್ಪ,**
**ಜಿ. ವೆಂಕಟಸುಬ್ಬಯ್ಯ,**
ಗೌರವ ಕಾರ್ಯದರ್ಶಿಗಳು.

## 38ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಸಂಗ್ರಹ ವರದಿ

ಕಳೆದ ತಿಂಗಳು ಹೈದರಾಬಾದು ಸಂಸ್ಥಾನದ ರಾಯಚೂರು ನಗರದಲ್ಲಿ, ಕನ್ನಡ ಸಾಹಿತ್ಯ ಪರಿಷತ್ತು ವರ್ಷಂಪ್ರತಿ ನಡಸುತ್ತಿರುವ ಕನ್ನಡ ಸಾಹಿತ್ಯ ಸಮ್ಮೇಳನದ 38ನೆಯ ಅಧಿವೇಶನವು ಬಹು ವೈಭವದಿಂದ ನೆರವೇರಿತೆಂದು ತಿಳಿಸಲು ಆನಂದಿಸುತ್ತೇವೆ.

ರಾಯಚೂರು ಕರ್ನಾಟಕ ಸಂಘದ ಹಿಂಬಯಲಿನಲ್ಲಿ ಸಮ್ಮೇಳನಕ್ಕಾಗಿ ಸುಂದರವೂ ವಿಶಾಲವೂ ಆದ ಸಭಾಮಂಟಪವನ್ನು ರಚಿಸಿ, ಅದಕ್ಕೆ "ತಾರಾನಾಥನಗರ" ವೆಂದು ನಾಮಕರಣ ಮಾಡಲಾಗಿತ್ತು. ದಿ|| ಪಂ|| ತಾರಾನಾಥ ಅವರು ಕನ್ನಡ ಪ್ರಚಾರಕ್ಕೆ ರಾಯಚೂರನ್ನು ಕೇಂದ್ರವನ್ನಾಗಿ ಮಾಡಿಕೊಂಡು, ಅನೇಕ ವರ್ಷಗಳು ದುಡಿದು, ರಾಯಚೂರಿನ, ಏಕೆ?, ಇಡೀ ಹೈದರಾಬಾದ್ ಸಂಸ್ಥಾನದಲ್ಲಿನ ಕನ್ನಡಿಗರಲ್ಲಿ, ಕನ್ನಡದ ಅಭಿಮಾನವನ್ನು ತುಂಬಿದ ಮಧುರಸ್ಮೃತಿಗಾಗಿ ಸಭಾಮಂಟಪಕ್ಕೆ ಆ ಹೆಸರನ್ನಿಡ ಲಾಗಿತ್ತು.

### ಮೊದಲನೆಯ ದಿನದ ಕಾರ್ಯಕ್ರಮ ತಾ. 25-12-55

ಸಮ್ಮೇಳನಾಧ್ಯಕ್ಷರಾದ ಶ್ರೀ ಆದ್ಯ ರಂಗಾಚಾರ್ಯರು "ತಾರಾನಾಥನಗರ"ದಲ್ಲಿ ಬೆಳಿಗ್ಗೆ ರಾಷ್ಟ್ರೀಯ ಧ್ವಜಾರೋಹಣೋತ್ಸವವನ್ನು ನೆರವೇರಿಸಿದರು. ಪ್ರೇಕ್ಷಕ ವೃಂದ ಅಸಂಖ್ಯಾತವಾಗಿ ಸೇರಿದ್ದಿತು. ರಾಷ್ಟ್ರಗೀತೆ ಆದ ಮೇಲೆ ಸಮ್ಮೇಳನಾಧ್ಯಕ್ಷ ಶ್ರೀ ಶ್ರೀರಂಗ

ರನ್ನು, 38 ಜೊತೆ ಎತ್ತುಗಳನ್ನು ಹೂಡಿದ್ದ, ಪುಷ್ಪಾಲಂಕೃತವಾದ ಹಂಸರಥದಲ್ಲಿ ಕುಳ್ಳಿರಿಸಿ ರಾಯಚೂರಿನ ರಾಜ ಬೀದಿಗಳಲ್ಲಿ ಮೆರವಣಿಗೆ ನಡೆಯಿತು. ಮೆರವಣಿಗೆಯ ಸಮಾರಂಭದಲ್ಲಿ ವಿವಿಧ ವಿನೋದಗಳ ಏರ್ಪಾಡು ನಡೆದಿದ್ದಿತು. ಶಹನಾಯಿ, ತಮಟೆ, ನಗಾರಿ, ಢೋಲು, ರಮಢೋಲು ಮುಂತಾದ ಪಂಚವಾದ್ಯಗಳ ವಾದನವೂ; ಕೀಲು ಕುದುರೆ, ಹಳ್ಳಿಯ ಕುಣಿತ, ಹಳ್ಳಿಯ ಹಾಡುಗಳು – ಇವುಗಳೂ ಏರ್ಪಾಡಾಗಿದ್ದು ಮೆರವಣಿಗೆಗೆ ಅಪೂರ್ವವಾದ ಕಳೆಯನ್ನು ಕೊಟ್ಟಿದ್ದವು. ಮೆರವಣಿಗೆ ನಡೆದ ರಾಜ ವೀಧಿಯ ಇಕ್ಕೆಡೆಗಳಲ್ಲೂ ಸಹಸ್ರಾರು ಜನ ನೆರೆದು ಸಮ್ಮೇಳನಕ್ಕೂ, ಸಮ್ಮೇಳನಾಧ್ಯಕ್ಷರಿಗೂ ಜಯವನ್ನು ಕೋರಿದರು.

**ವಸ್ತು ಪ್ರದರ್ಶನ :—**

ತರುವಾಯ ಮೈಸೂರಿನಲ್ಲಿ ನಡೆದ 37ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾದ ಶ್ರೀ ಕೋ. ಶಿವರಾಮ ಕಾರಂತ ಅವರು, ಈ ಸಮ್ಮೇಳನದ ಅಂಗವಾಗಿ ಏರ್ಪಡಿಸಲಾಗಿದ್ದ ಕರ್ಣಾಟಕದ ಪ್ರಾಕೃತಿಕ ಸಂಪದ್ವಿಶೇಷಗಳನ್ನು ಪ್ರತಿಬಿಂಬಿಸುವ ವಸ್ತುಪ್ರದರ್ಶನವನ್ನು ಉದ್ಘಾಟಿಸಿದರು.

ವಸ್ತುಪ್ರದರ್ಶನವು ಸಮ್ಮೇಳನದ ಸಭಾಂಗಣದ ಸಮೀಪದಲ್ಲಿಯೇ ಪ್ರತ್ಯೇಕವಾಗಿ ಏರ್ಪಡಿಸಿದ್ದ ಮಂಟಪದಲ್ಲಿ ಜರುಗಿತು. ಪ್ರದರ್ಶನಕ್ಕೆ ಅನೇಕ ಸಂಸ್ಥೆಗಳವರು ಬಂದು ತಮ್ಮ ವಸ್ತುಗಳನ್ನು ಪ್ರದರ್ಶಿಸುತ್ತಿದ್ದರು. "ಎಮ್ಮಿಗನೂರು ನೇಕಾರರ ಸಹಕಾರ ಸಂಘ" "ಪಂಚವಾರ್ಷಿಕ ಯೋಜನಾಲಯ" "ರಾಯಚೂರು ಜಿಲ್ಲೆಯ ಗೃಹ ಕೈಗಾರಿಕೆ ವಸ್ತುಗಳು." ಹೈದರಾಬಾದ ಆರ್ಕ್ಯಲಾಜಿಕಲ್ ಡಿಪಾರ್ಟ್‌ಮೆಂಟಿನ ಪ್ರಾಚೀನ ವಸ್ತು ಪ್ರದರ್ಶನ, ಮೈಸೂರಿನ ಬೇಲೂರು, ಹಳೇಬೀಡುಗಳ ಶಿಲ್ಪಕಲಾ ಚಿತ್ರಪ್ರದರ್ಶನ; ಪುಸ್ತಕದ ಅಂಗಡಿಗಳು; ವಿದ್ಯಾಖಾತೆ, ಪಶುವೈದ್ಯ ಖಾತೆ ಮೊದಲಾದವುಗಳ ವಸ್ತು ಪ್ರದರ್ಶನಗಳೂ ಏರ್ಪಾಡಾಗಿದ್ದವು.

ಮಧ್ಯಾಹ್ನ 3 ಘಂಟೆಗೆ ಸಮ್ಮೇಳನದ ಪ್ರಥಮ ದಿನದ ಕಾರ್ಯಕ್ರಮ ಆರಂಭವಾಯಿತು. ಅಧ್ಯಕ್ಷರಾದ ಶ್ರೀ ಆದ್ಯ ರಂಗಾಚಾರ್ಯ ಅವರು ವೇದಿಕೆಯಲ್ಲಿ ಅಧ್ಯಕ್ಷ ಪೀಠವನ್ನಲಂಕರಿಸಿದರು. ಹೈದರಾಬಾದಿನ ಮರಾಮತ್ ಇಲಾಖೆಯ ಸಚಿವರಾದ ಡಾ|| ಮೇಲ್ಕೋಟೆ ಅವರು ಅಧ್ಯಕ್ಷರ ಪಕ್ಕದಲ್ಲಿ ಪೀಠವನ್ನಲಂಕರಿಸಿದ್ದರು. ಶ್ರೀಗಳಾದ ಮಾನ್ವಿ ನರಸಿಂಗರಾವ್, ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿ, ನ್ಯಾಯಮೂರ್ತಿ ನಿಟ್ಟೂರು ಶ್ರೀನಿವಾಸರಾವ್, ತವಗ ಭೀಮಸೇನರಾವ್, ರಾಜಸೇವಾಸಕ್ತ ಡಿ. ಸಿ. ಸುಬ್ಬರಾಯಪ್ಪ, ವಿ. ಎಂ. ಇನಾಂದಾರ್, ಕೆ. ಗುಬ್ಬಯ್ಯ, ಹಿಂದಿನ ಸಮ್ಮೇಳನಾಧ್ಯಕ್ಷರಾದ ಶಿವರಾಮ ಕಾರಂತ್, ಮುಂಬಯಿಯ ಉಪಮಂತ್ರಿ ಕೆ. ಎಫ್. ಪಾಟೀಲ್, ಶ್ರೀಮತಿ ಪುಟ್ಟಮ್ಮ ಪಾಟೀಲ್, ಕುಳಕುಂದ ಶಿವರಾಯರು, ನಾಟಕರತ್ನ ಜಿ. ಎಚ್. ವೀರಣ್ಣನವರೂ: ಪತ್ರಿಕಾಪ್ರತಿನಿಧಿಗಳೂ; ಆಹ್ವಾನಿತರಾಗಿದ್ದ ಕೇರಳದ ಸಾಹಿತ್ಯ ಪರಿಷತ್ತಿನ ಪ್ರತಿನಿಧಿಗಳೂ, ಕೇರಳ ವಿಶ್ವವಿದ್ಯಾನಿಲಯದ "ಮಲಯಾಳಂ" ಪ್ರಾಧ್ಯಾಪಕರೂ ಆದ ಶ್ರೀ ಗುಪ್ತನ್ ನಾಯರ್ ಅವರೂ, ಪರಿಷತ್ತಿನ ಅಧ್ಯಕ್ಷರಾದ ಶ್ರೀ ಎ. ಎನ್. ಮೂರ್ತಿರಾವ್, ಎಂ.ಎ. ಮತ್ತು ಇತರ ಅಧಿಕಾರಿಗಳೂ ವೇದಿಕೆಯಲ್ಲಿ ಪೀಠಗಳನ್ನಲಂಕರಿಸಿದ್ದರು. ಸಭಾಂ

ಗಣದಲ್ಲಿ ಸುಮಾರು 3-4 ಸಹಸ್ರಮಂದಿ ಪ್ರೇಕ್ಷಕರು ನೆರೆದಿದ್ದರು. ಇವರಲ್ಲಿ ಸುಮಾರು 500 ಮಂದಿ ಪ್ರತಿನಿಧಿಗಳೇ ಇದ್ದರು.

ಸಮ್ಮೇಳನ ಕುಮಾರಿ ಫಲಗೂಬಾಯಿ ಅವರ "ಉದಯವಾಗಿದೆ ನಮ್ಮ ಚೆಲುವ ಕನ್ನಡ ನಾಡು" ಎಂಬ ನಾಡಗೀತೆಯಿಂದ ಆರಂಭವಾಯಿತು. ಕುಮಾರಿ ಫಲಗೂಬಾಯಿ ಮತ್ತು ಕಾಶೀಬಾಯಿ ಅವರು "ಸ್ವಾಗತವು ಶ್ರೀರಂಗ ಜಹಗೀರುದಾರರಿಗೆ" ಎಂಬ ಸ್ವಾಗತ ಗೀತೆಯನ್ನು ಹಾಡಿದರು. ಇದಾದಮೇಲೆ ಸ್ವಾಗತಾಧ್ಯಕ್ಷರಾದ ಡಾ॥ ಬಿ. ಜಿ. ದೇಶಪಾಂಡೆ ಅವರು ಸ್ವಾಗತಭಾಷಣವನ್ನು ಮಾಡಿದರು. (ಸ್ವಾಗತ ಭಾಷಣ ಬೇರೆಕಡೆ ಕೊಟ್ಟಿದೆ.)

ಅನಂತರ, ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಎ. ಎನ್. ಮೂರ್ತಿ ರಾಯರು ಪರಿಷತ್ತಿನ ಪರವಾಗಿ, ನೂತನ ಸಮ್ಮೇಳನಾಧ್ಯಕ್ಷರು ಪ್ರತಿನಿಧಿಗಳು, ಆಹ್ವಾನಿತರು, ಮತ್ತಿತರ ಸಭಾಸದರು—ಎಲ್ಲರನ್ನೂ ಸ್ವಾಗತಿಸುತ್ತ "ಪರಿಷತ್ತು ನಡೆಸುತ್ತಿದ್ದ ಕನ್ನಡ ನಾಡಿನ ಸಾಂಸ್ಕೃತಿಕ ಏಕೀಕರಣ ಮಹಾಯುದ್ಧವು ಇದೀಗ ಜಯಪ್ರದವಾಗಿ ಮುಕ್ತಾಯಗೊಂಡಿದೆ. ಕರ್ಣಾಟಕ ಪ್ರಾಂತ ನಿರ್ಮಾಣವಾಗುವ ಶುಭಸಮಯವಿದು. ಈಗ ಇತರ ಭಾಷೆಗಳವರೊಡನೆ ಸಂಪರ್ಕ ಬೆಳೆಸಿ, ವಿಚಾರ ವಿನಿಮಯ ನಡೆದು, ವಿವಿಧ ಭಾಷಾ ಭಾಂದವರಲ್ಲಿ ಸೌಭ್ರಾತೃತ್ವವನ್ನು ಸ್ಥಾಪಿಸುವ ಅಗತ್ಯವಿದೆ. ಆ ಕಾರ್ಯ ಈಗ ಆಗಬೇಕಾಗಿದೆ.

"ಹೈದರಾಬಾದು ಕನ್ನಡಿಗರು ವಿದ್ಯೆಯಲ್ಲಿ ಹಿಂದುಳಿದ್ದಾರೆ. ಒರಟರು ಎಂಬ ಭಾವನೆ ಅಷ್ಟೇನೂ ನಿಜವಲ್ಲ. ಚರಿತ್ರೆ, ಇಲ್ಲಿನ ಜನ ಮೇಧಾವಿಗಳು, ಶಕ್ತಿವಂತರು, ಬುದ್ಧಿವಂತರು; ಮೈಸೂರಿನವರಿಗೇನೂ ಕಡಮೆಯಿಲ್ಲ, ಕೆಚ್ಚೆದೆಯವರು; ಕಿತ್ತೂರು ಚೆನ್ನಮ್ಮ ಮೊದಲಾದ ವೀರರು ಇಲ್ಲಿ ಆಗಿ ಹೋಗಿದ್ದಾರೆ; ಅನೇಕ ಕವಿ ಪುಂಗವರ ದಾಸ ವರ್ಯರ, ಮತಾಚಾರ್ಯರ ಜನ್ಮಭೂಮಿ ಇದು; ಕನ್ನಡ ಸಂಸ್ಕೃತಿಯ ಬೆಳವಣಿಗೆಗೆ ಇಲ್ಲಿನವರು ತಮ್ಮದೇ ಆದ ಸೇವೆಯನ್ನು ಸಲ್ಲಿಸಿದ್ದಾರೆ ಎಂಬುದನ್ನು ತೋರಿಸಿಕೊಟ್ಟಿದೆ.

"ಪ್ರಕೃತ, ಈ ಸಮ್ಮೇಳನದ ಅಧ್ಯಕ್ಷ ಸ್ಥಾನವನ್ನು ಕನ್ನಡ ನಾಡಿನ ಶ್ರೇಷ್ಠ ನಾಟಕಕಾರರೂ, ಉದ್ದಾಮ ಸಾಹಿತಿಗಳೂ ಆಗಿರುವ ಶ್ರೀ ಆದ್ಯ ರಂಗಾಚಾರ್ಯ ಅವರು, ವಹಿಸಿರುವುದು ಅತ್ಯಂತ ಉಚಿತವಾಗಿದೆ. ಅವರನ್ನೂ ಮತ್ತು ನಾಟಕ ಗೋಷ್ಠಿ, ಲೇಖಕ ಗೋಷ್ಠಿ, ಮಹಿಳಾ ಗೋಷ್ಠಿಗಳ ಅಧ್ಯಕ್ಷರುಗಳಾದ, ಶ್ರೀಗಳಾದ ನಾಟಕರತ್ನ ಜಿ. ಎಚ್. ವೀರಣ್ಣನವರು, ಕುಳಕುಂದ ಶಿವರಾಯರು (ನಿರಂಜನ), ಮತ್ತು ಶ್ರೀಮತಿ ಪುಟ್ಟಮ್ಮ ಪಾಟೀಲ್ ಇವರುಗಳನ್ನು ಪರಿಷತ್ತಿನ ಪರವಾಗಿ ಸ್ವಾಗತಿಸಲು ಸಂತೋಷಿಸುತ್ತೇನೆ.

"ಶ್ರೀ ಆದ್ಯ ರಂಗಾಚಾರ್ಯರು—ಶ್ರೀರಂಗರು ನಾಟಕ ರಚನೆಗಾಗಿಯೇ ಜನ್ಮ ವೆತ್ತಿದವರೆಂದು ಹೇಳುವಷ್ಟುಮಟ್ಟಿಗೆ ಉತ್ತಮ ನಾಟಕಕಾರರು. ನಾಟಕಗಳನ್ನು ಬರೆದು, ನಟರೊಡನೆ ಬೆರೆತು, ಪರಿಣಾಮಕಾರಿಯಾಗಿ ನಾಟಕಗಳನ್ನಾಡಿಸಿ, ಜನರನ್ನು ಸಂತೋಷಗೊಳಿಸಿ ತಾವೂ ಸಂತೋಷಪಟ್ಟಿರುವ ಧನ್ಯರು. ಅವರ ಲೇಖನಗಳಲ್ಲಿ ಕಟು ಹಾಸ್ಯ, ವಿಡಂಬನಗಳು ತುಂಬಿ ತುಳುಕುತ್ತಿದ್ದರೂ ಅದರ ಹಿನ್ನೆಲೆಯಲ್ಲಿ, ಒಂದು ಉದ್ದೇಶ್ಯ, ಸಾಧನೆಯ ಸಂಕಲ್ಪ ಇದ್ದೇ ಇರುತ್ತದೆ.

"ಅವರ ನಾಟಕಗಳಲ್ಲಿನ ಸಂಭಾಷಣೆ ಬಹಳ ಹರಿತವಾದದ್ದು, ಹಾಸ್ಯದಲ್ಲಿ ನಗೆ ಇದ್ದರೂ, ಆಮೇಲೆ ಕನಿಕರವನ್ನುಂಟುಮಾಡುವ ಶಕ್ತಿ ಅದರಲ್ಲಡಗಿದೆ. ಹಿಂದಿನ ಇಂದಿನ ವಿಚಾರಧಾರೆಯ ಸಮನ್ವಯ ಶ್ರೀರಂಗರಲ್ಲಿದೆ.

"ಶ್ರೀಮತಿ ಪುಟ್ಟಮ್ಮ ಪಾಟೀಲ್ ಅವರು, ಸ್ತ್ರೀಯರ ಉನ್ನತಿಗಾಗಿ ದುಡಿಯುತ್ತಿರುವ ಪ್ರತಿಭಾವಂತ ಮಹಿಳೆಯಾಗಿದ್ದಾರೆ. ಸ್ತ್ರೀಯರ ಅಭಿವೃದ್ಧಿ ವಿಷಯದಲ್ಲಿ ಶ್ರೀಮತಿಯವರಿಗೆ ಆದರ ವಿಶ್ವಾಸಗಳಿವೆ. ಇವರ ನೇತೃತ್ವದಲ್ಲಿ ಮಹಿಳಾ ಗೋಷ್ಠಿ ನಡೆಯುವುದಾಗಿದೆ.

"ಶ್ರೀ ಕುಳಕುಂದ ಶಿವರಾಯ – ನಿರಂಜನರು ಕನ್ನಡ ನಾಡಿನ ಎಲ್ಲರ ಮೆಚ್ಚಿನ ಕಾದಂಬರಿಕಾರರು, ವಿಚಾರಪರರು, ಉತ್ತಮ ಕಾದಂಬರಿಗಳನ್ನು ಕನ್ನಡಕ್ಕೆ ಕೊಟ್ಟಿರುವವರು.

"ನಾಟಕರತ್ನ ಶ್ರೀ ಜಿ. ಎಚ್. ವೀರಣ್ಣನವರು, ಪತನವಾಗಿ ಹೋಗುತ್ತಿದ್ದ ಕನ್ನಡ ರಂಗಭೂಮಿಯನ್ನು ಉದ್ಧಾರ ಮಾಡಿರುವ ಮಹಾನುಭಾವರು. ನಟರ—ನಾಟಕಕರ್ತೃಗಳ ವಿಷಯದಲ್ಲಿ ಔದಾರ್ಯವನ್ನು ಮೆರೆದು ಅನೇಕ ಹೊಸ ಪ್ರಯೋಗಗಳನ್ನು ರಂಗದಮೇಲೆ ತಂದು ಜನರ ಮೆಚ್ಚುಗೆಯನ್ನು ಪಡೆದಿರುವವರು.

"ಹೈದರಾಬಾದಿನ ಮರಾಮತ್ತು ಶಾಖೆಯ ಮಂತ್ರಿಗಳಾದ ಡಾ॥ ಮೇಲ್ಕೋಟೆ ಅವರ ವಿಚಾರವನ್ನು ಶ್ರೀ ಬಿ. ಜಿ. ದೇಶಪಾಂಡೆ ಅವರು ನಿಮಗೆ ಈಗಾಗಲೆ ತಿಳಿಸಿದ್ದಾರೆ. ಅವರು ಅಚ್ಚ ಕನ್ನಡಿಗರು, ಕನ್ನಡಿಗರಲ್ಲಿ ತುಂಬ ಅಭಿಮಾನವುಳ್ಳವರು. ಈ ಮಹನೀಯರು ಈ ಸಮ್ಮೇಳನದ ಉದ್ಘಾಟನೆಯನ್ನು ಮಾಡಿಕೊಡುವವರಾಗಿದ್ದಾರೆ. ಇವರೆಲ್ಲರಿಗೂ ನಾನು ಹೃತ್ಪೂರ್ವಕವಾಗಿ ಸ್ವಾಗತವನ್ನು ಬಯಸುತ್ತೇನೆ. ಇನ್ನು ಶ್ರೀ ಮೇಲ್ಕೋಟೆಯವರು ಸಮ್ಮೇಳನದ ಉದ್ಘಾಟನವನ್ನು ಮಾಡಿಕೊಡಬೇಕೆಂದು ಪ್ರಾರ್ಥಿಸುತ್ತೇನೆ" ಎಂದು ಹೇಳಿದರು.

ಬಳಿಕ ಹೈದರಾಬಾದಿನ ಮರಾಮತ್ತಿನ ಮಂತ್ರಿಗಳಾದ ಡಾ॥ ಮೇಲ್ಕೋಟೆ ಅವರು ಉದ್ಘಾಟನ ಭಾಷಣವನ್ನು ಅಪ್ಪಣೆ ಕೊಡಿಸುತ್ತಾ "ಇಂದಿನ ಈ ಉದ್ಘಾಟನ ಮಹೋತ್ಸವವನ್ನು ಮಾನ್ಯಮುಖ್ಯಮಂತ್ರಿಗಳು ಶ್ರೀ ಬಿ. ರಾಮಕೃಷ್ಣರಾವ್, ಅವರು ನಡೆಸಿಕೊಡಬೇಕಾಗಿದ್ದಿತು. ಅವರು ತಿರುವಾಂಕೂರು-ಕೊಚ್ಚಿಗಳಿಗೆ ಹೋಗುವಸಲುವಾಗಿ ಭಾರತದ ಮಹಾ ಪ್ರಧಾನಿ ಪಂ॥ ನೆಹರು ಅವರು ಹೈದರಾಬಾದು ಮೂಲಕ ಹಾದು ಹೋಗುವವರಿದ್ದುದರಿಂದ ಅವರನ್ನು ಕಂಡು ಗೌರವಿಸಬೇಕಾದ ಅಗತ್ಯವಿದ್ದು ನನಗೆ ಈ ಕಾರ್ಯ ಮಾಡಲು ಆಜ್ಞೆ ಮಾಡಿರುವರು.

"ಶ್ರೀ ಬಿ. ರಾಮಕೃಷ್ಣರಾಯರು ನಾನಾ ಭಾಷಾ ಪ್ರವೀಣರು. ಉರ್ದು, ಮರಾಠಿ, ಸಂಸ್ಕೃತ, ಇಂಗ್ಲಿಷ್, ಪಾರ್ಸಿ, ಆಂಧ್ರ ಭಾಷೆಗಳಲ್ಲಿ ಅವರಿಗೆ ತುಂಬ ಪಾಂಡಿತ್ಯವಿದೆ. ಶ್ರೀ ರಾಮಕೃಷ್ಣರಾಯರವರೇ ಇಂದು ಈ ಸಮಾರಂಭವನ್ನು ನೆರವೇರಿಸಿಕೊಟ್ಟಿದ್ದರೆ ನಿಮಗೆಲ್ಲಾ ಹೆಚ್ಚಿನ ಸಂತೋಷವಾಗುತ್ತಿದ್ದಿತು. ಕರ್ನಾಟಕ ಏಕೀಕರಣ ಕೈಗೂಡಿಬರಲಿರುವ ಈ ಶುಭ ಸಂಧಿಕಾಲದಲ್ಲಿ, 38ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ಕರ್ನಾಟಕಕ್ಕೆ ಸೇರಲಿರುವ ರಾಯಚೂರಿನಲ್ಲಿ ನಡೆಯುತ್ತಿರುವ ವಿಷಯದಲ್ಲಿ ಮಹತ್ವವಿದೆ. ಕನ್ನಡ ನಾಡಿನ ಜನಕ್ಕೆ ಕನ್ನಡದಲ್ಲಿ ಪ್ರೀತ್ಯಾದರಗಳಿರುವಂತೆಯೇ, ಆಂಧ್ರ, ಮರಾಠಿ ಮೊದ

ಲಾದ ಇತರ ಭಾಷಾ ಬಂಧುಗಳೂ ಇದೆ, ಈ ಸೋದರ ಭಾಷೆಗಳಲ್ಲಿ ಅನೇಕ ಉತ್ತಮ ಸಾಹಿತ್ಯ ಕೃತಿಗಳು ಕಂಗೊಳಿಸುತ್ತಿವೆ. ಭಾಷಾ ಬಾಂಧವ್ಯ ಅಧಿಕವಾಗಿ ಬೆಳಸಬೇಕಾದುದು ಕನ್ನಡಿಗರ ಕರ್ತವ್ಯ. ಇತರ ಭಾಷೆಗಳಲ್ಲಿರುವ ಉತ್ತಮ ಕೃತಿಗಳು, ವಿವಿಧ ವಿಚಾರಗಳು ಕನ್ನಡಕ್ಕೆ ಪರಿವರ್ತಿತವಾಗಬೇಕು. ಭಾರತ ರಾಷ್ಟ್ರದ ಐಕ್ಯತೆಯ ದೃಷ್ಟಿಯಿಂದಲೂ ಸಾಹಿತ್ಯಾಭಿವೃದ್ಧಿಯ ದೃಷ್ಟಿಯಿಂದಲೂ ಕನ್ನಡನಾಡಿನ ಸಾಹಿತಿಗಳೆಲ್ಲಾ, ಸಂತತವಾಗಿ ಆಸಕ್ತಿವಹಿಸಿ ಕೆಲಸ ಮಾಡಬೇಕು.

"ಪ್ರಕೃತ ಕರ್ನಾಟಕ ಪ್ರಾಂತನಿರ್ಮಾಣವಾಗಲಿದೆಯಷ್ಟೆ. ಕರ್ಣಾಟಕ ಪ್ರಾಂತವಾದಾಗ ಅದೊಂದು ಸಂಪದ್ಭರಿತವಾದ ಪ್ರಾಂತವಾಗುವುದರಲ್ಲಿ ಸಂಶಯವಿಲ್ಲ. ರಾಯಚೂರು ಪ್ರದೇಶದಲ್ಲಿ ಚಿನ್ನ ದೊರಕುತ್ತದೆ. ತುಂಗಭದ್ರಾ ನದಿಯಿಂದ ಸಾವಿರಾರು ಎಕರೆ ತರೀ ಜಮಿಾನು ಸಿದ್ಧವಾಗುತ್ತದೆ. ಕೃಷ್ಣಾ ನದಿಯ ಯೋಜನೆ ಏನಾದರೂ ಕಾರ್ಯರೂಪಕ್ಕೆ ಬಂದರೆ ಏಳೂವರೆಲಕ್ಷ ಎಕರೆ ಕುಷ್ಕಿ ಪ್ರದೇಶ ತರಿ ಜಮಿಾನಾಗಿ ಮಾರ್ಪಡುವುದು, ಶಾಬಾದು ಸಿಮೆಂಟು ಅಭಿವೃದ್ಧಿ ಸ್ಥಿತಿಯಲ್ಲಿದೆ; ರಸ್ತೆ, ನದಿಗಳಿಗೆ ಸೇತುವೆಯ ನಿರ್ಮಾಣ ಮೊದಲಾದುವುಗಳು ನಡೆಯುತ್ತಿದೆ, ಇದೆಲ್ಲವೂ ಕರ್ಣಾಟಕದ ಆಸ್ತಿಯಾಗಿ ಪರಿಣಮಿಸಿ ಹಲವಾರು ಸಾಧನಾನುಕೂಲಗಳು ಅದರ ಭಾಗಕ್ಕೆ ಮಿಾಸಲಾಗುವುದು.

"ಕನ್ನಡಿಗರೆಲ್ಲಾ ತಮ್ಮ ಸಂಪೂರ್ಣ ಶಕ್ತಿಯನ್ನು ವಿನಿಯೋಗಿಸಿ ತಾಳ್ಮೆಯಿಂದ, ಸಂತತವೂ ಕಾರ್ಯಪಟುಗಳಾಗಿ ದೇಶದ ಅಭ್ಯುದಯವನ್ನು ಸಾಧಿಸಬೇಕು. ಯಶಸ್ಸನ್ನು ಗಳಿಸಬೇಕು. ಕನ್ನಡ ನಾಡಿನ ಯಶಸ್ಸು ಭಾರತದ ಯಶಸ್ಸು ಎಂಬ ಭಾವನೆ ಕನ್ನಡಿಗರಲ್ಲಿ ಬೇರೂರಿ ನಿಲ್ಲಬೇಕು. ಈ ಭಾವನೆ ಸಾಹಿತಿಗಳ ನೆರವಿನಿಂದ ಜನರಲ್ಲಿ ಮೂಡಿ ಬರಬೇಕು. ಈ ವಿಷಯದಲ್ಲಿ ಹೆಂಗಸರೂ ಪ್ರಮುಖ ಪಾತ್ರವನ್ನು ವಹಿಸಬೇಕು. ಈ ಸಮ್ಮೇಳನ ಕನ್ನಡ ನಾಡಿನ ಎಲ್ಲ ಶಕ್ತಿಗಳನ್ನೂ ಒಗ್ಗೂಡಿಸಿ ಅಭ್ಯುದಯ ಮಾರ್ಗಕ್ಕೆ ನೆರವು ನೀಡಲಿ: ಭಾರತದಲ್ಲಿ ಕನ್ನಡ ಸಾಹಿತ್ಯ ಇಮ್ಮಡಿಯಾಗಿ ಮುಮ್ಮಡಿಯಾಗಿ ಬೆಳೆಯಲಿ, ಒಂದು ಅಖಂಡ ಶಕ್ತಿಯಾಗಿ ಬೆಳಗಲಿ ಎಂದು ಕೋರಿ ಈ ಸಮ್ಮೇಳನವನ್ನು ಉದ್ಘಾಟಿಸುತ್ತೇನೆ" ಎಂದು ಹೇಳಿದರು.

ತರುವಾಯ ಹಿಂದಿನ ಸಮ್ಮೇಳನಾಧ್ಯಕ್ಷರಾದ, ಶ್ರೀ ಕೋ. ಶಿವರಾಮ ಕಾರಂತ ಅವರು ನೂತನ ಅಧ್ಯಕ್ಷರ ಪರಿಚಯವನ್ನು ಸಭೆಗೆ ಮಾಡಿಕೊಡುತ್ತಾ : "ಈ ಮೂವತ್ತೆಂಟನೆಯ ಸಮ್ಮೇಳನಕ್ಕೆ ನನ್ನ ಗೆಳೆಯರಾದ ಶ್ರೀ ಆದ್ಯ ರಂಗಾಚಾರ್ಯ – ಶ್ರೀರಂಗ – ಅವರು ಅಧ್ಯಕ್ಷತೆ ವಹಿಸುವುದು ನನಗೆ ಅತ್ಯಂತ ಸಂತೋಷಕರವಾದ ಸಂಗತಿ. ಶ್ರೀರಂಗರದು ಹರಿತವಾದ ನಾಲಗೆ. ಅವರ ನಾಟಕಗಳನ್ನೆಲ್ಲಾ ನೋಡಿದ ಪ್ರೇಕ್ಷಕರು ಹಿಂದೊಮ್ಮೆ ಅವರನ್ನು 'ಘಜನೀ ಮಹಮ್ಮದ' – ವಿಗ್ರಹ ಭೇದಕ — ಎಂದು ಬೊಬ್ಬೆಯಿಟ್ಟಿದ್ದರು. ಅವರ ನಾಟಕಗಳಲ್ಲಿ ಹಳೆಯ ಸಂಪ್ರದಾಯಗಳ ಅಂಧಾನುಕರಣೆಯ ಖಂಡನೆಯನ್ನೂ, ಇಂದಿನ ಸಮಾಜದ ಉದ್ಧಾರಕ್ಕೆ ಬೇಕಾದ ವಿಚಾರ ಪರಂಪರೆಯನ್ನೂ ಕಾಣಬಹುದು. ಅವರು ನಮ್ಮ ಕನ್ನಡ ನಾಡಿನ 'ಬರ್ನಾರ್ಡ್ ಷಾ' ಆಗಿದ್ದಾರೆ. ಇಂತಹವರು ಸಮ್ಮೇಳನಾಧ್ಯಕ್ಷತೆಯನ್ನು ವಹಿಸಿರುವುದು ನಿಜವಾಗಿಯೂ ನನಗೆ ಆನಂದವನ್ನುಂಟುಮಾಡಿದೆ" ಎಂದು ಹೇಳಿದರು.

ಆ ಮೇಲೆ ರಾಯಚೂರಿನ ಶ್ರೀ ಡಿ. ಮಾಣಿಕರಾವ್ ಅವರು ಶ್ರೀರಂಗರು— ಸಮ್ಮೇಳನದ ಅಧ್ಯಕ್ಷರಾದ ಬಗ್ಗೆ ತಮ್ಮ ಸಂತೋಷವನ್ನು ವ್ಯಕ್ತಪಡಿಸಿದರು.

ಅನಂತರ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿ ಶ್ರೀ ಜಿ. ವೆಂಕಟಸುಬ್ಬಯ್ಯನವರು ಶ್ರೀ ಶ್ರೀರಂಗರು ಅಧ್ಯಕ್ಷರಾದುದಕ್ಕಾಗಿ ಪರಿಷತ್ತಿನ ಪರವಾಗಿ ತಮ್ಮ ಸಂತೋಷವನ್ನು ವ್ಯಕ್ತಪಡಿಸುತ್ತಾ "ಇವರು ಮುಟ್ಟಿದ್ದೆಲ್ಲಾ ಹೊನ್ನು ಮಾಡುವ 'ಮೈದಾಸ'!. ಸಾಹಿತ್ಯದಲ್ಲಿ ಜಹಗೀರಿ ಪಡೆದ ಜಹಗಿರ್‌ದಾರ್" ಎಂದು ಹೇಳಿದರು.

ತರುವಾಯ ಅನೇಕ ಸಂಘಸಂಸ್ಥೆಗಳವರು ಅಧ್ಯಕ್ಷ ಶ್ರೀರಂಗರಿಗೆ ಹಾರಗಳನ್ನರ್ಪಿಸಿದರು.

ಅನಂತರ ಸಭಿಕರ ಅದ್ಭುತ ಕರತಾಡನಗಳ ಮಧ್ಯೆ ಶ್ರೀರಂಗರು ಎದ್ದುನಿಂತು ತಮ್ಮದೇ ಆದ ಗಂಭೀರ ಕಂಠಶ್ರೀಯಿಂದ ಅಧ್ಯಕ್ಷ ಭಾಷಣವನ್ನು ಅಪ್ಪಣೆ ಕೊಡಿಸಿದರು. (ಭಾಷಣ ಬೇರೊಂದೆಡೆ ಕೊಟ್ಟಿದೆ).

ಅಧ್ಯಕ್ಷ ಭಾಷಣದ ತರುವಾಯ ಶ್ರೀಗಳಾದ ವೆಂಕಟಶೆಟ್ಟಿ ಮತ್ತು ರಾ. ಗು. ಜೋಷಿ ಅವರು ಸಮ್ಮೇಳನಕ್ಕೆ ಶುಭವನ್ನು ಕೋರಿ ಕಳುಹಿಸಿದ್ದ ಈ ಕೆಳಕಂಡ ಮಹನೀಯರ ಸಂದೇಶಗಳನ್ನು ಓದಿದರು.

ಶ್ರೀಯುತರಾದ: ಮೈಸೂರಿನ ಮಾನ್ಯ ವಿದ್ಯಾಮಂತ್ರಿಗಳಾದ ಎ. ಜಿ. ರಾಮಚಂದ್ರರಾಯರವರು, ಬೊಂಬಾಯಿ ಪ್ರಾಂತದ ಸಹಕಾರ ಸಂಸ್ಥೆಗಳ ಮಾನ್ಯ ಮಂತ್ರಿಗಳಾದ ಎಂ. ಪಿ. ಪಾಟೀಲ ಅವರು, ಕೇಂದ್ರದ ಗೃಹಶಾಖೆಯ ಡೆಪ್ಯುಟಿ ಉಪಮಂತ್ರಿಗಳಾದ ಬಲವಂತರಾವ್ ದಾತಾರ ಅವರು, ಮೈಸೂರಿನ ಮುಖ್ಯ ಮಂತ್ರಿಗಳಾದ ಮಾನ್ಯ ಕೆ. ಹನುಮಂತಯ್ಯ ಅವರು, ಕೇಂದ್ರದ ವಾಣಿಜ್ಯ ಶಾಖೆಯ ಮಂತ್ರಿಗಳಾದ ಡಿ. ಪಿ. ಕರಮರಕರ ಅವರು, ಮೈಸೂರಿನ ರೆವಿನ್ಯೂ ಮಂತ್ರಿಗಳಾದ ಕಡಿದಾಳ್ ಮಂಜಪ್ಪ ಅವರು, ಕೇಂದ್ರದ ಉತ್ಪನ್ನ ಶಾಖಾ ಮಂತ್ರಿಗಳಾದ ಕೆ. ಸಿ. ರೆಡ್ಡಿ ಅವರು, ಮೈಸೂರಿನ ವ್ಯವಸಾಯ ಮಂತ್ರಿಗಳಾದ ಡಾ|| ಆರ್. ನಾಗನಗೌಡ ಅವರು, ಹೈದರಾಬಾದಿನ ಗೃಹಶಾಖೆಯ ಉಪಮಂತ್ರಿಗಳಾದ ಶ್ರೀನಿವಾಸರಾವ್ ಎಕ್ಕಹಳ್ಳಿಕರ ಅವರು, ಹೈದರಾಬಾದಿನ ಉಪಮಂತ್ರಿಗಳಾದ ಶಂಕರದೇವ ಅವರು, ತೆಲಂಗಾಣ ಲೇಖಕ ಸಂಘದ ಅಧ್ಯಕ್ಷರಾದ ಕಾಳೋಜಿ ನಾರಾಯಣರಾವ್ ಅವರು, ಜಿ. ವಿ. ಸೂಳಿಭಾವಿ ಅವರು, ಮಹಾರಾಷ್ಟ್ರ ಸಾಹಿತ್ಯ ಪರಿಷತ್ತಿನ ಕಾರ್ಯದರ್ಶಿಗಳಾದ ಪ್ರೊ. ವಿ. ಡಿ. ಗೋಖಲೆ ಅವರು, ಕೆ.ಪಿ.ಸಿ.ಸಿ. ಮಾಜಿ ಅಧ್ಯಕ್ಷರಾದ ನಿಜಲಿಂಗಪ್ಪನವರು, ಡಾ|| ಗೋಡಬೋಳೆ, ರಾಜ್ಯ ಸಭೆಯ ಡೆಪ್ಯುಟಿ ಸ್ಪೀಕರ್ ಎಸ್. ವಿ. ಕೃಷ್ಣಮೂರ್ತಿರಾವ್ ಅವರು, ದೆಹಲಿಯ ಸಾಹಿತ್ಯ ಅಕ್ಯಾಡೆಮಿ ಕಾರ್ಯದರ್ಶಿಗಳಾದ ಕೃಪಾಲಾನಿ ಅವರು, ಹೈದರಾಬಾದು ಪ್ರದೇಶ ಕಾಂಗ್ರೆಸ್ಸಿನ ಕಾರ್ಯದರ್ಶಿಗಳು ವೀರೇಂದ್ರ ಪಾಟೀಲ್ ಅವರು, ಹೈದ್ರಾಬಾದಿನ ನಿವೃತ್ತ ಸಬ್‌ಜಡ್ಜರು ಈಚಲಕರ್ ಅವರು, ಪಾರ್ಲಿಮೆಂಟ್ ಸದಸ್ಯರಾದ ಕೃಷ್ಣಾಚಾರ್ಯ ಜೋಷಿ, ಜೆ. ಬಿ. ಕೃಪಲಾನಿ, ಅವರು, ವರದರಾಜ ಆದ್ಯ ಅವರು, ಎಚ್. ಚನ್ನಕೇಶವ ಅಯ್ಯಂಗಾರ್ ಅವರು, ಚ. ಪು. ರಾ. ಜಂ. ಮೂರ್ತಿ, ಪ್ರೊ. ಡಿ. ಕೆ. ಭೀಮಸೇನರಾವ್ ಅವರು, ಮಂ. ಗೋವಿಂದ ಪೈ ಅವರು, ವೆಂಕಟರಾವ್ ನಾಯಕ ಅವರು, ಶ್ರೀಮತಿ ಜಯದೇವಿ ತಾಯಿ ಲಿಗಾಡೆ ಅವರು, ಪ್ರೊ. ವಿ. ಕೃ. ಗೋಕಾಕ ಅವರು, ರವಿಕಲಾವಿದರು, ಬೆಂಗಳೂರು, ಉದ್ಗೀರ್ ಪೀಠಾಧಿಪತಿಗಳು, ವಿ. ಸೀತಾರಾಮಯ್ಯ ಅವರು, ಹನುಮಂತರಾವ್ ಗೋರಬಾಳ, ಅವರು, ಡಿ. ಡಿ. ಅಶ್ವಾಲ ಅವರು, ಪಂಡಿತರತ್ನಂ ಬಿ.

ಶಿವಮೂರ್ತಿ ಶಾಸ್ತ್ರಿಗಳವರು, ಶ್ರೀ ಜಗದ್ಗುರು ವಾಗೀಶ ಪಂಡಿತಾರಾಧ್ಯ ಶಿವಾಚಾರ್ಯ ಮಹಾಸ್ವಾಮಿಗಳು, ಸಿ. ಕೆ. ವೆಂಕಟರಾಮಯ್ಯ ಅವರು, ಶ್ರೀಮತಿ ಸರೋಜಿನಿ ಮಹಿಷಿ ಅವರು, ಸಿ. ಕೆ. ನಾಗರಾಜರಾವ್, ಅವರು, ವೈ. ಕೆ. ರಾಮಚಂದ್ರರಾವ್ ಅವರು, ತವಗ ಭೀಮಸೇನರಾಯರು.

ಇದಾದಮೇಲೆ ರಾಷ್ಟ್ರಗೀತೆಯೊಡನೆ ಸಮ್ಮೇಳನದ ಮೊದಲನೆಯ ದಿನ ಸಂಜೆಯ ಕಾರ್ಯಕ್ರಮ ಮುಕ್ತಾಯವಾಯಿತು.

ಅನಂತರ ರಾತ್ರಿ ಒಂಬತ್ತು ಗಂಟೆಗೆ ಈ ಕೆಳಕಂಡ ಸದಸ್ಯರನ್ನೊಳಗೊಂಡ ವಿಷಯ ನಿಯಾಮಕ ಸಮಿತಿಯ ರಚನೆಯಾಯಿತು. ಬಳಿಕ ಅವರು ಸಭೆ ಸೇರಿ ಬಹಿರಂಗಾಧಿವೇಶನದಲ್ಲಿ ಮಂಡಿಸಬೇಕಾದ ನಿರ್ಣಯಗಳನ್ನು ಗೊತ್ತುಪಡಿಸಿದರು.

## ವಿಷಯ ನಿಯಾಮಕ ಸಮಿತಿ ಸದಸ್ಯರು

ಶ್ರೀಗಳಾದ: (1) ಎ. ಎನ್. ಮೂರ್ತಿರಾವ್, (2) ಜಿ. ವೆಂಕಟಸುಬ್ಬಯ್ಯ, (3) ಡಿ. ಸಿ. ಸುಬ್ಬರಾಯಪ್ಪ, (4) ಎನ್. ವರದರಾಜನ್, (5) ನಿಟ್ಟೂರು ಶ್ರೀನಿವಾಸ ರಾಯರು, (6) ಕೆ. ವಾಸುದೇವರಾವ್, (7) ತವಗ ಭೀಮಸೇನರಾವ್, (8) ಆದ್ಯ ರಂಗಾಚಾರ್ಯರು, (9) ಕೆ. ಎಸ್. ಕಾರಂತ್, (10) ಬಿ. ಜಿ. ದೇಶಪಾಂಡೆ (11) ರಾ. ಗು. ಜೋಷಿ, (12) ವೆಂಕಟಶೆಟ್ಟಿ (13) ಡಿ. ಎಲ್. ನರಸಿಂಹಾಚಾರ್, (14) ನರಸಿಂಗರಾವ್ ಮಾಸ್ತಿ, (15) ಮಾಣಿಕರಾಯರು, (16) ಗುರುನಾಥರಾಯರು, (17) ಮಾಗಲ್, (18) ಎಸ್. ಎಂ. ಹುಣಿಸ್ಯಾಳ, (19) ಸರಾಫ್, (20) ಬಿ. ಶಂಕರಭಟ್ಟ, (21) ಎಂ. ಎಸ್. ಶಾಮಯ್ಯಂಗಾರ್, (22) ಎನ್. ಕೆ. ಕುಲಕರ್ಣಿ, (23) ಎಚ್. ರಾಘವೇಂದ್ರರಾವ, (24) ಶಾಂತವೀರಪ್ಪ, (25)ಗುರುರಾಜ ಮಾಸ್ತರ, (26) ಮಹಾಂತಯ್ಯ, (27) ಶ್ರೀಮತಿ ಪಾಟೀಲ್, (28) ಮ. ನ. ಮೂರ್ತಿ, (29) ಬದನೆಹಾಳ ರಂಗನಗೌಡ.

ರಾತ್ರಿ 9–30 ಗಂಟೆಗೆ ಮನೋರಂಜನ ಕಾರ್ಯಕ್ರಮ ಸಭಾಂಗಣದಲ್ಲಿ ಏರ್ಪಾಡಾಗಿದ್ದಿತು. ಬಾಗಲುಕೋಟೆಯ "ವಾಸುದೇವ ವಿನೋದಿನಿ ನಾಟ್ಯಸಂಘ"ದವರು, ಶ್ರೀರಂಗರ "ಜರಾಸಂಧಿ" ಎಂಬ ನಾಟಕನ್ನು ಬಹಳ ಚೆನ್ನಾಗಿ ಅಭಿನಯಿಸಿ, ಪ್ರೇಕ್ಷಕರನ್ನು ಸಂತೋಷಗೊಳಿಸಿದರು. ನಾಟಕದಲ್ಲಿ ಶ್ರೀಗಳಾದ ಬೆಣ್ಣೂರ್, ಟಿ. ಎ. ದೇಶಪಾಂಡೆ, ಶ್ರೀಮತಿ ಸರೂದೇವಿ ದೇಶಪಾಂಡೆ ಮತ್ತು ಮಂಗಳವೇಢೆ ಅವರು ಪಾತ್ರಗಳನ್ನು ವಹಿಸಿದ್ದರು.

ಹೈದರಾಬಾದಿನ "ನಾಟ್ಯ ಕಲಾ ನಿಕೇತನ"ದವರು "ನಮ್ಮ ಹಳ್ಳಿ" ಎಂಬ ನಾಟಕವನ್ನು ಅಭಿನಯಿಸಿದರು.

## ಎರಡನೆಯ ದಿನದ ಕಾರ್ಯಕ್ರಮ ತಾ. 26–12–55

ಸಮ್ಮೇಳನದ ದ್ವಿತೀಯ ದಿನ ಪ್ರಾತಃಕಾಲ "ನಾಟಕ ಗೋಷ್ಠಿ" ನಾಟಕರತ್ನ, ಜಿ. ಎಚ್. ವೀರಣ್ಣನವರ ಅಧ್ಯಕ್ಷತೆಯಲ್ಲಿ ಬಹಳ ವೈಭವದಿಂದ ನಡೆಯಿತು. ಮೊದಲು ಕುಮಾರಿ ಫಲಗುಬಾಯಿ ಅವರು "ಉದಯವಾಗಿದೆ ಕನ್ನಡ ನಾಡು. . . ." ಎಂಬ ನಾಡಗೀತೆಯನ್ನು ಹಾಡಿದ ತರುವಾಯ ಶ್ರೀ ಕಲ್ಮಲ ನಾರಾಯಣಪ್ಪನವರು ಕನ್ನಡದ ಅಭಿಮಾನವನ್ನು ಹುರಿದುಂಬಿಸುವ ಗೀತೆಯೊಂದನ್ನು ಬಹಳ ಸ್ವಾರಸ್ಯವಾಗಿ ಹಾಡಿದರು. ಅನಂತರ ಶ್ರೀ ರಾ. ಗು. ಜೋಷಿಯವರು, "ನಾಟಕ ಗೋಷ್ಠಿಯ" ಅಧ್ಯಕ್ಷಸ್ಥಾನಕ್ಕೆ

ಶ್ರೀ ಜಿ. ಎಚ್. ವೀರಣ್ಣನವರನ್ನು ಸ್ವಾಗತಿಸುತ್ತಾ, ಅವರು ಕನ್ನಡ ನಾಡಿನ ರಂಗ ಭೂಮಿಗೆ ಮಾಡಿರುವ ಸೇವೆಯನ್ನು ಪ್ರಶಂಸಿಸಿದರು. ಆಮೇಲೆ ಮೈಸೂರು ಸಂಸ್ಥಾನದ ನಾಟಕ ಅಕ್ಯಾಡೆಮಿ ಮತ್ತು ಬೆಂಗಳೂರು ಕಲಾ ಮಂದಿರಗಳ ಪರವಾಗಿ ಶ್ರೀ ಎ. ಎಸ್. ಸುಬ್ಬರಾಯರೂ, ರಾಯಚೂರಿನ "ಕರ್ಣಾಟಕ ಸಂಘ"ದ ಪರವಾಗಿ ಶ್ರೀ ರಾ. ಗು. ಜೋಷಿ ಅವರೂ "ಕರ್ಣಾಟಕ ಕಲಾ ಸೇವಾಸಂಘ"ದವರೂ ನಾಟಕ ಗೋಷ್ಠಿಯ ಅಧ್ಯಕ್ಷರಿಗೆ ಹಾರಗಳನ್ನು ಅರ್ಪಿಸಿದರು.

ತರುವಾಯ ನಾಟಕರತ್ನ ಶ್ರೀ ಜಿ. ಎಚ್. ವೀರಣ್ಣನವರು ಅಮೋಘವಾದ ತಮ್ಮ ಅಧ್ಯಕ್ಷ ಭಾಷಣವನ್ನು ತಮ್ಮದೇ ಆದ ಹಾಸ್ಯಮಯವಾದ ವಾಣಿಯಲ್ಲಿ ಪ್ರಾರಂಭಿಸಿ ಸಭಿಕರನ್ನು ನಗೆಗಡಲಿನಲ್ಲಿ ಮಿಾಯಿಸಿ ಸುಮಾರು 60 ವರ್ಷಗಳ ಕನ್ನಡ ರಂಗಭೂಮಿಯ ತಮ್ಮ ಅನುಭವದ ಬಗ್ಗೆ ಒಂದು ಚಿತ್ರವನ್ನು ವಿಚಿತ್ರವಾಗಿ ಚಿತ್ರಿಸಿದರು. ಆಮೇಲೆ ಬರೆದು ಅಚ್ಚಾಗಿದ್ದ ಅಧ್ಯಕ್ಷ ಭಾಷಣವನ್ನು ಓದಿದರು. (ಭಾಷಣವನ್ನು ಬೇರೆ ಕಡೆ ಕೊಟ್ಟಿದೆ.)

ಅಧ್ಯಕ್ಷ ಭಾಷಣವಾದ ಮೇಲೆ ಶ್ರೀ ಆರ್. ಗುರುರಾಜಾರಾಯರು ಬರೆದು ಕಳುಹಿಸಿದ್ದ "ನಾಟಕ ಪ್ರದರ್ಶನದ ರೀತಿನೀತಿಗಳು" ಎಂಬ ಭಾಷಣವನ್ನು ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ ಜಿ. ವೆಂಕಟಸುಬ್ಬಯ್ಯನವರು ಸಂಗ್ರಹಿಸಿ ಓದಿದರು. (ಭಾಷಣವನ್ನು ಬೇರೆಕಡೆ ಕೊಟ್ಟಿದೆ.)

ಆಮೇಲೆ, ಶ್ರೀ ಮಾ. ನ. ಚೌಡಪ್ಪನವರು "ರಂಗಸ್ಥಳದ ಬಗ್ಗೆ ವಿಚಾರಪೂರ್ಣವಾದ ಭಾಷಣವನ್ನು ಮಾಡಿದರು. (ಭಾಷಣವನ್ನು ಬೇರೆಕಡೆ ಕೊಟ್ಟಿದೆ.)

ಶ್ರೀ ಎಸ್. ಕೆ. ಕುಲಕರ್ಣಿ ಅವರು "ವಿಚಾರ ಪ್ರಧಾನವಾದ ನಾಟಕಗಳು" ಎಂಬ ವಿಷಯದ ಬಗ್ಗೆ ಭಾಷಣವನ್ನು ಓದಿದರು. (ಭಾಷಣವನ್ನು ಬೇರೆಕಡೆ ಕೊಟ್ಟಿದೆ.)

ಜೋರಾಪುರದ ಶ್ರೀ ಗುರುರಾಜ ಅವರು ನಾಟಕ ವಿಲಾಸಿ ಸಂಘಗಳವರು ನಾಟಕದ ಬಗ್ಗೆ ಎದುರಿಸಬೇಕಾಗಿ ಬಂದಿರುವ ಅನೇಕ ಸಮಸ್ಯೆಗಳನ್ನು ಪ್ರಸ್ತಾಪಿಸಿದರು. ಸಾಹಿತಿಗಳು ಜನರ ಸಾಮಾಜಿಕ ಜೀವನದ ಮಟ್ಟವನ್ನು ಹೆಚ್ಚಿಸುವ ಬಗ್ಗೆ ತಿಳುವಳಿಕೆಯನ್ನು ಕೊಡುವಂತಹ ನಾಟಕಗಳನ್ನು ಜನರಿಗೆ ಹಿಡಿಸುವಂತೆ ಬರೆಯಬೇಕೆಂದೂ, ಕನ್ನಡ ಸಾಹಿತಿಗಳು ಈ ವಿಚಾರದಲ್ಲಿ ಮಾರ್ಗದರ್ಶನ ನೀಡಬೇಕೆಂದೂ; ಪರಿಷತ್ತು ನಾಟಕೋತ್ಸವಗಳನ್ನು ಏರ್ಪಡಿಸಿ ಕಲಾವಿಲಾಸಿ ಸಂಸ್ಥೆಗಳಿಗೆ ಪ್ರೋತ್ಸಾಹ ಕೊಡಬೇಕೆಂದೂ" ಪ್ರಾರ್ಥಿಸಿದರು.

ಈ ಹೊತ್ತಿಗೆ ಹೈದರಾಬಾದಿನ ಮುಖ್ಯ ಸಚಿವರು, ಶ್ರೀ ಬಿ. ರಾಮಕೃಷ್ಣರಾಯರು ಸಮ್ಮೇಳನ ಮಂಟಪಕ್ಕೆ ದಯಮಾಡಿಸಿದ್ದರು. ಸಮ್ಮೇಳನಾಧ್ಯಕ್ಷರೂ, ಸ್ವಾಗತಸಮಿತಿಯ ಅಧ್ಯಕ್ಷರೂ ಶ್ರೀಯುತರನ್ನು ಸ್ವಾಗತಿದರು.

ಮಾನ್ಯ ಮುಖ್ಯ ಮಂತ್ರಿಗಳವರು ತಾವು ಮೊದಲ ದಿನ ಕೆಲವು ಅನಿವಾರ್ಯಗಳಿಂದ ಬರಲು ಸಾಧ್ಯವಾಗದಿದ್ದುದಕ್ಕಾಗಿ ಸಭಿಕರ ಕ್ಷಮೆಯನ್ನು ಬೇಡಿ, ಕನ್ನಡದಲ್ಲಿ ತಮಗಿರುವ ತೀವ್ರಾಭಿಮಾನವನ್ನು ವ್ಯಕ್ತಪಡಿಸಿದರು. ಸಮ್ಮೇಳನಕ್ಕಾಗಿ ವಿದ್ವತ್ಪೂರ್ಣವಾದ ತಮ್ಮ ಸಂದೇಶ ಭಾಷಣವನ್ನು ಅಪ್ಪಣೆ ಕೊಡಿಸಿದರು. (ಭಾಷಣವನ್ನು ಬೇರೆ ಕಡೆ ಕೊಟ್ಟಿದೆ.)

ಸಚಿವರಿಗೆ ಸಮ್ಮೇಳದ ಪರವಾಗಿ ಹಾರ ತುರಾಯಿಗಳನ್ನರ್ಪಿಸಲಾಯಿತು. ತರುವಾಯ "ನಾಟಕಗೋಷ್ಠಿ" ಯ ಅಧ್ಯಕ್ಷರಾದ ಶ್ರೀ ಜಿ. ಎಚ್. ವೀರಣ್ಣನವರು ಮುಕ್ತಾಯ ಭಾಷಣ ಮಾಡುತ್ತಾ, "ರಂಗಭೂಮಿಯ ಬಗ್ಗೆ ಸಾಕಷ್ಟು ಚರ್ಚೆಗಳೇನೊ ನಡೆಯಿತು. ಈ ಚಲನಚಿತ್ರದ ಆರ್ಭಟದಲ್ಲಿ ರಂಗಭೂಮಿ ಉಳಿದು ತಲೆ ಎತ್ತಿ ನಿಲ್ಲು ವಂತಾಗಬೇಕು. ನಟ–ನಟಿಯರಿಗೆ ಉತ್ತಮ ಜೀವನ ಕಲ್ಪನೆಯಾಗಬೇಕು. ಸಾಹಿತಿಗಳು ಹೊಸಹೊಸ ನಾಟಕಗಳನ್ನು ರಚಿಸಿ ರಂಗಭೂಮಿಯ ಸೇವೆ ಮಾಡಬೇಕು. ನಟ–ನಟಿ ಯರ ಸ್ವಾಭಾವಿಕ ಧ್ವನಿ ಪ್ರೇಕ್ಷಕರಿಗೆ ಕೇಳಿಸಿ, ಅವರ ಪ್ರತ್ಯಕ್ಷ ಅಭಿನಯ ಮನಹೊಕ್ಕು, ಜನಜೀವನ ಸಂಸ್ಕೃತಿಯನ್ನು ಅಭಿವೃದ್ಧಿಗೊಳಿಸಬೇಕು. ನಾಟಕ ಕಲೆ ದೇಶದಾದ್ಯಂ ತವೂ ಬೆಳಗಬೇಕು. ಅದಕ್ಕಾಗಿ ಎಲ್ಲೆಡೆಗಳಲ್ಲಿಯೂ, ಕಲಾಕ್ಷೇತ್ರಗಳ, ರಂಗಮಂದಿರಗಳ, ನಾಟಕ ವಿಲಾಸಿ ಸಂಸ್ಥೆಗಳ ಉದಯವಾಗಬೇಕು. ಈ ಕಾರ್ಯಕ್ಕೆ ಕೇಂದ್ರ ಮತ್ತು ಪ್ರಾಂತ್ಯ ಸರ್ಕಾರಗಳವರು ಹೆಚ್ಚಾಗಿ ನೆರವನ್ನು ನೀಡಬೇಕು" ಎಂದು ಹೇಳಿದರು.

ಸಮ್ಮೇಳನಾಧ್ಯಕ್ಷರಾದ ಶ್ರೀ ಆದ್ಯ ರಂಗಾಚಾರ್ಯ ಅವರು ಮಾತನಾಡುತ್ತಾ "ನಾನು ಶ್ರೀ ವೀರಣ್ಣನವರನ್ನು ನೋಡಿದ್ದು ಇದೇ ಮೊದಲು. ಮೊದಲೇ ನೋಡಿದ್ದರೆ ಶಾರದಮ್ಮನ ದೃಷ್ಟಿ ತಪ್ಪಿಸಿಕೊಂಡು, ಅವರ ನಾಟಕ ಕಂಪೆನಿಗೆ ಸೇರುತ್ತಿದ್ದೆ. ಶ್ರೀ ವೀರಣ್ಣನವರು 60 ವರ್ಷಗಳ ಕನ್ನಡ ರಂಗಭೂಮಿಯ ಇತಿಹಾಸವನ್ನು ವರ್ಣಿಸಿ ಹೇಳಿ ದ್ದಾರೆ. ಅವರು ದಯವಿಟ್ಟು ಅದನ್ನು ವಿಸ್ತಾರವಾಗಿ ಬರೆಯಬೇಕೆಂದು ನಾನು ವೈಯಕ್ತಿ ಕವಾಗಿ ಅವರನ್ನು ಪ್ರಾರ್ಥಿಸುತ್ತೇನೆ.

"ಭಾರತದ ರಂಗಭೂಮಿಗಳಲ್ಲೆಲ್ಲಾ ಕನ್ನಡ ರಂಗಭೂಮಿ ಬಹಳ ಪ್ರಾಚೀನ ವಾದುದು. ಅನೇಕ ಕಾರಣಗಳ ಸಲುವಾಗಿ ಅದು ಹಿಂದೆ ಬಿದ್ದಿದೆ. ಅದರ ಪುನರುದ್ಧಾರ ಕಾರ್ಯ ಈಗ ಆಗಬೇಕಾಗಿದೆ. ಕನ್ನಡಿಗರೆಲ್ಲರೂ ಈ ಕಾರ್ಯಕ್ಕೆ ಸರ್ವಸಹಾಯ ಮಾಡ ಬೇಕು" ಎಂದು ಹೇಳಿದರು.

ರಾಷ್ಟ್ರಗೀತೆಯೊಡನೆ ಪ್ರಾತಃಕಾಲದ ಕಾರ್ಯಕಲಾಪ ಮುಗಿಯಿತು.

**ಮಧ್ಯಾಹ್ನದ ಕಾರ್ಯಕ್ರಮ :—**

ಮಧ್ಯಾಹ್ನ 3–30ಕ್ಕೆ ಮಹಿಳಾ ಗೋಷ್ಠಿ ಶ್ರೀಮತಿ ಪುಟ್ಟಮ್ಮ ಪಾಟೀಲರ ಅಧ್ಯಕ್ಷತೆ ಯಲ್ಲಿ ಬಹು ಯಶಸ್ವಿಯಾಗಿ ನಡೆಯಿತು. ಸಭಾಂಗಣದಲ್ಲಿ ಮುಕ್ಕಾಲು ಮೂರುವೀಸ ಪಾಲು ರಾಯಚೂರು ನಗರದ ಮಹಿಳೆಯರು ಸೇರಿ ಸಭೆಗೊಂದು ಅಪೂರ್ವ ಕಳೆಯನ್ನು ತುಂಬಿದ್ದರು. ಮಹನೀಯರೆಲ್ಲರೂ ಹಿಂದುಗಡೆ ಪೀಠಗಳನ್ನಲಂಕರಿಸಿ, ಕಾರ್ಯಕ್ರಮಗಳನ್ನು ವೀಕ್ಷಿಸಿ, ಭಾಷಣ ಗಳನ್ನು ಕೇಳಿ ತಮ್ಮ ಸಂತೋಷವನ್ನು ವ್ಯಕ್ತಪಡಿಸುತ್ತಿದ್ದರು.

ಪ್ರಾರ್ಥನೆಯಾದ ನಂತರ ಕುಮಾರಿ ನಲಿನೀದೇವಿ ಅವರು ಮಹಿಳಾ ಗೋಷ್ಠಿಯ ಅಧ್ಯಕ್ಷ ರನ್ನೂ, ಸಭೆಯಲ್ಲಿ ಸೇರಿದ್ದ ಮಹಿಳೆಯರನ್ನೂ, ಮಹನೀಯರನ್ನೂ ಸ್ವಾಗತಿಸಿದರು. ಆ ಬಳಿಕ ಗೋಷ್ಠಿಯ ಅಧ್ಯಕ್ಷರು ಮಹಿಳಾಲೋಕಕ್ಕೆ ಸಂಬಂಧಿಸಿದ ಅನೇಕ ವಿಚಾರಗಳನ್ನೊಳಗೊಂಡ ತಮ್ಮ ಅಧ್ಯಕ್ಷ ಭಾಷಣವನ್ನು ಅಪ್ಪಣೆ ಕೊಡಿಸಿದರು. (ಭಾಷಣವನ್ನು ಬೇರೆಕಡೆ ಕೊಟ್ಟಿದೆ)

ಆಮೇಲೆ ಶ್ರೀಮತಿ ವಿನೋದಬಾಯಿ ಎಂ. ಎ. ಅವರು "ಹೊನ್ನಮ್ಮನ ಕಾವ್ಯ" ಎಂಬ ವಿಷಯವನ್ನು ಕುರಿತೂ, ಶ್ರೀಮತಿ ಇಂದಿರಾಬಾಯಿ, ಎಂ.ಎ. ಅವರು, "ಸಾಹಿತ್ಯಕ್ಕೆ ಸ್ತ್ರೀಯರ

ಸೇವೆ" ಎಂಬುದನ್ನು ಕುರಿತೂ, ಕಾದಂಬರಿಕಾರರಾದ ಶ್ರೀಮತಿ ತ್ರಿವೇಣಿ ಅವರು "ಸ್ತ್ರೀಯರ ಸಾಹಿತ್ಯ ಸೇವೆ ಮತ್ತು ಅದರ ಸಮಸ್ಯೆಗಳು" ಎಂಬ ವಿಷಯವನ್ನು ಕುರಿತೂ, ಶ್ರೀಮತಿ ವಿಮಲಾ ಬಾಯಿ ಮೇಲುಕೋಟೆ ಅವರು "ಸಾಹಿತ್ಯ ಮತ್ತು ಸಂಸ್ಕೃತಿ ಕ್ಷೇತ್ರಗಳಲ್ಲಿ ಸ್ತ್ರೀಯರ ಪಾತ್ರ" ಎಂಬ ವಿಷಯವನ್ನು ಕುರಿತೂ ಸ್ವಾರಸ್ಯವಾಗಿ ಭಾಷಣವನ್ನು ಮಾಡಿದರು. (ಈ ಭಾಷಣಗಳನ್ನೆಲ್ಲಾ ಬೇರಕಡೆ ಕೊಟ್ಟಿದೆ). ಇವರೇ ಅಲ್ಲದೆ, ಶ್ರೀಮತಿಗಳಾದ ಗಿರಿಜಾದೇವಿ, ಸಿದ್ದಮ್ಮ ಪಾಟೇಲ್, ಇವರುಗಳೂ ಮಹಿಳೆಯರ ವಿದ್ಯಾಭ್ಯಾಸ, ಕರ್ತವ್ಯ ಮತ್ತು ಸಮಾಜ ಕ್ಷೇತ್ರಗಳ ವಿಷಯವಾಗಿ ಭಾಷಣ ಮಾಡಿದರು.

ಶ್ರೀಮತಿ ಫಲಗೂಬಾಯಿ ಅವರು ಕೆಲವು ಕನ್ನಡ ಗೀತೆಗಳನ್ನು ಮಧುರವಾಗಿ ಗಾಯನ ಮಾಡಿದರು. ಬಳಿಕ ಶ್ರೀಮತಿ ಇಂದು ಆದ್ಯ ಅವರು ಕನ್ನಡ ಕವಿವರ್ಯ ಶ್ರೀ ಬೇಂದ್ರೆ ಅವರ ಕೆಲವು ಕವನಗಳನ್ನು ಹಾಡಿ ಸಭಿಕರನ್ನು ಸಂತೋಷಗೊಳಿಸಿದರು. ಶ್ರೀಮತಿ ನಲಿನೀದೇವಿ ಅವರು ವಂದನಾರ್ಪಣೆ ಮಾಡಿದರು. ಇದಾದ ತರುವಾಯ ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ ಜಿ. ವೆಂಕಟಸುಬ್ಬಯ್ಯನವರು ಪರಿಷತ್ತಿನ ಪರವಾಗಿ ಮಹಿಳಾ ಗೋಷ್ಠಿಯ ಅಧ್ಯಕ್ಷರಿಗೂ, ಗೋಷ್ಠಿಯಲ್ಲಿ ಭಾಷಣಗಳನ್ನು ಮಾಡಿದ ಮಾನ್ಯ ಸೋದರಿಯರಿಗೂ ವಂದನೆಗಳನ್ನರ್ಪಿಸಿದರು. ಇಲ್ಲಿಗೆ ಮಹಿಳಾ ಗೋಷ್ಠಿ ಮುಕ್ತಾಯವಾಯಿತು.

ಸಂಜೆ ಪರಿಷತ್ತಿನ "ವಾರ್ಷಿಕಾಧಿವೇಶನ" ನಡೆಯಬೇಕಾಗಿತ್ತು. ನಡೆಯಲು ಎಲ್ಲ ಏರ್ಪಾಡುಗಳನ್ನೂ ಮಾಡಲಾಗಿತ್ತು. ಸಭೆಗೆ ಸಾಕಷ್ಟು ಮಂದಿ ಸದಸ್ಯರು ಬಾರದೇಹೋದುದರಿಂದ, ಪರಿಷತ್ತಿನ ನಿಬಂಧನೆಗಳ ಪ್ರಕಾರ ಫೆಬ್ರವರಿ 5ನೇ ತಾರೀಖಿನ ದಿನ ಸೇರತಕ್ಕದ್ದೆಂದು ತೀರ್ಮಾನವಾಯಿತು.

ರಾತ್ರಿ ಸುಮಾರು 7–30ಕ್ಕೆ ಸಮ್ಮೇಳನದ ಬಹಿರಂಗ ಅಧಿವೇಶನ ನಡೆಯಿತು. ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ ಜಿ. ವೆಂಕಟಸುಬ್ಬಯ್ಯನವರು ಸ್ವಾಗತ ಭಾಷಣ ಮಾಡಿದರು. ಬಳಿಕ ಮಲೆಯಾಳ ಸಾಹಿತ್ಯ ಪರಿಷತ್ತಿನ ಪ್ರತಿನಿಧಿಗಳಾಗಿ ಬಂದಿದ್ದ, ಕೇರಳ ವಿಶ್ವವಿದ್ಯಾನಿಲಯದ ಮಲೆಯಾಳಂ ಪ್ರಾಧ್ಯಾಪಕರಾದ ಶ್ರೀ ಗುಪ್ತನ್ ನಾಯರ್ ಅವರು ಮಲೆಯಾಳ ಸಾಹಿತ್ಯದ ಇಂದಿನ ದರ್ಶನದ ಬಗ್ಗೆ ಮಲೆಯಾಳಿ ಭಾಷೆಯಲ್ಲಿಯೇ ಸ್ವಾರಸ್ಯವಾಗಿ ಮಾತನಾಡಿದರು. ಮಂಗಳೂರಿನ ಸೈಂಟ್ ಎಲೋಸಿಯಸ್ ಕಾಲೇಜಿನ ಕನ್ನಡ ಅಧ್ಯಾಪಕರಾದ ಶ್ರೀ ಬಿ. ಶಂಕರಭಟ್ಟರು ಅವರ ಭಾಷಣವನ್ನು ಕನ್ನಡದಲ್ಲಿ ಅನುವಾದ ಮಾಡಿ ಹೇಳಿದರು. "ಶ್ರೀಯುತರು ಪರಸ್ಪರ ಭಾಷಾ ಬಾಂಧವ್ಯವನ್ನು ಬೆಳೆಸುವ ಸಂಕಲ್ಪ ಇಂತಹ ಸಮ್ಮೇಳನಗಳಿಗೆ ಇರುವುದು ತುಂಬ ಅಭಿನಂದನೀಯ" ಎಂದು ಹೇಳಿ "ಇಂದಿನ ಮಲೆಯಾಳ ಸಾಹಿತ್ಯದಲ್ಲಿ ಹಿಂದುಗಳೇ ಅಲ್ಲದೆ ಮುಸಲ್ಮಾನರೂ ಸಾಹಿತ್ಯ ಸೃಷ್ಟಿಯನ್ನು ಮಾಡುತ್ತಿದ್ದಾರೆಂದೂ; ಅವರ ಕೃತಿಗಳಲ್ಲಿ ಇಂದಿನ ಹೊಸಹೊಸ ಭಾವನಾ ವೈಖರಿಗಳೆಲ್ಲಾ ಮೂಡಿ ಬಂದಿವೆ" ಎಂದೂ ತಿಳಿಸಿದರು. "ಹಿಂದುಗಳು ಮುಸಲ್ಮಾನ್ ಸಮಾಜದ ಬಗ್ಗೆ ಹಲವಾರು ಕೃತಿಗಳನ್ನು ರಚಿಸಿರುವುದಾಗಿಯೂ ಮುಸಲ್ಮಾನ್ ಬಂಧುಗಳೂ ಆ ಕೃತಿಗಳನ್ನು ತಮ್ಮವರೇ ಬರೆದರೆಂಬಷ್ಟು ಅಭಿಮಾನ ಪಡುತ್ತಿರುವುದಾಗಿಯೂ ತಿಳಿಸಿದರು. ಈ ಕಡೆ ಬೇಂದ್ರೆ, ಮಾಸ್ತಿ, ಗೋಕಾಕ್, ಮೂರ್ತಿರಾವ್ ಮುಂತಾದವರೂ, ಇತರ ಸಾಹಿತಿಗಳೂ ಮಾಡುತ್ತಿರುವ ಉತ್ತಮ ಆಧುನಿಕ ಸಾಹಿತ್ಯದ ಸೃಷ್ಟಿಯೇ ಕೇರಳದಲ್ಲಿಯೂ ತಕ್ಕಮಟ್ಟಿಗೆ ನಡೆಯುತ್ತಿದೆ" ಎಂದು ಹೇಳಿದರು. ತಾವು ಈ ಸಮ್ಮೇಳನಕ್ಕೆ ಬಂದು ತುಂಬ ಉಪಕೃತರಾಗಿರುವುದಾಗಿ ತಿಳಿಸಿ, ತಮಗೆ ಭಾಷಣ ಮಾಡುವ ಅವಕಾಶವಿತ್ತ ಸಮ್ಮೇಳನದ ಮತ್ತು ಪರಿಷತ್ತಿನ ಅಧಿಕಾರಿಗಳನ್ನು ವಂದಿಸಿದರು.

## ಸಮ್ಮೇಳನಾಧಿವೇಶನ

ತಾರೀಕು 26–12–55ರಂದು ಸಮ್ಮೇಳನಾಧಿವೇಶನ ನಡೆಯಿತು. ಶ್ರೀ ಆದ್ಯ ರಂಗಾಚಾರ್ಯ ಅವರು ಅಧ್ಯಕ್ಷತೆ ವಹಿಸಿದ್ದರು. ಅಧಿವೇಶನದಲ್ಲಿ ಅಂಗೀಕೃತವಾದ ನಿರ್ಣಯಗಳನ್ನು ಈ ಕೆಳಗೆ ಕೊಟ್ಟಿದೆ.

**25–12–55ರ ಸಂಜೆ ವಿಷಯ ನಿಯಾಮಕ ಸಮಿತಿಯಲ್ಲಿ ಒಪ್ಪಿಗೆ ಪಡೆದು ತಾರೀಖು 26ರಂದು ಸಮ್ಮೇಳನದ ಬಹಿರಂಗಾಧಿವೇನದಲ್ಲಿ ಚರ್ಚಿತವಾಗಿ**

### ಅಂಗೀಕೃತವಾದ ನಿರ್ಣಯಗಳು.

1. ಈ ಕೆಳಗೆ ಕಾಣಿಸಿದ ಮಹನೀಯರು ದೈವಾಧೀನರಾದುದಕ್ಕಾಗಿ ಈ ಸಮ್ಮೇಳನವು ದುಃಖವನ್ನು ವ್ಯಕ್ತಪಡಿಸಿ ಅವರ ಕುಟುಂಬ ವರ್ಗದವರಿಗೆ ತನ್ನ ಅನುತಾಪವನ್ನು ಸೂಚಿಸುತ್ತದೆ.

(1) ಧರ್ಮಸ್ಥಳದ ಶ್ರೀ ಮಂಜಯ್ಯ ಹೆಗ್ಗಡೆ ಅವರು.
(2) ಡಾಕ್ಟರ್ ಎನ್. ಎಸ್. ನಾರಾಯಣಶಾಸ್ತ್ರಿ ಅವರು.
(3) ಶ್ರೀ ಎಸ್. ಜಿ. ಶಾಸ್ತ್ರಿ ಅವರು.

ಸ್ವೀಕೃತವಾಯಿತು.

2. ಸದ್ಯದಲ್ಲೇ ರಚಿತವಾಗಲಿರುವ ಕನ್ನಡ ಪ್ರಾಂತಕ್ಕೆ ಕರ್ನಾಟಕ ಎಂಬ ಹೆಸರೇ ತಕ್ಕುದೆಂದು ಈ ಸಮ್ಮೇಳನವು ಅಭಿಪ್ರಾಯ ಪಡುತ್ತದೆ.

ಸೂಚಕರು: ಶ್ರೀ ವ್ಯಾಕರಣ ತೀರ್ಥ ಚಂದ್ರಶೇಖರ ಶಾಸ್ತ್ರಿಗಳು.
ಅನುಮೋದಕರು: ಶ್ರೀ ಬಿ. ಶಂಕರಭಟ್ಟ, ಅವರು.

ಸ್ವೀಕೃತವಾಯಿತು.

3. ಕನ್ನಡ ಲಿಪಿಸುಧಾರಣೆಯ ಸಮಸ್ಯೆಯನ್ನು ಪರಿಷತ್ತು ಕೈಗೆ ತೆಗೆದುಕೊಂಡು ಲೈನೋಟೈಪ್ ತಯಾರಿಕೆಗಾಗಿ ಅತಿ ಆವಶ್ಯಕವಾದ ಮತ್ತು ಅತ್ಯಂತ ಕಡಮೆಯಾದ ಸುಧಾರಣೆಗಳೇನೆಂಬುದರ ಬಗ್ಗೆ ಒಂದು ನಿರ್ದಿಷ್ಟವಾದ ನಿಲುವಿಗೆ ಬಂದು ಅದು ಕಾರ್ಯಗತವಾಗುವಂತೆ ತಕ್ಕ ಕಾರ್ಯಕ್ರಮವನ್ನು ಕೈಕೊಳ್ಳಬೇಕೆಂದು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಸೂಚಕರು: ಶ್ರೀ ಮ. ನರಸಿಂಹಮೂರ್ತಿ ಅವರು.
ಅನುಮೋದಕರು: ಶ್ರೀ ವ್ಯಾಕರಣತೀರ್ಥ ಚಂದ್ರಶೇಖರ ಶಾಸ್ತ್ರಿಗಳು.

ಸ್ವೀಕೃತವಾಯಿತು.

4. ಪ್ರಾಂತ ಪುನರ್ವಿಂಗಡಣಾ ಸಮಿತಿಯವರು ಕರ್ನಾಟಕ ಪ್ರಾಂತ ನಿರ್ಮಾಣವಾಗಬೇಕೆಂದು ಶಿಫಾರಸು ಮಾಡಿರುವುದಕ್ಕಾಗಿ ಈ ಸಮ್ಮೇಳನವು ಅವರನ್ನು ಅಭಿನಂದಿಸುತ್ತದೆ. ಆದರೆ ಈ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು ತಾರೀಖು 21–10–55ರಲ್ಲಿ

ಕೊಟ್ಟಿರುವ ಹೇಳಿಕೆಯನ್ನೂ, ತಾರೀಖು 25-11-55ರಲ್ಲಿ ಪರಿಷತ್ತಿನ ಕಾರ್ಯ ಸಮಿತಿಯು ಮಾಡಿರುವ ನಿರ್ಣಯವನ್ನೂ ಪೂರ್ಣವಾಗಿ ಸಮರ್ಥಿಸುತ್ತದೆ.

ಸೂಚಕರು: ಶ್ರೀ ಡಿ. ಎಂ. ಸೊಗುವೀರಶರ್ಮ ಅವರು.
ಅನುಮೋದಕರು: ಶ್ರೀ ಸಿದ್ಧರಾಮಪ್ಪನವರು.

ಸ್ವೀಕೃತವಾಯಿತು.

5. ಕನ್ನಡ ಸಾಹಿತ್ಯ ಪರಿಷತ್ತು ಪ್ರತಿ ವರುಷವೂ ನಮ್ಮ ನಾಡಿನಲ್ಲಿ ಪ್ರಕಟವಾಗುವ ಗ್ರಂಥಗಳ ಪಟ್ಟಿಯನ್ನು ಪ್ರಕಟಿಸುವ ಕಾರ್ಯವನ್ನು ಕೈಗೊಳ್ಳಬೇಕಾಗಿ ಈ ಸಮ್ಮೇಳನವು ಆಶಿಸುತ್ತದೆ.

ಸೂಚಕರು: ಶ್ರೀ ಅ. ನ. ಸುಬ್ಬರಾವ್ ಅವರು.
ಅನುಮೋದಕರು: ಶ್ರೀ ಮ. ನರಸಿಂಹಮೂರ್ತಿ ಅವರು

ಸ್ವೀಕೃತವಾಯಿತು.

6. ಈಗ ನಿರ್ಮಾಣವಾಗಲಿರುವ ಕರ್ನಾಟಕದ ಪ್ರಾಂತದ ದೃಷ್ಟಿಯಿಂದ ಕರ್ನಾಟಕಕ್ಕೆ ಪ್ರತ್ಯೇಕವಾದ ಒಂದು ಪ್ರಾಚ್ಯ ಸಂಶೋಧನ ಕೇಂದ್ರವನ್ನು ಕೊಡಿಸಬೇಕೆಂದು ಕೇಂದ್ರ ಸರಕಾರವನ್ನು ಈ ಸಮ್ಮೇಳನವು ಪ್ರಾರ್ಥಿಸುತ್ತದೆ.

ಸೂಚಕರು: ಶ್ರೀ ಎನ್. ಅನಂತರಂಗಾಚಾರ್ ಅವರು.
ಅನುಮೋದಕರು: ಶ್ರೀ ಡಿ. ಎಲ್. ನರಸಿಂಹಾಚಾರ್ ಅವರು.

ಸ್ವೀಕೃತವಾಯಿತು.

7. ಮಾಧ್ಯಮಿಕ ಶಿಕ್ಷಣದಲ್ಲಿ ಸಂಸ್ಕೃತ ಭಾಷೆಯನ್ನು ಕನ್ನಡಕ್ಕೆ ಪೋಷಕವಾಗುವಂತೆ ಪಠ್ಯ ವಿಷಯವನ್ನಾಗಿ ಮಾಡಬೇಕೆಂದು ಈ ಸಮ್ಮೇಳನವು ಸರಕಾರವನ್ನು ಕೇಳಿಕೊಳ್ಳುತ್ತದೆ.

ಸೂಚಕರು: ಶ್ರೀ ಸೋಮಶೇಖರಶರ್ಮ ಅವರು.
ಅನುಮೋದಕರು: ಶ್ರೀ ನಾರಾಯಣರಾವ ತಾಳೀಕೋಟಿ.

ಸ್ವೀಕೃತವಾಯಿತು.

8. ಹೊಸದಾಗಿ ಅಸ್ತಿತ್ವದಲ್ಲಿ ಬರಲಿರುವ ಕರ್ನಾಟಕ ಪ್ರಾಂತದ ಗಡಿಗಳ ನಿರ್ಧಾರವನ್ನು ಮಾಡುವ ಸಂದರ್ಭದಲ್ಲಿ ಆದವಾನಿ, ಆಲೂರ, ರಾಯದುರ್ಗ ತಾಲ್ಲೂಕುಗಳನ್ನು ನ್ಯಾಯವಾಗಿ ಕರ್ನಾಟಕದಲ್ಲಿ ಸೇರಿಸುವ ಬಗ್ಗೆ ವಿಚಾರ ಮಾಡಬೇಕೆಂದು ಕೇಂದ್ರ ಸರಕಾರವನ್ನು ಈ ಸಮೇಳನವು ಕೇಳಿಕೊಳ್ಳುತ್ತದೆ.

ಸೂಚಕರು: ಶ್ರೀ ವೀರಣ್ಣ ಕೊಟ್ಟೂರ.
ಅನುಮೋದಕರು: ಶ್ರೀ ಚನ್ನಬಸಪ್ಪ ವಕೀಲ ಚಿಟ್ಟರೂ.

ಸ್ವೀಕೃತವಾಯಿತು,

ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ ಜಿ. ವೆಂಕಟಸುಬ್ಬಯ್ಯನವರು ವಂದನಾರ್ಪಣೆ ಮಾಡಿದ ನಂತರ ಬಹಿರಂಗಾಧಿವೇಶನದ ಕಾರ್ಯಕ್ರಮ ಮುಕ್ತಾಯವಾಯಿತು.

ರಾತ್ರಿ 9-30 ಗಂಟೆಗೆ ಮನೋರಂಜನ ಕಾರ್ಯಕ್ರಮ ನಡೆಯಿತು. ಧಾರವಾಡದ "ನಾಟಕ ವಿಲಾಸಿ ಸಂಸ್ಥೆ" ಯವರು (Amiture Association) ಶ್ರೀರಂಗರ "ಶೋಕ ಚಕ್ರ" ಎಂಬ ನಾಟಕವನ್ನು ಪ್ರೇಕ್ಷಕರ ಮನಮೆಚ್ಚುವಂತೆ ಅಭಿನಯಿಸಿದರು. ಪ್ರಸಿದ್ಧ ಕಾದಂಬರಿಕಾರರಾದ ಶ್ರೀ ಇನಾಂದಾರ್ ದಂಪತಿಗಳು, ಗುರುರಾಜ ಬೈಚವಾಳ, ಜಿ. ವಿ. ಹಿರೇಮಠ, ಕೆ. ಜಿ. ಹಲಸಗಿ, ಶರತ್ಕುಮಾರ ಧರ್ಮಟ್ಟಿ, ವೆಂ. ಮು. ಜೋಷಿ, ಆರ್. ವಿ. ಕುಲಕರ್ಣಿ, ವಿ. ಜಿ. ಕುಲಕರ್ಣಿ, ಬಿ. ಕೆ. ಕಮಲಾಪೂರ, ಕೆ. ವಿ. ಜೋಷಿ ಅವರುಗಳು ನಾಟಕದ ವಿವಿಧ ಪಾತ್ರಗಳನ್ನು ಅಚ್ಚುಕಟ್ಟಾಗಿ ನಿರ್ವಹಿಸಿದರು. ಕುಮಾರಿ ಹೇಮಾ ಪೋತ್ದಾರ್ ಅವರು ನಾಟಕದ ಹಿನ್ನೆಲೆ ಸಂಗೀತವನ್ನೊದಗಿಸಿದರು.

ಶ್ರೀ ಶ್ರೀಪಾದರಾವ್ ಹಾನಗಲ್ ಅವರು ಏಕ ಪಾತ್ರಾಭಿನಯವನ್ನು ಪ್ರದರ್ಶಿಸಿದರು. ಜನಪದ ಗೀತೆಗಳನ್ನು ಹಾಡುವುದರಲ್ಲಿ ದಕ್ಷರಾದ ಶ್ರೀ ಶ್ರೀಶೈಲಂ ಅವರು ತಮ್ಮದೇ ಆದ ಕೆಲವು ಲಾವಣಿಗಳನ್ನು ಹಾಡಿ ಸಭಿಕರನ್ನು ತಣಿಸಿದರು.

ಇಲ್ಲಿಗೆ ಎರಡನೆಯ ದಿನದ ಕಾರ್ಯಕಲಾಪ ಮುಗಿಯಿತು.

**ಮೂರನೆಯ ದಿನದ ಕಾರ್ಯಕ್ರಮ ತಾ॥ 27-12-55**

ಸಾಹಿತ್ಯ ಸಮ್ಮೇಳನದ ಮೂರನೆಯ ದಿನದ ಕಾರ್ಯಕಲಾಪ ಲೇಖಕರ ಗೋಷ್ಠಿಯಿಂದ ಆರಂಭವಾಯಿತು. ಸುಪ್ರಸಿದ್ಧ ಕಾದಂಬರಿಕಾರರಾದ ಶ್ರೀ ನಿರಂಜನ (ಕುಳಕುಂದ ಶಿವರಾವ್) ಅವರು ಅಧ್ಯಕ್ಷತೆಯನ್ನು ವಹಿಸಿದ್ದರು. ಪ್ರಾರ್ಥನೆಯಾದ ಬಳಿಕ ಪರಿಷತ್ತಿನ ಕಾರ್ಯದರ್ಶಿ ಶ್ರೀ ಜಿ. ವೆಂಕಟಸುಬ್ಬಯ್ಯನವರು ಅಧ್ಯಕ್ಷರ ಪರಿಚಯವನ್ನು ಸಭೆಗೆ ಮಾಡಿಕೊಟ್ಟರು ಬಳಿಕ ಶ್ರೀ ನಿರಂಜನರು ಲೇಖಕರ ಮತ್ತು ಆಧುನಿಕ ಸಾಹಿತ್ಯದ ಅನೇಕ ಮುಖಗಳಲ್ಲಿಯ ಹಲವಾರು ವಿಚಾರಗಳನ್ನೊಳಗೊಂಡ ಅಧ್ಯಕ್ಷ ಭಾಷಣವನ್ನು ಮಾಡಿದರು. (ಭಾಷಣವನ್ನು ಬೇರೆಕಡೆ ಕೊಟ್ಟಿದೆ.)

ಅನಂತರ, ಸುಪ್ರಸಿದ್ಧ ಕಾದಂಬರೀಕಾರರೂ ಕರ್ನಾಟಕ ಕಾಲೇಜಿನ ಇಂಗ್ಲೀಷ್ ಪ್ರಾಧ್ಯಾಪಕರಾದ ಶ್ರೀ ವಿ. ಎಂ. ಇನಾಂದಾರ್, ಅವರು "ಕನ್ನಡ ಗದ್ಯ" ಎಂಬ ವಿಷಯವಾಗಿ ಉಪನ್ಯಾಸ ಮಾಡಿದರು. ಶ್ರೀಯುತರು, ಹಿಂದಿನ ಇಂದಿನ ಗದ್ಯದ ಬೆಳವಣಿಗೆ; ಅವುಗಳ ಹೊಳಹುಗಳು, ಮುಂದೆ ಅದರ ಉತ್ತಮ ಭವಿಷ್ಯಗಳ ಬಗ್ಗೆ ತಮ್ಮದೇ ಆದ ಉತ್ತಮ ವಿಚಾರ ಸರಣಿಯಿಂದ ಸಭಿಕರ ಮನಮೆಚ್ಚುವಂತೆ ವಿಮರ್ಶೆ ಮಾಡಿದರು. ಸುಮಾರು 1000 ವರ್ಷಗಳಿಂದ ಕನ್ನಡ ಗದ್ಯ ಪರಪುಷ್ಟವಾಗಿ ಬಾಳಿ 19ನೆಯ ಶತಮಾನದಲ್ಲಿ ರಾಜಕೀಯ ಆರ್ಥಿಕ, ಬದಲಾವಣೆಗಳ ನಿಮಿತ್ತವಾಗಿಯೂ, ಮುದ್ರಣ ಸೌಕರ್ಯದಿಂದಲೂ, ಕ್ರೈಸ್ತ ಹಿತೋಪದೇಶಕರ ಕಾರ್ಯ ಚಟುವಟಿಕೆಗಳ ಮತ್ತು ಭಾಷಾ ಸೇವೆಯ ಫಲವಾಗಿಯೂ ಅಭಿವೃದ್ಧಿಯ ಮೆಟ್ಟಲನ್ನು ಒಂದೊಂದಾಗಿ ಏರಲು ಅನುವಾಯಿತು. ಆ ಬಳಿಕ ಬ್ರಿಟಿಷರು ಏರ್ಪಡಿಸಿದ ಹೊಸ ವಿದ್ಯಾಭ್ಯಾಸದ ಕ್ರಮ ಪಾಶ್ಚಾತ್ಯ ಸಂಸ್ಕೃತಿಯ ಸಂಪರ್ಕ ಬೆಳೆದು ಬಂದಕಾರಣ ಇಂದು ನಮಗೆ ಕಾಣುತ್ತಿರುವ ವಾಸ್ತವಿಕ ದೃಷ್ಟಿ ಗದ್ಯದಲ್ಲಿ ಬೆಳೆದುಬಂದಿತು. 1930 ರಿಂದ 1940ರ ನಡುವೆ ಸಣ್ಣ ಪುಟ್ಟ ಗದ್ಯ ಪದ್ಯಗಳ ಬರವಣಿಗೆ ನಡೆದ 40-50 ವರ್ಷಗಳ ಕಾಲ, ಇದು ಕಾದಂಬರಿ ಯುಗವೆನ್ನುವಷ್ಟರ ಮಟ್ಟಿಗೆ ಗದ್ಯ ಸಾಹಿತ್ಯ ಬೆಳೆದಿದೆ. ಆದರೆ ಪ್ರಬಂಧ, ವಿಮರ್ಶೆ,

ಜೀವನ ಚರಿತ್ರೆ, ಪ್ರವಾಸ ಸಾಹಿತ್ಯ ಮೊದಲಾದ ಗದ್ಯ ಸಾಹಿತ್ಯದ ಹಲವಾರು ಪ್ರಕಾರಗಳು ಸಾಕಷ್ಟು ಬೆಳೆದುಬಂದಿಲ್ಲ. ಈ ಬಗೆಯ ಗದ್ಯ ಸಾಹಿತ್ಯದ ಸೃಷ್ಟಿಯ ಅಗತ್ಯ ಇಂದು ನಮ್ಮ ಜನಕ್ಕೆ ತುಂಬ ಇದೆ." ಎಂದು ಹೇಳಿ ತಮ್ಮ ಉಪನ್ಯಾಸವನ್ನು ಪರಿಸಮಾಪ್ತಿಗೊಳಿಸಿದರು.

ಬಳಿಕ, ಶ್ರೀ ತ. ಶ್ರೀಕಂಠಯ್ಯನವರು "ಸಣ್ಣ ಕಥೆಗಳು" ಎಂಬ ವಿಷಯವಾಗಿಯೂ, (ಭಾಷಣ ಬೇರೆಕಡೆ ಕೊಟ್ಟಿದೆ). ಶ್ರೀ ಮಾಸ್ತಿ ನರಸಿಂಗರಾವ್ ಅವರು "ಪದ್ಯ ಕಾವ್ಯ" ಎಂಬ ವಿಷಯವಾಗಿಯೂ, ಪ್ರೊ. ಹುಣಸಾಳ್ ಅವರು "ವಿಚಾರ ಸಾಹಿತ್ಯ" ಎಂಬ ವಿಷಯವಾಗಿಯೂ ಭಾಷಣಗಳನ್ನು ಮಾಡಿದರು.

ಆಮೇಲೆ ಶ್ರೀಗಳಾದ ಡಿ. ಮಾಣಿಕರಾವ್, ಎರ್. ಅನಂತರಂಗಾಚಾರ್, ಸೋಮ ಶೇಖರ ಶರ್ಮ, ಬಿ. ಸಿ. ರಾಮಚಂದ್ರಶರ್ಮ ಅವರು ಭಾಷಣಗಳನ್ನು ಮಾಡಿದರು.

ಶ್ರೀ ನಿರಂಜನರು ಪರಿಸಮಾಪ್ತಿ ಭಾಷಣವನ್ನು ಮಾಡುತ್ತಾ, "ನವ್ಯಕಾವ್ಯ"ದ ಮೇಲೆ ಶ್ರೀ ಬಿ. ಸಿ. ರಾಮಚಂದ್ರಶರ್ಮ ಅವರ, ಚರ್ಚೆಯನ್ನು ಪ್ರಸ್ತಾಪಿಸಿ, ಅಧ್ಯಕ್ಷ ಭಾಷಣದ ಮೇಲೆ ಚರ್ಚೆನಡೆದುದು ಒಳ್ಳೆಯದೇ ಆಯಿತೆಂದು; ಸಾಹಿತಿಗಳ ಪುರೋಭಿವೃದ್ಧಿಯನ್ನು ತಾವು ಆಶಿಸುವುದಾಗಿಯೂ ತಿಳಿಸಿದರು. ವಂದನಾರ್ಪಣೆಯೊಡನೆ ಲೇಖಕ ಗೋಷ್ಠಿ ಮುಕ್ತಾಯ ವಾಯಿತು.

**ಮಧ್ಯಾಹ್ನದ ಕಾರ್ಯಕ್ರಮ :—**

ಮಧ್ಯಾಹ್ನ 3 ಗಂಟೆ ಹೊತ್ತಿಗೆ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಎ. ಎರ್. ಮೂರ್ತಿ ರಾಯರ ಅಧ್ಯಕ್ಷತೆಯಲ್ಲಿ ಲೇಖಕರ ಪರಸ್ಪರ ಪರಿಚಯ ಗೋಷ್ಠಿ ನಡೆಯಿತು. ಸುಮಾರು 30–40 ಮಂದಿ ಕನ್ನಡ ಲೇಖಕರು ಸೇರಿದ್ದರು. ಮೈಸೂರಿನ ಲೇಖಕರನ್ನು ಶ್ರೀ ಎ. ಎರ್. ಮೂರ್ತಿರಾಯ ರವರೇ ಪರಿಚಯ ಮಾಡಿಕೊಟ್ಟರು. ಹೈದರಾಬಾದು, ಧಾರವಾಡ, ಮೊದಲಾದ ಕಡೆಗಳಿಂದ ಬಂದಿದ್ದ ಲೇಖಕರ ಪರಿಚಯವನ್ನು ಆಯಾ ಕಡೆಯವರೇ ಮಾಡಿಕೊಟ್ಟರು. ಉಪಹಾರ ವಿನಿ ಯೋಗವಾದಮೇಲೆ ಪರಿಚಯ ಗೋಷ್ಠಿ ಪರಿಸಮಾಪ್ತಿಯಾಯಿತು.

ಸಂಜೆ 4 ಗಂಟೆಗೆ ಮತ್ತೆ ಸಮ್ಮೇಳನ ಸೇರಿತು. ಕರ್ನಾಟಕದ ಸುಪ್ರಸಿದ್ಧ ಸಾಹಿತಿ ಗಳೂ, 1934ರಲ್ಲಿ ರಾಯಚೂರಿನಲ್ಲಿ ನಡೆದ 21ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರೂ ಆಗಿದ್ದ, ದಿ|| ಪಂಜೆ ಮಂಗೇಶರಾಯರ ಭಾವಚಿತ್ರದ ಅನಾವರಣವನ್ನು, ಶ್ರೀ ಕೋ. ಶಿವರಾಮ ಕಾರಂತರು ಮಾಡಿದರು.

ಶ್ರೀಯುತರು ಭಾವಚಿತ್ರವನ್ನು ಅನಾವರಣ ಮಾಡುತ್ತಾ "ಶ್ರೀಯುತ ಪಂಜೆಯವರು, ಕರ್ನಾಟಕ ಸಾಹಿತ್ಯದ ಪಿತಾಮಹರಲ್ಲೊಬ್ಬರು. ಅವರು ಮಾಡಿದ ವಿವಿಧ ಮುಖಗಳಲ್ಲಿನ ಸಾಹಿತ್ಯಸೇವೆ ಇಂದಿಗೂ ಅಚ್ಚಳಿಯದಂತಿದೆ. ಕರ್ನಾಟಕ ಸಾಹಿತ್ಯ ಪ್ರಪಂಚದಲ್ಲಿನ, ಸಣ್ಣ ಕತೆಗಳ, ಬಾಲ ಸಾಹಿತ್ಯದ ಜನಕರೆಂದು ಅವರ ಭಾವಚಿತ್ರವನ್ನು ಅನಾವರಣ ಮಾಡಲು ಆನಂದವಾಗುತ್ತದೆ" ಎಂದು ಹೇಳಿ, ಭಾವಚಿತ್ರದ ಅನಾವರಣವನ್ನು ಮಾಡಿದರು.

ಆಮೇಲೆ ಶ್ರೀ ಆದ್ಯ ರಂಗಾಚಾರ್ಯರ ನೇತೃತ್ವದಲ್ಲಿ ಕಾವ್ಯಾವಾಚನ ಮೊದಲಾಯಿತು. ನವ್ಯಕವಿ ಶ್ರೀ ಬಿ. ಸಿ. ರಾಮಚಂದ್ರಶರ್ಮ ಅವರು, "ನಿರಾಶ್ರಿತನ ಹಾಡು" ಎಂಬ ಕವಿತೆ ಯನ್ನೂ, ಶ್ರೀ ಕೆ. ದೇಶಪಾಂಡೆ ಅವರು, "ಹೊಸ ದಿನ" ಎಂಬ ಕವಿತೆಯನ್ನೂ, ಶ್ರೀ ಬಿ. ಎಚ್. ಶ್ರೀಧರರ ಕೆಲವು ಕವನಗಳನ್ನು ಹಾಡಿದರು. ಬೆಂಗಳೂರಿನ ಶ್ರೀ ಟಿ. ಕೆ. ಶ್ಯಾಮರಾವ್ ಅವರು

ಕೆಲವು ಕನ್ನಡ ಲಾವಣಿಗಳನ್ನೂ, ಶ್ರೀ ಶ್ರೀ ಶೈಲ ವಿನರು ತಮ್ಮ ಅನುವಾದಿತ "ಗೀತಾ – ಬಾಪೂ ದರ್ಶನ"ವನ್ನೂ ವಾಚನ ಮಾಡಿದರು. ಶ್ರೀಗಳಾದ ಹುಸೇನ ಸಾಹೇಬ್ ನರೇಗಲ್, ಶೇಷಗಿರಿ ಹೋಳಿ, ಗುಲಾಬರಸೊಲ ಸಾಹೇಬ್, ಕೆ. ಎಂ. ಲೋಣಿಕರ್, ಸೂಗೂರ್‌ಶರ್ಮ, ಷಡಕ್ಷರಿ ಕವಿ, ಬೈಚವಾಳ, ಹನುಮಂತರಾವ ಹೆಲವಾಳ್, ಇವರು ಕೆಲವು ಕವನಗಳನ್ನೂ ಓದಿದರು.

**ಸಮ್ಮೇಳನಾಧ್ಯಕ್ಷರ ಮುಕ್ತಾಯ ಭಾಷಣ :—**

ಕಾವ್ಯವಾಚನವಾದ ಬಳಿಕ, ಸಮ್ಮೇಳನಾಧ್ಯಕ್ಷರಾದ ಶ್ರೀ ಆದ್ಯ ರಂಗಾಚಾರ್ಯ ಅವರು, ತಮ ಮುಕ್ತಾಯ ಭಾಷಣವನ್ನು ಅಪ್ಪಣೆ ಕೊಡಿಸಿದರು. ಶ್ರೀಯುತರು ತಮ್ಮ ಭಾಷಣ ದಲ್ಲಿ "ಇಂಥಾ ಸಮ್ಮೇಳನಗಳು ಮುಗಿದದಂತರ ಏನಾಯಿತು? ಎಂಬುದರ ಬಗ್ಗೆ ಎಲ್ಲರೂ ಯೋಚಿಸ ಬಹುದು. ಪ್ರಶ್ನೆ ಹಾಕಬಹುದು. ಇಷ್ಟು ಮಂದಿ ಕನ್ನಡಿಗರು ಒಕ್ಕಡೆ ಸೇರಿ ಕನ್ನಡ ಸಾಹಿತ್ಯದ ಬಗ್ಗೆ ತಮ್ಮ ಆನಂದವನ್ನು ವ್ಯಕ್ತಪಡಿಸಿ, ಶಾಂತಿ ಸಮಾಧಾನದಿಂದ ಹಲವಾರು ಮಂದಿ ಸಾಹಿತಿ ಗಳ ಭಾಷಣಗಳನ್ನು ಕೇಳಿದೆವೆಂಬುದೇ ಒಂದು ಮಹತ್ವದ ವಿಚಾರ.

"ಜನರಿಗೆ ಏನಾದರೂ ಒಂದು ವಿಷಯವನ್ನು ಹೇಳಲೇಬೇಕು ಎಂದು ಸಾತಿಹಿಗೆ ಒತ್ತಡ ಬಂದಾಗ ಅವನು ಬರೆಯುತ್ತಾನೆ, ಬರೆಯಬೇಕು. ನೀವೆಲ್ಲರೂ ಓದುಗರಷ್ಟೆ. ನೀವು ಅವರಿಂದ ಆ ಬರವಣಿಗೆಯ ಕೆಲಸವನ್ನು ಮಾಡಿಸಬೇಕು. ಕನ್ನಡದಲ್ಲಿ ಈಗ ಬರುತ್ತಿರುವ ಪುಸ್ತಕಗಳಲ್ಲಿ ಶೇಕಡ 60ರಷ್ಟು ಮತ್ತೊಬ್ಬರಿಂದ ವಿಷಯಗಳನ್ನು ಎತ್ತಿಕೊಂಡು ಬರೆದದ್ದು. ಆದರೂ ಇದರಲ್ಲಿ ಯಾವ ಅಪರಾಧವೂ ಇಲ್ಲ. ಆದರೆ, ಬರೆದವನು ತಾನು ಎತ್ತಿಕೊಂಡುದನ್ನು ಮರೆಯದೆ ಅವನು ತಾನೇ ಬರೆದನೆಂದು ಹೇಳುವುದು ಮಾತ್ರ ಅಪರಾಧ.

"ಸಾಹಿತಿ ಸಾಹಿತ್ಯವನ್ನು ತನ್ನ ಸಲುವಾಗಿಯೇ ಬರೆಯುತ್ತಾನೆಂದು ಹೇಳಬಹುದು. ಹಾಗೆ ಹೇಳುವ ಸಾಹಿತಿ ಬರೆಯಲಿ. ಆದರೆ ಸಮಾಜದಲ್ಲಿ ಇತರರೊಡನೆ ಜೀವನ ನಡೆಸುವ ಸಾಹಿತಿ ಹೀಗೆ ಹೇಳಲಾಗುವುದಿಲ್ಲ. ಅವನ ಮೇಲಿರುವ ಸಮಾಜದ ಹೊಣೆ ಎಂದಿಗೂ ಅವನಿಗೆ ತಪ್ಪುವುದಿಲ್ಲ. ಸಾಹಿತಿ ಮಾತ್ರ ಪ್ರಾಮಾಣಿಕನಾಗಿರಬೇಕು. ಕೆಲಸ ಮಾಡಬೇಕು ಅಷ್ಟೆ. ಸಮಾಜದಿಂದ ದೂರವಾಗಿ ಸಾಹಿತಿ ಏನೂ ಬರೆಯಲಾರ. ಅವನೇನೊ ಒಂದು ದೃಷ್ಟಿಯಿಂದ ಮಿಕ್ಕವರಿಗಿಂತಲೂ ಪ್ರತ್ಯೇಕವಾಗಿದ್ದಾನೆ ಎಂದೂ, ಮತ್ತೊಂದು ದೃಷ್ಟಿಯಿಂದ ಎಲ್ಲರಂತೆಯೇ ಇದ್ದಾನೆಂದೂ, ಇರುವನೆಂದೂ, ಇನ್ನೂ ಒಂದು ದೃಷ್ಟಿಯಿಂದ ಸಮಾಜದಲ್ಲಿಯೇ ಸೇರಿರುವ ನೆಂದೂ, ಮಗದೊಂದು ದೃಷ್ಟಿಯಿಂದ ಅವನು ಸಮಾಜಕ್ಕೆ ಪ್ರತ್ಯೇಕವಾಗಿಯೇ ಇರುವನೆಂದೂ ಹೇಳಬಹುದು. ಹೇಗೇ ಆದರೂ ಸಾಹಿತಿ ಸಾಹಿತಿಯೆ? ಅವನು ಬರೆಯಬೇಕು ಜನ ಓದಬೇಕು. ಹೆಚ್ಚು ಜನ ಓದುವುದರಿಂದ ಸಾಹಿತಿ ಬದುಕಬೇಕು. ಹಾಗಾಗಲು ಸಮಾಜದಲ್ಲಿ ಅಕ್ಷರತೆ ಹೆಚ್ಚ ಬೇಕು. ಇದನ್ನು ಸಾಧಿಸುವುದು ಸಮಾಜದ ಮೇಲಿರುವ ಒಂದು ಕರ್ತವ್ಯ.

"ಇನ್ನು ಪ್ರಕಾಶಕರ ವಿಷಯದಲ್ಲಿ ಎರಡು ಮಾತನ್ನು ಹೇಳಬೇಕೆನಿಸುತ್ತದೆ. ಜನ ಸಾಮಾನ್ಯರಿಗೆ ಎಟಕುವ ರೀತಿಯಲ್ಲಿ ಸುಲಭ ದರದ ಪುಸ್ತಕಗಳನ್ನು ಪ್ರಕಟ ಮಾಡುವುದು ಪ್ರಕಾ ಶಕರ ಕರ್ತವ್ಯ. ನಮ್ಮ ಸರ್ಕಾರದವರು ಇದಕ್ಕೆ ಸಹಾಯ ಮಾಡಬೇಕು. ಪ್ರಕಾಶಕರು ಆ ಸಹಾಯವನ್ನು ಉಪಯೋಗಿಸಿಕೊಳ್ಳಬೇಕು. ಇಂದು ಸಾಹಿತ್ಯ ಕೃತಿಗಳು ಸಾಮಾನ್ಯ ಜನರನ್ನು ಮುಟ್ಟಿವೆ. ಆದರೆ ಅದಕ್ಕೆ ಬೆಲೆ ಪ್ರೋತ್ಸಾಹಗಳು ಮಾತ್ರ ಅಷ್ಟಾಗಿ ದೊರಕುತ್ತಿಲ್ಲ. ಈ ವಿಷಯ ದಲ್ಲಿ ಪ್ರಕಾಶಕರ ಹೊಣೆ ಹೆಚ್ಚು.

"ಇನ್ನು ನಮಗೆ ವಿವಿಧ ಭಾಷೆಗಳ ಸಾಹಿತಿಗಳ ಮತ್ತು ಸಾಹಿತ್ಯಗಳ ಪರಿಚಯದ ಆವಶ್ಯಕತೆ ತುಂಬ ಇದೆ. ಇದಕ್ಕಾಗಿ ಕರ್ನಾಟಕ ಸಂಘಗಳು, ಸಾಹಿತ್ಯ ಸಂಘಗಳು, ವಾಚನಾಲಯಗಳು, ಬಹಳವಾಗಿ ಶ್ರಮಿಸಬೇಕಾಗಿದೆ. ಯಾರಲ್ಲಿಯೂ ಸಂಕುಚಿತ ದೃಷ್ಟಿ ಇರಬಾರದು. ನಿಸ್ವಾರ್ಥ ಮನೋಭಾವ ಬೆಳೆಯಬೇಕು.

"ಸೃಷ್ಟಿಯಾದ ಸಾಹಿತ್ಯ ಕೃತಿಗಳ ಬಗ್ಗೆ ನ್ಯಾಯವಾದ, ಉತ್ತಮವಾದ ನೇರವಾದ ವಿಮರ್ಶೆ, ವಿಮರ್ಶಕ ಬೇಕು. ವಿಮರ್ಶಕ ಸಹೃದಯನಾಗಿರಬೇಕು. ಅಂತಹ ವ್ಯಕ್ತಿಗಳು ಹೆಚ್ಚಿದಷ್ಟೂ ಸಾಹಿತ್ಯದ ನಿಜವಾದ ಗುಣದೋಷಗಳು ಕಂಡುಬಂದಾವು. ಸಾಹಿತ್ಯ ಬೆಳೆದೀತು. ನಿಜವಾದ ಸಾಹಿತ್ಯ, ಒಳ್ಳೆಯ ಸಾಹಿತ್ಯ ಇನ್ನೊಬ್ಬರ ಬಾಡಿಗೆಗಾಗಿ ಬರೆದು ಬರುವುದಿಲ್ಲ. ಅಂತಹ ವಸ್ತುವೂ ಅದಲ್ಲ" ಎಂದು ಹೇಳಿ ಶ್ರೀಯುತರು ತಮ್ಮನ್ನು ಈ 38ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷರನ್ನಾಗಿ ಮಾಡಿ ಗೌರವಿಸಿದುದಕ್ಕಾಗಿ ಸರ್ವರಿಗೂ ತಮ್ಮ ಕೃತಜ್ಞತೆಯನ್ನು ಅರ್ಪಿಸಿ ಮುಕ್ತಾಯ ಭಾಷಣವನ್ನು ಮುಗಿಸಿದರು.

ಬಳಿಕ, ಪರಿಷತ್ತಿನ ಅಧ್ಯಕ್ಷರಾದ ಶ್ರೀ ಎ. ಎನ್. ಮೂರ್ತಿರಾಯರವರು ಮುಂದಿನ ಸಮ್ಮೇಳನಕ್ಕಾಗಿ ಸಾಗರ, ಬೆಳಗಾಂ, ಬೆಂಗಳೂರು, ಧಾರವಾಡಗಳಿಂದ ಬಂದಿರುವ ಆಹ್ವಾನಗಳ ವಿಚಾರವನ್ನು ಸಭಿಕರಿಗೆ ತಿಳಿಸಿ ಎಲ್ಲಿ ಸಮ್ಮೇಳನ ನಡೆಯುವುದೆಂಬ ವಿಚಾರ ಕಾರ್ಯ ಸಮಿತಿಯ ತೀರ್ಮಾನಕ್ಕೆ ಒಳಪಟ್ಟಿದೆ ಎಂದೂ, ಅದಾದ ಬಳಿಕ ಪ್ರಕಟಿಸುವುದಾಗಿಯೂ ತಿಳಿಸಿ, ಆಹ್ವಾನವನ್ನು ನೀಡಿದ ಎಲ್ಲರಿಗೂ ಪರಿಷತ್ತಿನ ವಂದನೆಯನ್ನು ಅರ್ಪಿಸಿದರು.

ಪರಿಷತ್ತಿನ ಕಾರ್ಯದರ್ಶಿಗಳಾದ ಶ್ರೀ ಜಿ. ವೆಂಕಟಸುಬ್ಬಯ್ಯನವರು ಸಮ್ಮೇಳನವನ್ನು ಇಷ್ಟೊಂದು ಭವ್ಯವಾಗಿಯೂ, ಉತ್ಸಾಹಭರಿತವಾಗಿಯೂ ನಡೆಸಲು ಕಾರಣರಾದ ಸಮ್ಮೇಳನದ ಸ್ವಾಗತ ಸಮಿತಿಯವರಿಗೂ ಹಲವಾರು ರೀತಿಗಳಿಂದ ನೆರವು ನೀಡಿದ ಎಲ್ಲ ಮಹನೀಯರಿಗೂ ಪರಿಷತ್ತಿನ ಪರವಾಗಿ ಅನಂತಾನಂತ ವಂದನೆಗಳರ್ಪಿಸಿ ಸಮ್ಮೇಳನದ ಏರ್ಪಾಡುಗಳು ಎಲ್ಲರನ್ನೂ ಸಂತೋಷಗೊಳಿಸಿದೆಯೆಂಬ ವಿಚಾರವನ್ನು ವ್ಯಕ್ತಗೊಳಿಸಿ, ಮತ್ತೊಮ್ಮೆ ಕೃತಜ್ಞತೆಯನ್ನು ತಿಳಿಸಿದರು.

ಸ್ವಾಗತ ಸಮಿತಿಯ ಅಧ್ಯಕ್ಷರಾದ ಶ್ರೀ ಬಿ. ಜಿ. ದೇಶಪಾಂಡೆ ಅವರು ಸಮ್ಮೇಳನ ಇಷ್ಟೊಂದು ಯಶಸ್ವಿಯಾಗಲು ಸಹಕರಿಸಿದ ಸರ್ವರಿಗೂ ಸ್ವಾಗತ ಸಮಿತಿಯ ಪರವಾಗಿ ಅಭಿನಂದನೆಗಳನ್ನು ಸಮರ್ಪಿಸಿದರು. ಶ್ರೀಮತಿ ಫಲಗೂಬಾಯಿ ಅವರು ಹಾಡಿದ ರಾಷ್ಟ್ರಗೀತೆಯೊಡನೆ ಸಮ್ಮೇಳನದ ಮೂರನೆಯ ದಿನದ ಕಾರ್ಯಕಲಾಪವು ಮುಗಿದು ಸಮ್ಮೇಳನ ಯಶಸ್ವಿಯಾಯಿತು.

**ಮೂರನೇ ದಿನದ ಮನರಂಜನೆ ಕಾರ್ಯಕ್ರಮ :—**

ರಾತ್ರಿ ಮನರಂಜನೆಯ ಕಾರ್ಯಕ್ರಮ : ಶ್ರೀಮತಿ ಫಲಗೂಬಾಯಿಯವರು ಕೆಲವು ದೇವರನಾಮಗಳನ್ನೂ, ಭಾವಗೀತೆಗಳನ್ನೂ ಹಾಡಿದರು. ಶ್ರೀಪಾದರಾವ್ ಹಾನಗಲ್ ಅವರು ಏಕಪಾತ್ರಾಭಿನಯವನ್ನು ಮಾಡಿದರು. "ಶಾರದಾ ಕನ್ಯಾಶಾಲೆ"ಯ ಬಾಲಕಿಯರು ಕೋಲಾಟ ಪ್ರದರ್ಶನ ಮಾಡಿದರು. ಪ್ರೊ. ಕೇಶವನಾಥ್ ಅವರು ದಶಾವತಾರ ನೃತ್ಯವನ್ನು ಪ್ರದರ್ಶಿಸಿದರು. ಡಾ|| ಎಸ್. ಎಂ. ಹುಣಸಾಳ್ ಅವರು ಇಂಗ್ಲಿಷ್ ಭಾವಗೀತೆಗಳನ್ನು ಹಾಡಿದರು. ರಾಯಚೂರಿನ ಎಲ್. ಡಿ. ವಿ. ಕಾಲೇಜ್ ವಿದ್ಯಾರ್ಥಿಗಳು ಶ್ರೀ ಪರ್ವತವಾಣಿ ಅವರ "ಹಣ-ಹದ್ದು" ನಾಟಕವನ್ನಭಿನಯಿಸಿದರು. ಸಾಗರದ "ಹೆಗ್ಗೋಡು ನೀಲಕಂಠೇಶ್ವರ

ನಾಟಕ ಮಂಡಲಿ"ಯವರು "ಷಹಜಹಾ್ರ್" ನಾಟಕವನ್ನು, ರಾಯಚೂರಿನ "ಕರ್ನಾಟ ಕಲಾ ಸೇವಾ ಸಂಘ"ದವರು "ಗಂಡಿಕಾ" ಎಂಬ ನಾಟಕವನ್ನೂ ಅಭಿನಯಿಸಿದರು. ಬಳ್ಳಾರಿಯ ಶ್ರೀ ಕೆ. ವಿ. ಶ್ರೀನಿವಾಸರಾವ್ ಅವರಿಂದ ಏಕಪಾತ್ರಾಭಿನಯವೂ ನಡೆಯಿತು.

ಶ್ರೀ ಕೆ. ರಾಘವೇಂದ್ರರಾವ್ ಅವರು ಸಮ್ಮೇಳನದ ಮೂರು ದಿನಗಳ ಮನೋರಂಜನ ಕಾರ್ಯಕ್ರಮಗಳಲ್ಲಿ ಭಾಗವಹಿಸಿದವರೆಲ್ಲರಿಗೂ ಕೃತಜ್ಞತೆಯ ವಂದನೆಯನ್ನು ಸಲ್ಲಿಸಿದರು.

### ಆತಿಥ್ಯಗಳು

26-12-55

ಸಮ್ಮೇಳನದ ಸಮಾರಂಭದಲ್ಲಿ ಎರಡನೆಯ ದಿನ ರಾಯಚೂರಿನ ಸುಪ್ರಸಿದ್ಧ ವರ್ತಕ ರಾದ ಶ್ರೀಮಾನ್ ಸೇಟ್ ಗಿರಿಧರಿಲಾಲ್ ದಾಮೋದರದಾಸ್ ರಾಠೀ, ಅವರು ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರ, ಹೈದರಾಬಾದು ಮುಖ್ಯ ಮಂತ್ರಿ ಶ್ರೀ ಬಿ. ರಾಮಕೃಷ್ಣರಾಯರವರ ಮತ್ತು ಸಮ್ಮೇಳನದ ಪ್ರತಿನಿಧಿಗಳ ಗೌರವಾರ್ಥವಾಗಿ ಒಂದು ಭೋಜನ ಕೂಟವನ್ನು ಏರ್ಪಡಿಸಿದ್ದರು.

ಅದೇ ದಿನದ ಸಂಜೆ ರಾಯಚೂರಿನ ಮುನಿಸಿಪಾಲಟಿಯವರು ಹೈದರಾಬಾದಿನ ಮಾನ್ಯ ಮುಖ್ಯ ಮಂತ್ರಿ ಡಾ|| ಬಿ. ರಾಮಕೃಷ್ಣರಾವ್ ಮತ್ತು ಸಮ್ಮೇಳನ ಮುಖ್ಯ ಅತಿಥಿಗಳ ಗೌರವಾರ್ಥವಾಗಿ ಒಂದು ಉಪಹಾರ ಕೂಟವನ್ನೇರ್ಪಡಿಸಿದ್ದರು.

ಎಲ್. ಡಿ. ವಿ. ಕಾಲೇಜಿನ ಪ್ರಿನ್ಸಿಪಾಲ್‌ರವರಾದ ಶ್ರೀ ಬಿ. ಮೂಗಲ್ ಎಂ. ಎ., ಅವರು ಸಮ್ಮೇಳನದ ಅಧ್ಯಕ್ಷರು ಮತ್ತು ಪ್ರತಿನಿಧಿಗಳ ಗೌರವಾರ್ಥವಾಗಿ ಉಪಹಾರ ಕೂಟವನ್ನು ಏರ್ಪಾಡು ಮಾಡಿದ್ದರು.

ಈ ಎಲ್ಲ ಸಮಾರಂಭಗಳಲ್ಲಿಯೂ ಅತಿಥಿಗಳು ಭಾಗವಹಿಸಿ ಆನಂದಿತರಾದರು.

ಹೀಗೆ 38ನೆಯ ಸಾಹಿತ್ಯ ಸಮ್ಮೇಳನವು ಹೈದರಾಬಾದ್ ಸಂಸ್ಥಾನದ ಅಚ್ಚ ಕನ್ನಡನಗರ ವಾದ ರಾಯಚೂರಿನಲ್ಲಿ ಬಹು ವೈಭವದಿಂದ ನಡೆದು ಕನ್ನಡಿಗರೆಲ್ಲರಿಗೂ ಅಮಿತಾನಂದವನ್ನುಂಟು ಮಾಡಿತು.

'ಸಿರಿಗನ್ನಡಂ ಗೆಲ್ಗೆ'

---



# ಮೂವತ್ತೆಂಟನೆಯ ಕನ್ನಡ ಸಾಹಿತ್ಯ ಸಮ್ಮೇಳನ, ರಾಯಚೂರು

## ಸ್ವಾಗತಸಮಿತಿಯ ಅಧ್ಯಕ್ಷರಾದ
## ಡಾ॥ ಬಿ. ಜಿ. ದೇಶಪಾಂಡೆಯವರ ಸ್ವಾಗತ ಭಾಷಣ

25–12–1955




**ಮಾನ್ಯ ಅತಿಥಿಗಳಾದ ಮಹಿಳೆಯರೆ, ಮತ್ತು ಮಹನೀಯರೆ,**

ಇತಿಹಾಸ ಪ್ರಸಿದ್ಧವಾದ ನಮ್ಮ ರಾಯಚೂರಿನಲ್ಲಿ ನಡೆಯುತ್ತಿರುವ ಈ ಅಖಿಲ ಕರ್ನಾಟಕದ 38ನೆಯ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಭಾಗವಹಿಸಲು ಬಂದಿರುವ ತಮ್ಮೆಲ್ಲರಿಗೂ ನಾನು ಆದರಪೂರ್ವಕವಾದ ಸ್ವಾಗತವನ್ನು ಬಯಸುತ್ತೇನೆ. ನಾನು ತಮ್ಮೆಲ್ಲರಿಗೂ ಬಯಸುತ್ತಿರುವ ಈ ಸುಸ್ವಾಗತದಲ್ಲಿ ಸಮ್ಮೇಳನದ ಸ್ವಾಗತಸಮಿತಿಯ ಸದಸ್ಯರೂ, ಅವರಿಗೆ ಬೆಂಬಲವಾಗಿ ನಿಂತಿರುವ ರಾಯಚೂರಿನ – ಏಕೆ? – ಇಡೀ ಹೈದರಾಬಾದು ಕರ್ನಾಟಕದ ಜನತೆ ಏಕೀಭವಿಸಿ, ಸಂತೋಷದಿಂದ ನಲಿಯುತ್ತಿದ್ದಾರೆಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ನಮ್ಮ ಆಹ್ವಾನವನ್ನು ಮನ್ನಿಸಿ, ಪ್ರಯಾಣದ ಆಯಾಸವನ್ನೂ ಲಕ್ಷಿಸದೆ, ಕರ್ನಾಟಕದ ದೂರ ದೂರದ ಪ್ರದೇಶಗಳಿಂದ ಬಂದಿರುವ ಸಾಹಿತಿಗಳನ್ನೂ, ನಾಡು-ನುಡಿಗಳ ಭಕ್ತರನ್ನೂ ಅಷ್ಟೇನೂ ವಿದ್ಯೆಯಲ್ಲಾಗಲೀ ಉದ್ಯಮದಲ್ಲಾಗಲೀ, ಮುಂದುವರಿಯದಿರುವ ಈ ರಾಯಚೂರಿಗೆ ಬರಮಾಡಿ ಕೊಳ್ಳುವ ಸುಯೋಗ ಲಭಿಸಿದುದು ನಮ್ಮೆಲ್ಲರಿಗೂ ಹೆಮ್ಮೆಯ ಸಂಗತಿಯಾಗಿದೆ.

ಈಗ್ಗೆ 21 ವರ್ಷಗಳ ಹಿಂದೆ ಇದೇ ನಗರದಲ್ಲಿ ಆಧುನಿಕ ಕನ್ನಡ ಸಾಹಿತ್ಯದ ಅರುಣೋದಯ ಸಮಯದಲ್ಲಿಯೇ ಶ್ರೇಷ್ಠಕವಿಗಳೂ, ಕತೆಗಾರರೂ, ವಿಮರ್ಶಕರೂ ಎನಿಸಿಕೊಂಡಿದ್ದ ಕೀರ್ತಿಶೇಷ **ಶ್ರೀ ಪಂಜೆ ಮಂಗೇಶರಾಯರ** ಅಧ್ಯಕ್ಷತೆಯಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನ ನಡೆದ ಸವಿನೆನಪು ಅನೇಕರಿಗೆ ಈಗಲೂ ಬರುತ್ತಿರಬಹುದು. ಮತ್ತೆ 21 ವರ್ಷಗಳ ತರುವಾಯ ಕನ್ನಡ ನಾಡಿನ ವಿದ್ವಾಂಸರನ್ನೂ, ವಿದ್ವತ್ಪಕ್ಷಪಾತಿಗಳನ್ನೂ ಇಲ್ಲಿಗೆ ಬರಮಾಡಿಕೊಳ್ಳಲು ನಮಗೆ ತುಂಬ ಹರ್ಷವಾಗಿದೆ. ಈ ನಮ್ಮ ಸಮ್ಮೇಳನ ಒಂದು ಪರ್ವಕಾಲದ್ದಾಗಿದೆ ಎಂದು ಹೇಳುವುದು ತೀರಾ ಉಚಿತವಾದುದು; ಕನ್ನಡಿಗರೆಲ್ಲರ ಕನಸಾಗಿದ್ದ "ಸಂಯುಕ್ತ ಕರ್ನಾಟಕ" ನನಸಾಗುತ್ತಿರುವ ಈ ಶುಭ ಸಮಯ ಹಬ್ಬದ ಕಾಲವಲ್ಲದೆ ಮತ್ತೇನು ತಾನೇ ಆದೀತು? ಸುಮಾರು ನಲವತ್ತು ವರ್ಷಗಳಿಂದಲೂ ಕನ್ನಡ ಸಾಹಿತ್ಯ ಪರಿಷತ್ತು ಕನ್ನಡಿಗರ ಸಾಂಸ್ಕೃತಿಕ ಏಕೀಕರಣಕ್ಕಾಗಿ ದುಡಿದಿದೆ. ಸಾಂಸ್ಕೃತಿಕ ಏಕೀಕರಣ ಸಿದ್ಧಿಸಿದರೆ ರಾಜಕೀಯ ಏಕೀಕರಣ ತಾನಾಗಿಯೇ ಆಗುವುದೆಂದು ದೃಢವಾಗಿ ನಂಬಿದ್ದ ಕನ್ನಡ ಸಾಹಿತ್ಯ ಪರಿಷತ್ತು ಈ ರಾಜಕೀಯ ಏಕೀಕರಣದಿಂದ ಸಂತೃಪ್ತವಾಗಿರುವುದು ಸಹಜವೇ ಇದೆ. ಅಂತೆಯೇ ನಮ್ಮೆಲ್ಲರಿಗೂ ಈ ಸಾಹಿತ್ಯ ಸಮ್ಮೇಳನ ಹರಿದು ಹಂಚಿದ್ದ ಕನ್ನಡ ನಾಡನ್ನೆಲ್ಲ ಒಂದೆ ಘಟಕಕ್ಕೆ ತರುವ ಮಹತ್ವದ ಸಮ್ಮೇಳನವೆನ್ನುವುದರಲ್ಲಿ ಸಂದೇಹವಿಲ್ಲ.

ಕನ್ನಡ ನಾಡು ಒಂದಾಗಿ ಆ ನಾಡಿನ ವ್ಯವಹಾರವೆಲ್ಲ ಕನ್ನಡದಲ್ಲಿ ನಡೆಯಬೇಕೆಂಬುದು ಪರಷತ್ತಿನ ಸದಸ್ಯರ ಹೆಬ್ಬಯಕೆ, ನ್ಯಾಯವಾದ ಬಯಕೆ. ಕನ್ನಡ ಮನೆಯಲ್ಲಿ ಕನ್ನಡಿತಿಯೇ ಯಜಮಾನಿ. ಅಂತೆಯೇ ಕನ್ನಡ ನಾಡಿನಲ್ಲಿ ಕನ್ನಡವೇ ಮುಖ್ಯ ಭಾಷೆ, ಪ್ರಥಮಭಾಷೆ, ಬೇರೆಲ್ಲ ಭಾಷೆಗಳೂ ಅದರ ಸಹಾಯಕ್ಕೆ ಕನ್ನಡಕ್ಕೆ ಸಲ್ಲಬೇಕಾದ ಮನ್ನಣೆ ಶೀಘ್ರದಲ್ಲಿಯೇ ದೊರೆಯಲಿದೆ. ಕನ್ನಡವು ಆಡಳಿತದ ಭಾಷೆಯಾಗಿ, ಶಾಸನಸಭಾ ಭಾಷೆಯಾಗಿ, ಶಿಕ್ಷಣ ಮಾಧ್ಯಮವಾಗಿ, ನ್ಯಾಯಾಲಯದ ಭಾಷೆಯಾಗಿ ಗೌರವ ಪಡೆಯುವುದು ಖಚಿತವಾಗಿದೆಯಾದುದರಿಂದ ಕನ್ನಡಕ್ಕಾಗಿ ಶ್ರಮಿಸಿದವರೆಲ್ಲರಿಗೂ ಮಹದಾನಂದ. ಮೈಸೂರು ವಿಶ್ವವಿದ್ಯಾಲಯದವರು 1956ನೆಯ ಜೂನ ತಿಂಗಳಿಂದ ಇಂಟರ್ ಮಿಡಿಯಟ್ ತರಗತಿಯಲ್ಲಿ ಪಾಠಗಳನ್ನೆಲ್ಲಾ (ಕಲಾ ವಿಜ್ಞಾನ ಶಾಖೆಗಳಲ್ಲಿ) ಕನ್ನಡದಲ್ಲಿಯೇ ನಡಸಬೇಕೆಂದು ತೀರ್ಮಾನಿಸಿರುವುದು ಹರ್ಷದಾಯಕವಾದ ಸಂಗತಿ. ಅದು ಸ್ನಾತಕ ಪರೀಕ್ಷೆಯ ತರಗತಿಗೂ, ಸ್ನಾತಕೋತ್ತರ ತರಗತಿಗೂ ಶೀಘ್ರದಲ್ಲಿಯೇ ಅನ್ವಯಿಸುವಂತಾಗಲೆಂದು ಹಾರೈಸುತ್ತೇನೆ. ಹೀಗೆ ಹೇಳಿದ ಮಾತ್ರಕ್ಕೆ ಕನ್ನಡಿಗರು ಭಾಷಾ ವಿಷಯದಲ್ಲಿ ಸಂಕುಚಿತ ಮನೋವೃತ್ತಿಯವರಲ್ಲವೆಂದು ಒತ್ತಿ ಹೇಳುತ್ತೇನೆ. ಹಿಂದಿ, ಸಂಸ್ಕೃತ, ಇಂಗ್ಲೀಷ ಮೊದಲಾದ ಅಗತ್ಯ ಭಾಷೆಗಳನ್ನೂ ತೆಲುಗು, ತಮಿಳು, ಮರಾಠಿ ಮೊದಲಾದ ನೆರೆಯ ಭಾಷೆಯನ್ನೂ ಕಲಿತಿದ್ದಾರೆ. ಕಲಿತು ಸೌಹಾರ್ದದಿಂದ ಬಾಳಲು ಸದಾ ಸಿದ್ಧರಿದ್ದಾರೆಂಬುದನ್ನು ಇಲ್ಲಿ ಸೂಚಿಸ ಬಯಸುತ್ತೇನೆ.

ಈ ಸಮ್ಮೇಳನವು ನಡೆಯುವ ಸ್ಥಳಕ್ಕೆ **ತಾರಾನಾಥ** ನಗರವೆಂದು ಹೆಸರು ಇಡಲಾಗಿದೆ. ಇದರ ಔಚಿತ್ಯವನ್ನು ಕುರಿತು ಒಂದೆರಡು ಮಾತುಗಳನ್ನು ಹೇಳುವುದು ಸೂಕ್ತವೆನಿಸುತ್ತದೆ. ಪಂಡಿತ ತಾರಾನಾಥರು ಅನೇಕ ಭಾಷೆಗಳನ್ನು ಬಲ್ಲವರಾಗಿದ್ದ ಕನ್ನಡ ವಿದ್ವಾಂಸರು. ಅವರು ಕನ್ನಡದಲ್ಲಿ ಹೆಸರಾದ ಲೇಖಕರೂ, ವಾಗ್ಮಿಗಳೂ ಆಗಿದ್ದರು. ಅವರ ಪ್ರಯತ್ನದಿಂದಲೇ ರಾಯಚೂರಿನ ಜನರಲ್ಲಿ ಕನ್ನಡ ಸಾಹಿತ್ಯದ ಬಗ್ಗೆ ಒಂದು ಜಾಗ್ರತಿಯುಂಟಾಗಿರುವದು. ಅವರು ಸ್ಥಾಪಿಸಿದ ವಿದ್ಯಾಲಯವು (ಹಮದರ್ದ) ಪ್ರೌಢ ಶಾಲೆಯಾಗಿ ಬೆಳೆದು ಇಂದು ಎಲ್. ವ್ಹಿ. ಡಿ. ಕಾಲೇಜೂ ಆಗಿದೆ. ಇಂಥ ವಿದ್ಯಾ ವಿಶಾರದರ ಹೆಸರಿನಿಂದ ನಮ್ಮ ಸಮ್ಮೇಳನದ ಸ್ಥಳವನ್ನು **ತಾರಾನಾಥ** ನಗರವೆಂದು ಕರೆದಿರುವುದು ಉಚಿತವಲ್ಲವೇ ?

ಈ ದಿನದ ಸಮ್ಮೇಳನವನ್ನು ಉದ್ಘಾಟನೆ ಮಾಡಲು ಹೈದರಾಬಾದಿನ ಸಾರ್ವಜನಿಕ ಕಾರ್ಯ ಶಾಖೆಯ ಮಂತ್ರಿಗಳಾದ **ಡಾ. ಜಿ. ಎಸ್. ಮೇಲ್ಕೋಟೆಯವರು** ಕೃಪೆಮಾಡಿ ಒಪ್ಪಿದ್ದಾರೆ. ಅವರು ವೃತ್ತಿಯಲ್ಲಿ ವೈದ್ಯರಾಗಿದ್ದು ಜನ ಸೇವೆಯಲ್ಲಿ ಮೊದಲಿನಿಂದಲೂ ನಿರತರಾಗಿದ್ದರು. ರಾಷ್ಟ್ರದ ಕರೆ ಬಂದಕೂಡಲೇ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಧುಮುಕಿದ ವೀರರಿವರು. ಸ್ವಾತಂತ್ರ್ಯ ಬಂದಮೇಲೆ ಸರ್ಕಾರದ ಸಚಿವರಾಗಿ ಹೆಚ್ಚು ಜವಾಬ್ದಾರಿಯ ಖಾತೆಗಳನ್ನು ದಕ್ಷತೆಯಿಂದ ನಿರ್ವಹಿಸಿದ್ದಾರೆಂಬುದು ಸರ್ವವಿದಿತ. ಪ್ರಾಮಾಣಿಕವಾದ ದೇಶ ಸೇವೆಗೆ ಇವರನ್ನು ಉತ್ತಮ ಉದಾಹರಣೆಯನ್ನಾಗಿ ಹೇಳಬಹುದು. ಮೇಲಾಗಿ ಇವರು ವಿದ್ವತ್ಪಕ್ಷಪಾತಿಗಳು. ವಿಶ್ವ ವಿದ್ಯಾಲಯದ ಆಡಳಿತ ಮಂಡಳದ ಸದಸ್ಯರಾಗಿ ಎಷ್ಟೊ ಕೆಲಸ ಮಾಡಿದ್ದಾರೆ. ಸ್ಥಳೀಯ ಲಕ್ಷ್ಮೀ ವೆಂಕಟೇಶ ದೇಸಾಯಿ ಕಾಲೇಜಿನ ಆಡಳಿತ ಸಮಿತಿಯ ಅಧ್ಯಕ್ಷರಾಗಿ ಅದರ ಸ್ಥಾಪನೆಗೂ, ಬೆಳವಣಿಗೆಗೂ ಕಾರಣರಾಗಿದ್ದಾರೆ. ಇಷ್ಟೇ ಅಲ್ಲದೆ, ಅವರು ಅಚ್ಚ ಕನ್ನಡಿಗರಾಗಿರುವುದರಿಂದ ಕನ್ನಡ ಸಾಹಿತ್ಯದಲ್ಲಿ ಆಸಕ್ತಿಯುಳ್ಳವರಾಗಿದ್ದಾರೆ. ಇಂಥ ಮಹನೀಯರು ಸಮ್ಮೇಳನವನ್ನು ಉದ್ಘಾಟಿಸಲು ಒಪ್ಪಿರುವುದು ನಮ್ಮ ಸುದೈವ.

ಇನ್ನು ಈ ಸಮ್ಮೇಳನಕ್ಕೆ ಅಧ್ಯಕ್ಷರಾಗಲು ತಮ್ಮ ಸಹಜ ಸರಳತೆಯಿಂದ ಒಪ್ಪಿಗೆ ಕೊಟ್ಟ **ಶ್ರೀರಂಗರು** ಕನ್ನಡ ನಾಡಿಗೆ ರಂಗ ಶ್ರೀಯನ್ನು ತಂದುಕೊಟ್ಟ ಪ್ರಮುಖರುಗಳಲ್ಲಿ ಒಬ್ಬರು. ಇವರು ಆರ್. ವಿ. ಜಾಗೀರದಾರ್ ಆದ್ಯ ರಂಗಾಚಾರ್ ಎಂಬ ಹೆಸರುಗಳನ್ನು ಹೊಂದಿದ್ದರೂ ಅವರ ಶ್ರೀರಂಗ ಎಂಬ ಕಾವ್ಯ ನಾಮವೇ ಇಲ್ಲಿ ಉಚಿತವಾದುದು. ಶ್ರೀರಂಗರು ಕನ್ನಡ, ಸಂಸ್ಕೃತ, ಇಂಗ್ಲೀಷು ಭಾಷೆಗಳಲ್ಲಿ ಅದ್ವಿತೀಯ ಪಂಡಿತರು; ಅವರಿಗೆ ಇನ್ನೂ ಯಾವಯಾವ ಭಾಷಾ ಸಾಹಿತ್ಯಗಳು ಕರತಲಾಮಲಕವಾಗಿವೆಯೋ ಹೇಳುವಂತಿಲ್ಲ. ಅವರ ಪಾಂಡಿತ್ಯ ಶುಷ್ಕವಲ್ಲ; ರಸಭರಿತವಾದದ್ದು; ಸರಸವಾದದ್ದು; ಹಾಸ್ಯರಸ ಭರಿತವಾದದ್ದು. ಬರೆವಣಿಗೆಯಲ್ಲಿ ಹೇಗೋ ಹಾಗೆಯೇ ಮಾತಿನಲ್ಲಿಯೂ ಬಾಣವೇಗ; ಅದೇ ಇರಿತ, ಹೃದಯದಿಂದ ಹೊರಟ ಅವರ ಮಾತು ನೇರವಾಗಿ ಹೃದಯವನ್ನೇ ಮುಟ್ಟಬೇಕು ಅದಲ್ಲವೇ ಸಾಹಿತ್ಯದ ಗುಟ್ಟು! ಸಾಹಿತಿಯ ಸಿದ್ಧಿ! ಆ ಸಿದ್ಧಿ ಶ್ರೀರಂಗರ ಹಸ್ತಗತ; ವಚೋಗತ. ಇವರು ಭಾಷಾ ಶಾಸ್ತ್ರ ನಿಪುಣರು, ತೀಕ್ಷ್ಣ ವಿಮರ್ಶಕರು, ಉತ್ತಮ ನಾಟಕ ಕರ್ತೃಗಳು, ಕಾದಂಬರಿಕಾರರು, ಶ್ರೇಷ್ಠ ಪ್ರಬಂಧಕಾರರು, ಕತೆಗಾರರು; ನೂತನ ವಕ್ತಾರರು ಸಾಹಿತ್ಯದ ಎಲ್ಲ ರಂಗಗಳಲ್ಲಿಯೂ ತಮ್ಮ ಸಿದ್ಧ ಹಸ್ತವನ್ನು ತೋರಿಸಿದ್ದಾರೆ. ಎಲ್ಲಕ್ಕೂ ಮುಖ್ಯವಾಗಿ ಅವರನ್ನು ಶ್ರೇಷ್ಠ ನಾಟಕ ಕರ್ತೃಗಳೆನ್ನುವುದೇ ಸಮಂಜಸ ವೆಂದು ಸಾಹಿತಿಯಲ್ಲದ ನನ್ನ ಅಭಿಮತ. ಅಂಥ ಸಿದ್ಧವಿದ್ಯರಾದ ಶ್ರೀರಂಗರು ನಮ್ಮ ಸಮ್ಮೇಳನದ **ಅಧ್ಯಕ್ಷ** ಪೀಠವನ್ನು ಅಲಂಕರಿಸಲು ಒಪ್ಪಿರುವುದು ನಮ್ಮ ಪುಣ್ಯ. ಅವರ ಅಧ್ಯಕ್ಷತೆಯಲ್ಲಿ ಈ ಸಮ್ಮೇಳನ ಯಶಸ್ವಿಯಾಗುವದೆಂದು ನಮ್ಮೆಲ್ಲರ ಗಾಢವಾದ ವಿಶ್ವಾಸ.

ಈ ಸಾರೆ ಸಮ್ಮೇಳನದ ಅಂಗವಾಗಿ ನಾಟಕಗೋಷ್ಠಿ, ಮಹಿಳಾಗೋಷ್ಠಿ, ಲೇಖಕಗೋಷ್ಠಿ ಗಳನ್ನು ನಡೆಸಬೇಕೆಂದು ಏರ್ಪಡಿಸಿಕೊಂಡಿದ್ದೇವೆ. ಆ ಗೋಷ್ಠಿಗಳಿಗೆ ಕ್ರಮವಾಗಿ **ನಾಟಕರತ್ನ ಗುಬ್ಬಿ ಶ್ರೀ ವೀರಣ್ಣನವರೂ, ಶ್ರೀಮತಿ ಪುಟ್ಟಮ್ಮ ಪಾಟೀಲರೂ, ಶ್ರೀ ನಿರಂಜನರವರೂ** ಅಧ್ಯಕ್ಷರಾಗಲು ಒಪ್ಪಿ ಇಲ್ಲಿಗೆ ದಯಮಾಡಿಸಿರುವುದು ಮತ್ತೊಂದು ಆನಂದದಾಯಕ ಸಂಗತಿ. ಇವರೆಲ್ಲರೂ ಸಾಹಿತ್ಯದ ಒಂದೊಂದು ಕ್ಷೇತ್ರದಲ್ಲಿ ದಿಗ್ಗಜಗಳಂತಿದ್ದಾರೆಂಬುದು ಸರ್ವವಿದಿತವಿದೆ. ಇವರೇ ಅಲ್ಲದೆ ಈ ಗೋಷ್ಠಿಗಳಲ್ಲಿ ಮುಖ್ಯ ಭಾಷಣಕಾರರನ್ನಾಗಿ ಪ್ರಸಿದ್ಧಸಾಹಿತಿಗಳಾದ **ಶ್ರೀ ಎನ್. ಕೆ. ಕುಲಕರ್ಣಿ, ಶ್ರೀ ಸಿದ್ದಯ್ಯ ಪುರಾಣಿಕರು, ಶ್ರೀ ಗುರುರಾಜರಾಯರು, ಶ್ರೀ ಚೌಡಪ್ಪನವರು, ಶ್ರೀಮತಿ ಇಂದಿರಾಬಾಯಿ, ಶ್ರೀಮತಿ ವಿಮಲಾಬಾಯಿ ಮೇಲುಕೋಟೆ, ಶ್ರೀಮತಿ ವಿನೋದಾಬಾಯಿ, ಶ್ರೀ ಮಾನ್ವಿ ನರಸಿಂಗರಾವ್, ಶ್ರೀ ಇನಾಮದಾರ್, ಶ್ರೀ ತ. ಶ್ರೀಕಂಠಯ್ಯ** ಇವರುಗಳನ್ನು ಕೇಳಿಕೊಳ್ಳಲಾಗಿದೆ. ಈ ವ್ಯವಸ್ಥೆ ಈ ಸಮ್ಮೇಳನದ ಹೊಸದಾದ ಒಂದು ಸಲ್ಲಕ್ಷಣವೆಂದು ಹೇಳಬಹುದು.

ಮಹನೀಯರೆ, ನಾನು ನಿಮ್ಮೆಲ್ಲರನ್ನೂ ಬರಮಾಡಿಕೊಳ್ಳುವ ಈ ಸಂತೋಷದ ಸಮಯದಲ್ಲಿ ರಾಯಚೂರು ಯಾವ ರೀತಿ ಇತಿಹಾಸ ಪ್ರಸಿದ್ಧಿಯನ್ನೂ, ಸಾಹಿತ್ಯ ಪ್ರಸಿದ್ಧಿಯನ್ನೂ, ಧಾರ್ಮಿಕತೆಯನ್ನೂ ಪಡೆದಿದೆಯೆಂದು ಸ್ಥೂಲವಾಗಿ ಕೆಲವು ವಿಷಯಗಳನ್ನು ಹೇಳಿದರೆ ಅಪ್ರಸಕ್ತವಾಗಲಾರದು :— ರಾಯಚೂರು ಕನ್ನಡ ನಾಡಿನ ಎರಡು ಪವಿತ್ರ ನದಿಗಳಾದ ಕೃಷ್ಣಾ - ತುಂಗಭದ್ರೆಗಳ ನಡುವಿನ ಪುಣ್ಯ ಕ್ಷೇತ್ರ; ವಿಜಯ ನಗರದ ಅರಸರಿಗೂ, ಬಹಮನೀ ಅರಸರಿಗೂ ನಡೆಯುತ್ತಿದ್ದ ಕದನಗಳ ಕಳ. ಅಶೋಕನ ಶಾಸನಗಳು ಸಿಕ್ಕಿರುವ ಮಸ್ಕಿ ಇರುವುದು ಇದೇ ಜಿಲ್ಲೆಯಲ್ಲಿ. ಸುಮಾರು ನೂರು ವರ್ಷದ ಅವಧಿಯಲ್ಲಿ ಎಪ್ಪತ್ತೈದು ಬಾರಿ ಯುದ್ಧ ನಡೆದಿರುವ ಗಂಡುಮೆಟ್ಟಿದ ದೇಶ ಇದು. ಈಗಲೂ ರಾಯಚೂರಿನ ಕೋಟೆಗಳನ್ನು ನೋಡಿದರೆ ಯಾರಿಗಾದರೂ

ಅದರ ಐತಿಹಾಸಿಕ ಪ್ರಾಮುಖ್ಯ ಅರಿವಾಗದೇ ಇರದು. ರಾಯಚೂರಿನ ಹೊರಕೋಟೆ ಮುಸಲ್ಮಾನರಿಂದ ಕಟ್ಟಲ್ಪಟ್ಟದ್ದೆಂದೂ, ಒಳಕೋಟೆ ರಾಜ ವಿಠಲನೆಂಬ ಹಿಂದೂ ರಾಜಪ್ರತಿನಿಧಿಯೊಬ್ಬನು ಕಟ್ಟಿಸಿದ್ದೆಂದೂ ಇತಿಹಾಸ ಹೇಳುತ್ತದೆ. ಆ ಕೋಟೆಯಗೋಡೆಯಲ್ಲಿರುವ ಒಂದು ಕನ್ನಡ ಶಾಸನದಲ್ಲಿ ವಾರಂಗಲ್ಲಿನ ರಾಣಿ ರುದ್ರಮ್ಮದೇವಿಯ ಮಂತ್ರಿ ಗೋರೆಗಂಗಯ್ಯ ರಡ್ಡಿಯ ಆಜ್ಞಾನುಸಾರ ರಾಜವಿಠಲನು ಕ್ರಿ. ಶ. 1294ರಲ್ಲಿ ಕಟ್ಟಿಸಿದ ಕೋಟೆಯೆಂದು ಬರೆದಿದೆ. ಈ ಕೋಟೆಯ ವೈಶಿಷ್ಟ್ಯವೆಂದರೆ ಕೆತ್ತಿದ ದೊಡ್ಡ ದೊಡ್ಡ ಕಲ್ಲು ಬಂಡೆಗಳನ್ನು ಗಾರೆ- ಇತ್ಯಾದಿಗಳ ಸಹಾಯವಿಲ್ಲದೆ ಒಂದರಮೇಲೊಂದು ಕೂಡಿಸಿ ಕಟ್ಟಿರುವುದು. ಒಂದು ಕೆತ್ತಿದ ಕಲ್ಲು ಬಂಡೆ 41 ಅಡಿ 8 ಅಂಗುಲ ಉದ್ದವಾಗಿದ್ದು 2 ಅಡಿ ಚಚ್ಚೌಕವಾಗಿದೆ. ಇದೇ ಜಿಲ್ಲೆಯ ಕುಕನೂರಿನಲ್ಲಿರುವ ಮಹಾಮಾಯೆಯ ದೇವಾಲಯವು ಚಾಲುಕ್ಯ ಶಿಲ್ಪದ ಮಾದರಿಯಾಗಿದ್ದು ಔತ್ತರೇಯ-ದಾಕ್ಷಿಣಾತ್ಯ ಶಿಲ್ಪಗಳ ಮಧುರ ಮಿಶ್ರಣವನ್ನು ತೋರಿಸುತ್ತದೆ ಅಲ್ಲಿಯ ದೇವಾಲಯಗಳು ಕ್ರಿ. ಶ. 8 ರಿಂದ 13ನೇ ಶತಮಾನದೊಳಗೆ ಬೇರೆ ಬೇರೆ ಕಾಲದಲ್ಲಿ ಕಟ್ಟಿದುವು ಆಗಿವೆ. ಕುಕನೂರಿನ ಹತ್ತಿರವೇ ಇರುವ ಕಲ್ಲೂರಿನಲ್ಲಿರುವ ಕಾಲೇಶ್ವರ, ಮಲ್ಲಿಕಾರ್ಜುನ ದೇವಾಲಯಗಳು ಶಕೆ 11ನೆಯ ಶತಮಾನದಲ್ಲಿ ಕಟ್ಟಲ್ಪಟ್ಟು ಚಾಲುಕ್ಯರೀತಿಯ ಶಿಲ್ಪದ ಉತ್ತಮ ಮಾದರಿಯಾಗಿವೆ. ಅಂತೆಯೇ ಇದೇ ಜಿಲ್ಲೆಗೆ ಸೇರಿದ ಅಲಂಪೂರ ಒಂದಾನೊಂದು ಕಾಲದಲ್ಲಿ ಆಂಧ್ರ ರಾಜಧಾನಿಯಾಗಿದ್ದ ಶಿಲ್ಪ ಕಲಾತ್ಮಕವಾದ ಅನೇಕ ದೇವಾಲಯಗಳಿಂದ ತುಂಬಿದೆ.

ಇಲ್ಲಿಗೆ ಸಮೀಪದಲ್ಲೇ ಇರುವ ಗಬ್ಬೂರಿನಲ್ಲಿ ಅನೇಕ ದೇವಾಲಯಗಳು ಜಕಣಾಚಾರಿಯ ಶಿಲ್ಪಕಲೆಯಿಂದ ಕೂಡಿದ್ದು ಅರ್ಧಮರ್ಧ ಭೂಗತವಾಗಿವೆ. ಅಲ್ಲಿ ಅನೇಕ ಶಿಲಾಲೇಖಗಳೂ ದೊರೆತು ಇತಿಹಾಸ ಕಟ್ಟಲು ಸಹಾಯವಾಗಿದೆ. ಬೀದರು ಜಿಲ್ಲೆಯಲ್ಲಿರುವ ಕಲ್ಯಾಣ ಈ ನಮ್ಮ ಪ್ರದೇಶದಲ್ಲಿಯೇ ಇದ್ದು ಇಡೀ ಹೈದರಾಬಾದು ಕರ್ನಾಟಕ ವೀರಶೈವ ವಚನಕಾರರ ಚುರುಕಿನ ಕಾರ್ಯ ಕ್ಷೇತ್ರವಾಗಿತ್ತು. ಕೃಷ್ಣಾನದಿಯ ದಂಡೆಯಲ್ಲಿರುವ ಗೂಗಲ್ಲಿನಲ್ಲಿ ಪ್ರಭುದೇವಾಲಯವೊಂದಿದೆ. ಅಲ್ಲಮ ಪ್ರಭು ಕಲ್ಯಾಣಕ್ಕೆ ಹೋಗುವ ದಾರಿಯಲ್ಲಿ ಇಲ್ಲಿ ಕೆಲವು ದಿನವಿದ್ದು ಜನಗಳಿಗೆ ಉಪದೇಶವಿತ್ತು ಹೋದ ನೆನಪೇ ಆ ಪ್ರಭುದೇವಾಲಯವೆಂದು ಹೇಳುತ್ತಾರೆ. ಅಂತೆಯೇ ದೇವಸೂಗೂರಿನ ಸೂಗೂರೇಶ್ವರ ದೇವಾಲಯವೂ, ಕೃಷ್ಣಾ–ಭೀಮ ಸಂಗಮದಲ್ಲಿರುವ ಜಿತಾಮಿತ್ರರ ಗಡ್ಡಿಯೂ, ಕೃಷ್ಣಾದಲ್ಲಿರುವ ನಾರದ ಗಡ್ಡಿ ಕ್ಷೇತ್ರವೂ, ದತ್ತಾತ್ರೇಯ ಕ್ಷೇತ್ರವೂ, ಗಾಣದಾಳ ಪಂಚಮುಖಿ ಪ್ರಾಣದೇವಾಲಯವೂ ಪವಿತ್ರ ಕ್ಷೇತ್ರಗಳಾಗಿವೆ. ನೃಪತುಂಗನು ಹೈದರಾಬಾದು ಪ್ರದೇಶದವನು. ಅಲ್ಲದೆ ಪಂಪ, ಪೊನ್ನರು ಈ ಪ್ರದೇಶದಲ್ಲಿ ಕಾರ್ಯ ನಡೆಸಿದವರು. ಈ ಜಿಲ್ಲೆ ದಾಸ ಸಾಹಿತ್ಯದ ತೌರುಮನೆಯಾಗಿದೆ ಎನ್ನಬಹುದು. ಮಾನ್ವಿಯ ಹತ್ತಿರದ ಬ್ಯಾಗವಾಟದಲ್ಲಿ ಜಗನ್ನಾಥದಾಸರು ಜನ್ಮವೆತ್ತಿ ಮಾನ್ವಿಯನ್ನೇ ತಮ್ಮ ಕಾರ್ಯಕ್ಷೇತ್ರ ಮಾಡಿಕೊಂಡಿದ್ದರು. ಇವರಿಗೆ ಮೈಸೂರು ಪ್ರಾಂತದಲ್ಲಿ ರಂಗವಲ್ಲಿದಾಸರೆಂಬ ಹೆಸರು ಪ್ರಸಿದ್ಧವಾಗಿದೆ. ಮತ್ತೆ ಅದೇ ಮಾನ್ವಿಯ ಹತ್ತಿರದ ಚೀಕಲಪರವಿಯಲ್ಲಿ ವಿಜಯದಾಸರು ಜನ್ಮವೆತ್ತಿದರು, ಗೋಪಾಲದಾಸರೂ ಈ ಪ್ರಾಂತದಲ್ಲಿದ್ದರೆಂದು ತಿಳಿದು ಬರುತ್ತದೆ. ಈ ದಾಸವರೇಣ್ಯರಿಂದ ಪವಿತ್ರವಾಗಿರುವೀನಾಡು ಹೈದರಾಬಾದು ಕರ್ನಾಟಕ. ಈ ಕಾರಣಗಳಿಂದಲೇ **ದಿ. ಬಿ. ಎಂ. ಶ್ರೀಯವರು** ನಮ್ಮ ರಾಯಚೂರನ್ನು **ಕನ್ನಡ ಕಾಶಿ** ಎಂದು ಕರೆದರೆಂದು ಕಾಣುತ್ತದೆ.

ಹದಿಮೂರನೆಯ ಶತಮಾನದಲ್ಲಿ ರಾಯಚೂರು ಜಿಲ್ಲೆಯ ದರೂರಗ್ರಾಮದ **ವೀರಭದ್ರನೆಂಬ** ಹೆಸರಿನ ವೀರಶೈವ ಕವಿ **“ನಂದಿ ಛಂದಸ್ಸು”** ಎಂಬ ಗ್ರಂಥವನ್ನು ಬರೆದನೆಂದು

ಇತ್ತೀಚಿನ ಸಂಶೋಧನೆಯಿಂದ ತಿಳಿದುಬಂದಿದೆ. ಇದೇ ಜಿಲ್ಲೆಯ ಗಣೇಕಲ್ಲು ಗ್ರಾಮದ **"ಸಂಗವಿಭು"** ಎಂಬ ಗೌಡನು **"ಕುಮಾರ ವಿಜಯ**ವೆಂಬ ಪ್ರೌಢ ಚಂಪೂ ಗ್ರಂಥ ವೊಂದನ್ನು ಸುಮಾರು 100 ವರ್ಷಗಳ ಹಿಂದೆ ರಚಿಸಿದನು. ಇದಲ್ಲದೆ ಮತ್ತೊಂದು ಶತಕವನ್ನೂ ಅವನು ರಚಿಸಿದ್ದಾನೆ. ಸುಮಾರು 60-70 ವರ್ಷಗಳ ಹಿಂದೆ ನಮ್ಮ ರಾಯಚೂರು ಸಮೀಪದ ಉಡುಮಗಲ್ಲಿನ ಕುಲಕರ್ಣಿಯೊಬ್ಬನು ಕೃಷ್ಣ ಚರಿತ್ರೆಯನ್ನು ಹರಿವಂಶವೆಂಬ ಹೆಸರಿನಿಂದ ಹಾಡು ಗಬ್ಬವಾಗಿ ರಚಿಸಿದನು. ಲಿಂಗಸೂಗೂರು ತಾಲ್ಲೂಕಿನ ಒಂದು ಹಳ್ಳಿಯಲ್ಲಿ **ರಾಚಪ್ಪ**ನೆಂಬ ಆಧುನಿಕ ಕವಿಯೊಬ್ಬನು ಪ್ರಭುಲಿಂಗಲೀಲೆಯ ಸಾಂಗತ್ಯ, ಅಕ್ಕಮಹಾದೇವಿಯ ಸಾಂಗತ್ಯ ಮೊದಲಾದ 8 ಸಾಂಗತ್ಯ ಗ್ರಂಥಗಳನ್ನು ರಚಿಸಿದನು. 17ನೆಯ ಶತಮಾನದಲ್ಲಿ ಈ ಪ್ರಾಂತದ ಮತ್ತೊಬ್ಬ ಕವಿ ಕುಮಾರರಾಮಸಾಂಗತ್ಯವನ್ನು ಸರಸವಾಗಿ ರಚಿಸಿದವನೆಂದು ತಿಳಿದುಬಂದಿದೆ. ಸರ್ಪಭೂಷಣ ಶಿವಯೋಗಿಗಳೆಂಬವರು ಕನ್ನಡದಲ್ಲಿಯೂ, ಸಂಸ್ಕೃತದಲ್ಲಿಯೂ ಗ್ರಂಥ ರಚನೆ ಮಾಡಿ ಈ ಪ್ರದೇಶವನ್ನು ತಮ್ಮ ಕಾರ್ಯಕ್ಷೇತ್ರ ಮಾಡಿಕೊಂಡಿದ್ದು ಶಿವೈಕ್ಯರಾದರು. ದಿನ್ನಿ ವೆಂಕಯ್ಯನೆಂಬ ಮತ್ತೊಬ್ಬ ಕವಿ ಅಮರೇಶ್ವರ ಪುರಾಣವೆಂಬ ಕಾವ್ಯವನ್ನು ರಚಿಸಿ ಪ್ರಸಿದ್ಧನಾದನು.

ಇದಿಷ್ಟೂ ನಮ್ಮ ಜಿಲ್ಲೆಯ ಪೂರ್ವ ಸಾಹಿತ್ಯದ ಹೆಚ್ಚಳವನ್ನು ವ್ಯಕ್ತಪಡಿಸುತ್ತದೆ. ಆ ಪರಂಪರೆಗೆ ಅನುಗುಣವಾಗಿ ಆಧುನಿಕ ವಿದ್ವಾಂಸರಾದ ಶ್ರೀಗಳಾದ ಸಿದ್ದಯ್ಯ ಪುರಾಣಿಕರು, ಮಾನ್ವಿ ನರಸಿಂಗರಾಯರು, ಡಿ. ಕೆ. ಭೀಮಸೇನರಾಯರು, ಪಟ್ವಾರಿ ರಾಮಚಂದ್ರರಾಯರೇ ಮೊದಲಾದವರೆಲ್ಲ ರಾಯಚೂರು ಜಿಲ್ಲೆಯವರೆಂಬುದು ನಮಗೆ ಹೆಮ್ಮೆಯ ವಿಷಯ.

ಈ ಊರಿನಲ್ಲಿ ಕರ್ನಾಟಕ ಸಂಘವು ಸುಮಾರು 27 ವರ್ಷಗಳಿಂದಲೂ ಕೆಲಸ ಮಾಡುತ್ತಿರುವುದು ಎಲ್ಲರಿಗೂ ಗೊತ್ತಿರುವ ವಿಷಯ. ಕನ್ನಡ ಸಾಹಿತ್ಯ ಪರಿಷತ್ತಿಗೆ ಅಂಗ ಸಂಸ್ಥೆಯಾಗಿದ್ದುಕೊಂಡು ಅದರ ಧ್ಯೇಯಗಳಿಗನುಸಾರವಾಗಿ ಕನ್ನಡ ಭಾಷೆ, ಸಾಹಿತ್ಯ ಸಂಸ್ಕೃತಿಗಳ ಸೇವೆ ಮಾಡುತ್ತಾ ಇದುವರೆಗೆ ಇಲ್ಲಿನ ಏಕೈಕ ಸಾಂಸ್ಕೃತಿಕ ಸಂಸ್ಥೆಯಾಗಿತ್ತು. ನಮ್ಮ ಸುದೈವದಿಂದ ಕಳೆದ ವರ್ಷ ಇಲ್ಲಿಯೇ ಒಂದು ಕಾಲೇಜು ಸ್ಥಾಪಿತವಾದಕಾರಣ ನಮ್ಮ ಸಾಂಸ್ಕೃತಿಕ ಚಟುವಟಿಕೆಗಳಿಗೆ ಹೆಚ್ಚಿನ ನೆರವು ಸಿಕ್ಕಿತು. ಅದೇ ಕಾಲೇಜಿನಲ್ಲಿ ಮುಂದಿನ ವರ್ಷದಿಂದ ಕನ್ನಡ, ಸಂಸ್ಕೃತಗಳ ವಿಶೇಷ ವ್ಯಾಸಂಗಕ್ಕೆ-ಎಂದರೆ ಉಸ್ಮಾನಿಯಾ ವಿಶ್ವವಿದ್ಯಾಲಯದ ಡಿ. ಓ. ಎಲ್. ಮತ್ತು ಬಿ. ಓ. ಎಲ್. ಪರೀಕ್ಷಾ ವ್ಯಾಸಂಗಕ್ಕೆ ಏರ್ಪಾಟು ಆಗುತ್ತಿದೆಯೆಂದು ತಿಳಿದು ತುಂಬಾ ಸಂತೋಷವಾಗಿದೆ. ಈ ಕರ್ನಾಟಕ ಸಂಘ ಅನೇಕ ವರ್ಷಗಳು ಬಾಡಿಗೆಯ ಕಟ್ಟಡದಲ್ಲಿದ್ದು ಇತ್ತೀಚೆಗೆ 22 ಸಾವಿರ ರೂಪಾಯಿ ವೆಚ್ಚದಲ್ಲಿ ತನ್ನದೇ ಆದ, ಚಿಕ್ಕದಾದರೂ ಸುಂದರ ಭವನ ವೊಂದನ್ನು ನಿರ್ಮಿಸಿಕೊಂಡಿದೆ. ಕರ್ಣಾಟಕ ರಾಜ್ಯ ರಚನೆಯಾದಮೇಲೆ ಈ ಕರ್ನಾಟಕ ಸಂಘಗಳೆಲ್ಲವೂ ಒಂದೊಂದು ವಿದ್ಯಾಕೇಂದ್ರಗಳಾಗಿ ಜನ ಸೇವೆಯನ್ನು ಇನ್ನೂ ಹೆಚ್ಚಿನ ಪ್ರಮಾಣದಲ್ಲಿ ಮಾಡಲೆಂಬುದೇ ನಮ್ಮ ಆಸೆ.

ಇನ್ನು ಕೆಲವೇ ವರ್ಷಗಳಲ್ಲಿ ರಾಯಚೂರು ಉದ್ಯಮ ಕೇಂದ್ರವಾಗುವ ನಿರೀಕ್ಷೆಯೂ ಇದೆ. ತುಂಗಭದ್ರ ಅಣೆಕಟ್ಟು ಈ ಜಿಲ್ಲೆಯ ಆಹಾರೋತ್ಪನ್ನವನ್ನು ಹೆಚ್ಚಿಸಿದೆ. ಆ ಆಣೆಕಟ್ಟಿನ ಹತ್ತಿರವೇ ಉತ್ಪಾದನೆ ಮಾಡಲಿರುವ ವಿದ್ಯುತ್ತಿನಿಂದ ರಾಯಚೂರು ಆಧುನಿಕ ಔದ್ಯೋಗಿಕ ನಗರವಾಗುವುದರಲ್ಲಿ ಯಾವ ಸಂದೇಹವೂ ಇಲ್ಲ.

ಮಹನೀಯರೆ, ನಿಮ್ಮೆಲ್ಲರಿಗೂ ಶುಭಾಗಮನವನ್ನು ಕೋರುವ ಹರ್ಷ ಭರದಲ್ಲಿ ನಾಲ್ಕು ಮಾತುಗಳನ್ನು ಹೆಚ್ಚಾಗಿ ಆಡಿದ್ದೇನೋ ಏನೋ! ನಾಡ ಸೋದರರು ಬಹು ಮಂದಿ ನಮ್ಮ

ಕರಿಗೆ ಓ ಗೊಟ್ಟು ಬಂದಿರುವುದನ್ನು ನೋಡಿ ಹಿಡಿಸಲಾರದ ಆನಂದದಿಂದ ಸ್ವವಿಷಯವನ್ನು ಸ್ವಲ್ಪ ಹೆಚ್ಚಾಗಿ ಹೇಳಿಕೊಂಡರೆ, ಅದು ಪರಿಚಯಾತ್ಮಕವಲ್ಲದೆ ಸ್ವಪ್ರಶಂಸಾತ್ಮಕವಲ್ಲವೆಂದು ಭಾವಿಸುತ್ತೀರೆಂದು ನಂಬಿದ್ದೇನೆ. ಬಹಳ ದೂರದಿಂದ ಬಂದಿರುವ ನಿಮಗೆಲ್ಲರಿಗೂ ಹೃತ್ಪೂರ್ವಕವಾದ ಸ್ವಾಗತವನ್ನು ಮತ್ತೊಮ್ಮೆ ಬಯಸಿ, ಇಂಥ ಸಂಭ್ರಮಗಳಲ್ಲಿ ಸ್ವಾಭಾವಿಕವಾಗಿ ಉಂಟಾಗುವ ನಮ್ಮ ವ್ಯವಸ್ಥೆಯಲ್ಲಿನ ಲೋಪ ದೋಷಗಳನ್ನು ಮನಸ್ಸಿಗೆ ತಂದುಕೊಳ್ಳದೆ ಸಹಕರಿಸಬೇಕೆಂದು ಪ್ರಾರ್ಥಿಸಿಕೊಳ್ಳುತ್ತೇನೆ. ಇಷ್ಟು ಬಿನ್ನವಿಸಿಕೊಂಡು ಈ ಸಮ್ಮೇಳನವನ್ನು ಮಾನ್ಯ **ಡಾ॥ ಮೇಲ್ಕೋಟೆಯವರು** ಉದ್ಘಾಟಿಸಬೇಕೆಂದು ಪ್ರಾರ್ಥಿಸಿಕೊಳ್ಳುತೇನೆ.

**ಜಯ ಕರ್ನಾಟಕ, ಜಯಹಿಂದ್.**

---

# ಮೂವತ್ತೆಂಟನೆಯ ಕನ್ನಡ ಸಾಹಿತ್ಯ ಸಮ್ಮೇಳನ

## ರಾಯಚೂರು

## ಅಧ್ಯಕ್ಷ ಭಾಷಣ

25-12-1955

**ಸ್ವಾಗತಾಧ್ಯಕ್ಷರೆ ಹಾಗು ಪ್ರತಿನಿಧಿಗಳೆ,**

ಈ ದಿನದ ಈ ಸುಯೋಗಕ್ಕಾಗಿ ತಮಗೆ ಖುಶಿಯಾಗಿದ್ದೇನೆ ಎಂದು ಮೊದಲು ಹೇಳಲು ಎರಡು ವಿಶೇಷ ಕಾರಣಗಳಿವೆ. ಒಂದು: ಇಂದಿಗೆ ಸರಿಯಾಗಿ 20 ವರುಷಗಳ ಮುಂಚೆ ಇದೇ ರಾಯಚೂರಿನಲ್ಲಿ ಕನ್ನಡ ಸಾಹಿತ್ಯ ಸಮ್ಮೇಳನದ ಅಧಿವೇಶನ ಸೇರಿತ್ತು; ನಾನು ಮೊದಲ ಸಲ ಸಮ್ಮೇಳನದ ಅಧಿವೇಶನದಲ್ಲಿ ಹಾಜರಿದ್ದುದು ಆಗ. ಈಗ ಅದೇ ರಾಯಚೂರಿನಲ್ಲಿ ಸಮ್ಮೇಳನದ ಅಧಿವೇಶನದ ಅಧ್ಯಕ್ಷನೆಂದು ನನ್ನನ್ನು ಕೂಡ್ರಿಸಿ ನನ್ನ ಆ ಪ್ರಥಮ ಸಂದರ್ಭದ ದೃಢತೆಯ ಸವಿರುಚಿಯನ್ನೊದಗಿಸಿದ್ದೀರಿ. ಇನ್ನೊಂದು ಕಾರಣ ವೆಂದರೆ, 20 ವರ್ಷಗಳ ಮುಂಚಿನ ಅಧಿವೇಶನಕ್ಕೆ ಬಂದಾಗ ಪರಿಷತ್ತು ಇಡಿಯ ಕರ್ನಾಟಕಕ್ಕೆ ನಿಕಟವಾಗಿ ಸಂಬಂಧಿಸಿರಬೇಕೆಂಬ ಅಪೇಕ್ಷೆಯಿಂದ ಅದರ ಘಟನೆಯಲ್ಲಿ ಬದಲಾವಣೆಯಾಗಬೇಕೆಂದು ಅಭಿಪ್ರಾಯಪಟ್ಟಿದ್ದೆ. ಕರ್ನಾಟಕ ಒಂದಾಗಬೇಕೆಂದು ಮೊದಲಿನಿಂದಲೂ ಬಯಸಿ ಹೆಣಗುತ್ತಲಿದ್ದ ಮತ್ತು ಅದು ಒಂದೇ ಆಗಿದೆ ಎಂದು ಮೊದಲಿ ನಿಂದಲೂ ತಮ್ಮ ಕೃತಿ ಮತ್ತು ಚಟುವಟಿಕೆಗಳಿಂದ ತೋರಿಸುತ್ತಲಿದ್ದ ಕನ್ನಡ ಸಾಹಿತಿಗಳ ಈ ಸಮ್ಮೇಳನಕ್ಕೆ, ಇಂದು ಏಕೀಕೃತ ಕರ್ನಾಟಕದ ಸಾಹಿತ್ಯ ಸಮ್ಮೇಳನಕ್ಕೆ ಅಧ್ಯಕ್ಷ ನಾಗುವ ಮೊದಲ ಭಾಗ್ಯ ಒದಗಿತು, ಅದನ್ನು ಒದಗಿಸಿದ್ದಕ್ಕಾಗಿ ನಾನು ತಮಗೆ ಖುಣಿ ಯಾಗಿದ್ದೇನೆ ಎಂದು ಹೇಳ ಬಯಸುತ್ತೇನೆ. ಈ ವಿಶೇಷ ಕಾರಣಗಳಿದ್ದಿಲ್ಲವಾದರೆ ಈ ಉಪಚಾರದ ಅಗತ್ಯವೂ ಇದ್ದಿರಲಿಲ್ಲ. ಯಾಕಂದರೆ ಒಂದೆಡೆ, ಸಮ್ಮೇಳನಾಧ್ಯಕ್ಷಪದವಿಯು ಯಾವದೊಂದು ಅಧಿಕಾರದ ಸ್ಥಾನವಲ್ಲ; ಇನ್ನೊಂದೆಡೆ, ತಾವೆಲ್ಲರೂ ಒಂದು ಸ್ನೇಹದಿಂದ ನನ್ನಲ್ಲಿಟ್ಟ ಭರವಸೆಯ ಪರೀಕ್ಷೆ ಇದು. ಪರೀಕ್ಷೆಗಾಗಿ ಯಾವ ವಿದ್ಯಾರ್ಥಿಯೂ ಪರೀಕ್ಷಕ ರಿಗೆ ಕೃತಜ್ಞನಾಗುವ ಸಂದರ್ಭವಿಲ್ಲ—ಈ ಮರ್ತ್ಯ ಲೋಕದಲ್ಲಿ.

ಸಮ್ಮೇಳನಾಧ್ಯಕ್ಷ ಪದವಿಯು ಯಾವದೊಂದು ಅಧಿಕಾರದ ಸ್ಥಾನವಲ್ಲ ಎಂದು ಹೇಳಿದೆನಾದರೂ ಆ ಮಾತು ಪೂರ್ತಿಯಾದುದು ಇಲ್ಲವೆ ಸರಿಯಾದುದು ಎಂದು ಹೇಳು ವಂತಿಲ್ಲ. ಯಾಕಂದರೆ, ಅಧಿಕಾರ ಎಂಬ ಕಲ್ಪನೆ ಬೇರೆಬೇರೆ ತರದ್ದಾಗಿದೆ. ಇನ್ನೊಬ್ಬರಿ ಗಿಂತ ತಾನು ಬೇರೆಯುವ, ಮೇಲಿನವ ಎಂಬುದು ಒಂದು ತರದ ಕಲ್ಪನೆ; ತಾನೂ ಮಿಕ್ಕ ವರಂತೆಯೆ ಅಲ್ಲದೆ ಮಿಕ್ಕವರ ಒಡನೆ ಕೂಡ ಎಂಬುದು ಇನ್ನೊಂದು ಕಲ್ಪನೆ. ಅಧಿಕಾರ ಎಂಬ ಶಬ್ದಕ್ಕೆ ಸಾಮಾನ್ಯ ವ್ಯವಹಾರದಲ್ಲಿ ಮೊದಲ ಕಲ್ಪನೆಯೆ ಹೆಚ್ಚು ರೂಢವಾಗಿದೆ;

ಆ ಅರ್ಥದಲ್ಲಿ ಇದು ಅಧಿಕಾರಸ್ಥಾನವಲ್ಲ ಎಂದು ಹೇಳುವುದು ನನ್ನ ಉದ್ದೇಶ. ಆದರೆ ಇನ್ನೊಂದು ಅರ್ಥದಲ್ಲಿ ಇದು ಅಧಿಕಾರಸ್ಥಾನವಾಗಿದೆ. ನಾನು ಮಿಕ್ಕವರಂತೆ, ಮಿಕ್ಕವರೊಡನೆಯೆ ಇದ್ದೇನೆ; ಒಂದು ವೇಳೆ ಕೆಲವರಿಗಿಂತ ವಯಸ್ಸಿನಿಂದ (ಸ್ವಭಾವದಿಂದಲ್ಲ) ಹಿರಿಯನಾಗಿರಬಹುದು. ಆದರೆ ಈ ಸ್ಥಾನವನ್ನು ನಾನು ಆಕ್ರಮಿಸಿರುವುದು ನಿಮ್ಮೆಲ್ಲರ ಸರಿಸಮಾನಸ್ಕಂಧ ಎಂಬ ಅಧಿಕಾರದಿಂದಲೆ. ಈ ಅಧಿಕಾರವು ಸ್ನೇಹ-ಸೌಜನ್ಯಗಳ ತಳಹದಿಯ ಮೇಲೆ ನಿಂತುದುದರಿಂದ ಕಾರ್ಯರಂಗದಲ್ಲಿ ಅದು ಹೆಚ್ಚು ಪ್ರಭಾವಶಾಲಿಯಾಗುವುದೆಂಬುದರಲ್ಲಿ ಸಂದೇಹವಿಲ್ಲ.

**ಕನ್ನಡ ಪ್ರಾಂತ**

ಐವತ್ತು ವರ್ಷಗಳ ಹಿಂದೆ ಬಂಗಾಲ ಪ್ರಾಂತದ ವಿಭಜನೆಯ ವಿರುದ್ಧ ನಡೆದ ಚಳುವಳದ ವಾತಾವರಣದಲ್ಲಿ ರಾಜಕಾರಣದಲ್ಲಿ ಯಾವ ರೀತಿಯಿಂದಲೂ ಸಂಬಂಧವಿಲ್ಲದ ಕೆಲವು ಕನ್ನಡ ಸಾಹಿತ್ಯಾಭಿಮಾನಿಗಳು ಧಾರವಾಡದ ಕರ್ನಾಟಕ ವಿದ್ಯಾವರ್ಧಕ ಸಂಘದ ಕಾರ್ಯಸಮಿತಿಯಲ್ಲಿ ಒಂದು ಗೊತ್ತುವಳಿಯನ್ನು ಸ್ವೀಕರಿಸಿದ್ದರು. ಆ ಗೊತ್ತುವಳಿ ಎಂದರೆ ಆಡಳಿತ, ಶಿಕ್ಷಣ ಮತ್ತು ಸಂಸ್ಕೃತಿಗಳ ಅನುಕೂಲತೆ ಮತ್ತು ರಕ್ಷಣೆಗಾಗಿ ಮುಂಬಯಿ, ಮದರಾಸು, ಮೈಸೂರು ಮೊದಲಾದ ಭಾಗಗಳ ಎಲ್ಲ ಕನ್ನಡ ಜಿಲ್ಹೆಗಳನ್ನು ಒಂದೇ ಪ್ರಾಂತವನ್ನಾಗಿ ಮಾಡಬೇಕೆಂದು. ತಮ್ಮ ಗೊತ್ತುವಳಿ ತಾತ್ತ್ವಿಕ ದೃಷ್ಟಿಯಿಂದ ಎಷ್ಟು ಅಗತ್ಯ ಮತ್ತು ಮಹತ್ವದ್ದಾಗಿತ್ತೋ ಅಷ್ಟೇ ಕಾರ್ಯರೂಪದಲ್ಲಿ ಬರಲು ದುಸ್ಸಾಧ್ಯವಾಗಿತ್ತೆಂಬುದನ್ನು ಆ ಸಾಧು ಹೃದಯದ ಸಾಹಿತಿಗಳು ಅರಿತಿದ್ದರೊ ಇಲ್ಲವೊ! ಆದರೆ ದೇಶವು ಸ್ವತಂತ್ರವಾದೊಡನೆ ತಮ್ಮ ಇಚ್ಛೆ ನೆರವೇರಿತೆಂದು ಇಂದು ಅವರೆಲ್ಲರಿಗೂ— ಅಭಿಮಾನವೆನಿಸಿರಬಹುದಲ್ಲವೆ? ಕರ್ನಾಟಕ ಪ್ರಾಂತನಿರ್ಮಾಣದ ಈ ಅರುಣೋದಯ ಕಾಲದಲ್ಲಿ ಅದಕ್ಕಾಗಿ ಬಯಸಿದ, ಹೆಣಗಿದ ಎಲ್ಲರನ್ನೂ ನಾವು ಮೊದಲು ಅಭಿಮಾನದಿಂದ, ಆದರದಿಂದ ಕೃತಜ್ಞತಾಪೂರ್ವಕವಾಗಿ ಸ್ಮರಿಸೋಣ. ಅದರಂತೆಯೆ ಇಂದು ಈ ಘಟನೆಯನ್ನು ಅಸ್ತಿತ್ವದಲ್ಲಿ ತಂದುದಕ್ಕಾಗಿ ನಾಡಿನ ನೇತಾರರಿಗೂ ಕೇಂದ್ರ ಮತ್ತು ಸಂಬಂಧಿಸಿದ ರಾಜ್ಯಸರಕಾರಗಳಿಗೂ ಕೃತಜ್ಞತೆಯನ್ನು ಸಲ್ಲಿಸೋಣ. ಶಾಂತವಾತಾವರಣದಲ್ಲಿ ಪ್ರಾಂತವೆ ನಿರ್ಮಾಣವಾಗುತ್ತಿರುವಾಗ ಗಡಿಭಾಗಗಳ ಪ್ರಶ್ನವೂ ಶಾಂತರೀತಿಯಿಂದಲೆ ಸರ್ವಸಮ್ಮತವಾಗಿ ಬಿಡಿಸಲ್ಪಡುವುದೆಂದು ಆಶಿಸಬಹುದಲ್ಲವೆ? ಮಹಾಭಾರತ ಕಾಲದಿಂದ ನಡೆದು ಬಂದ "ಕರ್ನಾಟಕ" ಎನ್ನಿರಿ, ಇತ್ತೀಚಿನ ಕಾಲದಿಂದ ನಡೆದು ಬಂದ "ಮೈಸೂರು" ಎನ್ನಿರಿ; ಹೆಸರು ಯಾವದಾದರೂ ರಾಜ್ಯ ಕನ್ನಡಿಗರದೆ ಅಲ್ಲವೆ? ಗಡಿ ನಿಂತರೂ ದೇಶ ನಮ್ಮದೆ ಅಲ್ಲವೆ?

**ಏಕೀಕೃತ ಕರ್ನಾಟಕದ ಸಾಹಿತಿ**

ಸಂಸ್ಕೃತಿ, ಸಾಹಿತ್ಯ ಮತ್ತು ಜೀವನದ ದೃಷ್ಟಿಯಿಂದ ಕರ್ನಾಟಕದ ಏಕೀಕರಣವನ್ನು ಬಯಸಿ ಅದಕ್ಕಾಗಿ ದುಡಿಯುತ್ತಿದ್ದ ಕನ್ನಡ ಸಾಹಿತಿಗಳ ಹೊಣೆ ಇನ್ನು ಹೆಚ್ಚಿದೆ ಎನ್ನಬಹುದು. ಇಂದು ಅಲ್ಲಲ್ಲಿ ಸಂಕುಚಿತ ದೃಷ್ಟಿಯ ವಾತಾವರಣವೆ ಹೆಚ್ಚಾಗಿ ಕಂಡುಬರುತ್ತಲಿದೆ. ಇದಕ್ಕೆ ಅನೇಕ ಕಾರಣಗಳಿವೆ. ಇವೆಲ್ಲ ಕಾರಣಗಳ ಬುನಾದಿಯಾಗಿದ್ದುದು

ಮನುಷ್ಯನ ಸ್ವಭಾವ. ಮನುಷ್ಯ ಸ್ವಭಾವವನ್ನು ಚೆನ್ನಾಗಿ ಅರಿಯಬಲ್ಲ ಸಾಹಿತಿ ಈಗ ಸಹಾನುಭೂತಿಯಿಂದ ವರ್ತಿಸಬೇಕಾಗಿದೆ. ತನ್ನ ವಿಶಾಲವಾದ ಮತ್ತು ಸಹಾನುಭೂತಿಯ ದೃಷ್ಟಿಯಿಂದ ಒಂದೆಡೆ ಭಾರತವು ಒಂದು ದೇಶ ಎಂದು, ಇನ್ನೊಂದೆಡೆ ಕನ್ನಡಿಗರೆಲ್ಲರೂ ಒಂದೇ ಕುಲದವರು ಮತ್ತು ಭಾರತೀಯರು ಎಂದು ಮಿಕ್ಕವರಿಗೆ ತಿಳಿಸಿಕೊಡುವುದು ಸಾಹಿತಿಯ ಕರ್ತವ್ಯಗಳಲ್ಲಿ ಒಂದಾಗಿದೆ. ದೇಶ, ದೇಶದ ಸಂಸ್ಕೃತಿ, ದೇಶದ ಜನತೆ ಇವೆಲ್ಲದರ ಬಗ್ಗೆ ಅಭಿಮಾನವಿದ್ದಷ್ಟೆ ಜ್ಞಾನವೂ ಸಾಹಿತಿಗೆ ಅಗತ್ಯವಾಗಿದೆ. ತನ್ನವರ ಸುಖದುಃಖಗಳಲ್ಲಿ ಸಮಭಾಗಿಯಾಗಬಲ್ಲ ಸಾಹಿತಿ ಕ್ರಮೇಣ ತನ್ನವರಲ್ಲ ಎನ್ನಿಸಿಕೊಳ್ಳುವವರ ಸುಖದುಃಖಗಳಲ್ಲಿ ಸಮಭಾಗಿಯಾಗಬಲ್ಲ. ವಿಜ್ಞಾನದ ಪ್ರಗತಿ ಮತ್ತು ಸುಖಜೀವನದ ಅಗತ್ಯ ಇವುಗಳಿಗಾಗಿ ಒಂದಾಗುತ್ತಲಿದ್ದ ಜಗತ್ತಿನಲ್ಲಿ ಸಾಹಿತಿಯ ಹೊಣೆ ದೊಡ್ಡದಿದೆ.

**ಎಲ್ಲರೂ ಸಾಹಿತಿಗಳೆ !**

ಸಂಸಾರದಲ್ಲಿ ಸಾಹಿತಿಯ ಸ್ಥಾನವು ಇಷ್ಟು ಮಹತ್ತ್ವದ್ದಾಗಿದೆಯಾದ್ದರಿಂದ ಸಾಹಿತಿಯ ವ್ಯಕ್ತಿತ್ವದ ಆದರ್ಶವು ಉಚ್ಚತರದ್ದಾಗಬೇಕಾಗಿದೆ. ಸಾಮಾನ್ಯವಾಗಿ, ಬರೆದುದನ್ನು ಇಲ್ಲವೆ ಬರೆಯಿಸಿದುದನ್ನು ಅಚ್ಚುಹಾಕಿಸಲು ಧೈರ್ಯ ಇಲ್ಲವೆ ಧನ ಉಳ್ಳವನಿಂದ ತಿನ್ನಲು ತುತ್ತು ಇಲ್ಲದಾಗ್ಗೂ ಅನಿವಾರ್ಯವೆನಿಸಿ ಬರೆಯುವವನ ವರೆಗೆ ಇಂದು ಸಾವಿರಾರು ಸಾಹಿತಿಗಳು ಅಸ್ತಿತ್ವದಲ್ಲಿದ್ದಾರೆ, ಬರುತ್ತಲಿದ್ದಾರೆ. ಕನ್ನಡದಲ್ಲೂ ಈ ನಿಯಮಕ್ಕೆ ಅಪವಾದವಿಲ್ಲ. ಇದಲ್ಲದೆ ಇಂದಿನ ವ್ಯಕ್ತಿಸ್ವಾತಂತ್ರ್ಯದ ಕಾಲದಲ್ಲಿ ಯಾರನ್ನೂ ತಡೆಯಲು ಶಕ್ಯವಿಲ್ಲ. ಒಂದು ದೃಷ್ಟಿಯಿಂದ ಇದು ಒಳ್ಳೆಯದೆ ಎನ್ನಬಹುದಾಗಿತ್ತು. ಸಾಹಿತಿಯಾಗಲು ಪ್ರಯತ್ನಿಸುವ ಅವಕಾಶ ಪ್ರತಿಯೊಬ್ಬನಿಗೂ ಇದ್ದರೆ ಒಳ್ಳೆಯದೆ ಅಲ್ಲವೆ? ಯಾವ ಕಾಲದಲ್ಲಿ ಯಾವನೆ ಶ್ರೇಷ್ಠ ಸಾಹಿತಿಯಾಗುವ ಯೋಗವಿದ್ದಲ್ಲಿ ಅದು ಸುಲಭಸಾಧ್ಯವಾಗಬಹುದು. ಇದು ನಿಜ. ಆದರೆ ಪ್ರಯತ್ನಿಸುವವರೆಲ್ಲ ತಮ್ಮಲ್ಲಿ ಯೋಗ್ಯತೆ ಇಲ್ಲ ಎಂದು ಕಂಡುಬಂದೊಡನೆ ತಡೆಯುವರೆಂಬ ಭರವಸೆ ಎಲ್ಲಿದೆ? ಇಷ್ಟೇಕೆ? ಯೋಗ್ಯತೆ ಇಲ್ಲ ಎಂದು ಕಂಡುಬಂದರೆ ಇನ್ನಿಷ್ಟು ಹಟದಿಂದ, ವಕೀಲಿಯ ವಿಮರ್ಶೆಗಳಿಂದ, ಮೋಹಕ ಮುನ್ನುಡಿಗಳಿಂದ, ಇನ್ನೂ ಅನೇಕ ತರದಿಂದ ತಮ್ಮಲ್ಲಿ ಯೋಗ್ಯತೆ ಇದೆ ಎಂದು ಸಾಧಿಸಿಕೊಳ್ಳುವ ಅನೇಕರಿದ್ದಾರೆ. ಇಂದು ಸಾಹಿತ್ಯದ ಮಟ್ಟ ನಿಂತಲ್ಲಿಯೇ ನಿಂತಿದ್ದರೆ, ಒಂದು ವೇಳೆ ಕೆಳಮಟ್ಟಕ್ಕೆ ಇಳಿದಿದ್ದರೆ ಅದಕ್ಕೆ ಇಂತಹ "ಹವ್ಯಾಸ ಸಾಹಿತಿ"ಗಳು ಹೆಚ್ಚಾಗಿ ಕಾರಣರಾಗಿದ್ದಾರೆ. ಕುರುಬನು ಕಾಲಿದಾಸನಾದನೆಂಬ ಸಂಪ್ರದಾಯದ ಅಭಿಮಾನಿಯಾದ ನಾನು ಯೋಗ್ಯತೆ ಇಲ್ಲದವರು ಬರೆಯುವ ಯತ್ನವನ್ನೆ ಮಾಡಬಾರದು ಎಂಬ ಅಭಿಪ್ರಾಯವನ್ನು ಹೇಗೆ ಒಪ್ಪಿಕೊಳ್ಳುವೆ? ಬೇಕಾದವರು ಯತ್ನಿಸಲಿ, ಎಲ್ಲರೂ ಯತ್ನಿಸಲಿ; ಆದರೆ ತಮ್ಮ ಯತ್ನದ ಅನುಭವವನ್ನೂ, ಬುದ್ಧಿಯನ್ನೂ ಕಲಿತುಕೊಳ್ಳುವ ಯೋಗ್ಯತೆ ಮಾತ್ರ ಅವರಲ್ಲಿ ಇರಲಿ: ಇಲ್ಲವಾದರೆ ಅದು ಬುದ್ಧಿವಂತನ ಯತ್ನವೆನಿಸುವುದಿಲ್ಲ.

**ಹೊಸ ಪದ್ಧತಿ**

ಹುಟ್ಟನಿಂದಲೆ ನಿಜವಾದ ಸಾಹಿತಿ ಮೂಃ ಬರುತ್ತಾನೆ ಎಂದು ಕೆಲವರು ಹೇಳು

ತ್ತಾರೆ. ಆದರೆ ನಮ್ಮ ಕಾಲದಲ್ಲಿ ಅಂತಹ ಸಾಹಿತಿಯೂ ಹುಟ್ಟಿಲ್ಲವಾದ್ದರಿಂದ ಈ ಮಾತನ್ನು ನಾವು ಈ ಜನ್ಮದಲ್ಲಿ ನಂಬುವುದು ಬೇಡ. ಕೆಲವು ಹುಟ್ಟುಗುಣಗಳನ್ನು ಬೆಳೆಯಿಸಿಕೊಂಡು ಸಾಹಿತಿಯಾಗಬಹುದಾದರೂ, ಹುಟ್ಟಿಗೆ ಸಂಬಂಧವಿಲ್ಲದ, ಪರಿಸ್ಥಿತಿಗೆ ಸಂಬಂಧಿಸಿದ ಕೆಲವು ಗುಣಗಳು ಸಾಹಿತಿಗೆ ಅಗತ್ಯವಾಗಿವೆ ಎಂಬುದಕ್ಕೆ ಒಂದೇ ಒಂದು ದೃಷ್ಟಾಂತ ಸಾಕು. ಭಾಷೆಯಮೇಲಿನ ಪ್ರಭುತ್ವ ಹುಟ್ಟಿನಿಂದ ಬರುವುದೆ? ಇಲ್ಲವೆ ರಾತ್ರಿ ನಿದ್ದೆಯನ್ನು ಕೂಡ ತೊರೆದು ಓದಿ ಕಲಿತುಕೊಂಡರೆ ಬರುವುದೆ? ಈ ದೃಷ್ಟಾಂತವನ್ನು ನಾನು ಬುದ್ಧಿಪೂರ್ವಕವಾಗಿ ಕೊಡಲಿದ್ದೇನೆ. ಯಾಕೆಂದರೆ, ಭಾಷೆ ಸಾಹಿತ್ಯದ ಶರೀರ. ಶರೀರ ದೃಢವಿಲ್ಲದೆ ಜೀವ ಸುರಕ್ಷಿತವಿರಲಾರದು. ಇಂದು ನಮ್ಮ ಸಾಹಿತ್ಯದ ಶರೀರ ಅವಶ್ಯವಿದ್ದಷ್ಟು ಸದೃಢವಾಗಿಲ್ಲ ಎಂದೇ ಹೇಳಬಹುದು. ಬರೆದುದನ್ನೆ ಬರೆಯುವುದು, ಇನ್ನೊಬ್ಬರ ಮಾದರಿಯನ್ನು ನೋಡಿಕೊಂಡರೇನೆ ಬರೆಯಲು ಬರುವುದು ಇದು ಭಾಷೆಯ ದೌರ್ಬಲ್ಯದ ಲಕ್ಷಣ. ಕವಿತೆ, ಕತೆ, ಕಾದಂಬರಿ, ನಾಟಕ, ಏಕಾಂಕ ಇವೆಲ್ಲವುಗಳ ಮಾದರಿ ಒಂದು ಹಂತಕ್ಕೆ ಬಂದು ನಿಂತಿದೆ. ಹೊಸ ವಿಚಾರ, ಹೊಸ ತಂತ್ರ, ಹೊಸ ಶೈಲಿ ಇವು ಹೆಚ್ಚಾಗಿ ಕಂಡುಬರುವುದಿಲ್ಲ. ದೇಶದ ಪರಿಸ್ಥಿತಿ ಬದಲಾಗಿದೆ, ಜನಜೀವನದ ದೃಷ್ಟಿಧೋರಣೆಗಳೂ, ಸಾಮಾಜಿಕ ಜಾಗೃತಿಯ ಹೊಂಬೆಳಗೂ ಮೂಡುತ್ತಲಿವೆ, ಸಾಕ್ಷರತೆ ಹಬ್ಬುತ್ತಲಿದೆ; ಆದರೂ ನಮ್ಮ ಕತೆ–ಕಾದಂಬರಿಗಳಲ್ಲಿಯ ನಾಯಕ–ನಾಯಕಿಯರು ಕೆಲವು ವರ್ಷಗಳ ಮುಂಚಿನಂತೆಯೆ ಈಗಲೂ ವರ್ತಿಸುತ್ತಲಿದ್ದಾರೆ.

**ಆತ್ಮವಂಚನೆ ಬೇಡ**

ಇತಿಹಾಸದ ರಚನೆಯಾಗುತ್ತಲಿದೆ, ಆದರೆ ಅದನ್ನು ಶಬ್ದಗಳಲ್ಲಿ ತಿಳಿಸಿಕೊಡುವ ಸಾಮರ್ಥ್ಯ ನಮ್ಮಲ್ಲಿಲ್ಲ. ಕೌರವ–ಪಾಂಡವರ ಯುದ್ಧಕ್ಕೆ ಮಹತ್ತ್ವವಿಲ್ಲ; ಅದನ್ನು ವ್ಯಾಸ–ವೈಶಂಪಾಯನರು ಆ ರೀತಿ ಬರೆದುದಕ್ಕೆ ಕೌರವ–ಪಾಂಡವ ಯುದ್ಧದ ಕತೆ ಮಹತ್ತ್ವದ್ದಾಯಿತು. ಅದೇ ತೆರನಾಗಿ ಇಂದಿನ ಬದಲಾಗುತ್ತಿರುವ ಜೀವನದ ಕತೆಯನ್ನು ತಕ್ಕ ಶಬ್ದಗಳಲ್ಲಿ ಚಿತ್ರಿಸುವ ಸಾಹಿತಿಗಳು ನಮಗೆ ಬೇಕಾಗಿದ್ದಾರೆ; ಇಂತಹ ಸಾಹಿತಿಗಳು ಬಂದ ದಿನ ಆಧುನಿಕ ಕನ್ನಡ ಸಾಹಿತ್ಯ ಇನ್ನೂ ಒಂದು ಹೆಜ್ಜೆ ಮುಂದೆ ಇಟ್ಟೀತೆಂದು ಹೇಳಬಹುದು. ಅಂತಹ ಸಾಹಿತಿಗಳ ಉದಯವಾಗುವಂತೆ ಅನುಕೂಲ ವಾತಾವರಣವನ್ನು ನಿರ್ಮಿಸುವ ಬಗ್ಗೆ ವಿಚಾರಮಾಡಲು ಸಾಹಿತ್ಯ ಸಮ್ಮೇಳನವೇ ತಕ್ಕ ಸಭಾಂಗಣವಾಗಿದೆ ಎಂದು ತಿಳಿದು ನಾನು ನನ್ನ ಕೆಲವು ವಿಚಾರಗಳನ್ನು ತಮ್ಮ ಮುಂದೆ ಇಡಬಯಸುತ್ತೇನೆ.

**ಸಂಸ್ಕೃತ ಅಭ್ಯಾಸದ ಅಗತ್ಯ**

ಇಂದು ನಮ್ಮ ತರುಣ ಸಾಹಿತಿಗಳು ಕನ್ನಡ ಸಾಹಿತ್ಯ ಪ್ರವಾಹವನ್ನು ಹೊಸದಾದ ಮತ್ತು ನಿರರ್ಗಳವಾದ ದಾರಿಗೆ ಹರಿಬಿಡಬೇಕಾದರೆ ಕೆಲವು ಸಂಗತಿಗಳು ಅಗತ್ಯವಾಗಿವೆ. ಆ ಸಂಗತಿಗಳ ಅಭಾವಕ್ಕಾಗಿ ಇಂದು ಹೊಸಬರಲ್ಲಿ ಬರೆಯುವವರ ಸಂಖ್ಯೆ ಹೆಚ್ಚಾಗುತ್ತಿದ್ದರೂ ಅಷ್ಟಕ್ಕೆ ಓದುಗರ ಸಂಖ್ಯೆ ಕಡಿಮೆಯಾಗಿರಬಹುದಲ್ಲದೆ ಬೇರೆ ಹೇಳುವಂತಹದೇನೂ ಇಲ್ಲ. ಈ ಮಾತಿನಲ್ಲಿ ತರುಣ ಲೇಖಕರಿಗೆ ಅನಾದರವಿಲ್ಲ: ತದ್ವಿರುದ್ಧವಾಗಿ, ಅವರ ಸಾಹಸಕ್ಕಾಗಿ ಮೆಚ್ಚಿಗೆ ಇದೆ, ಅವರ ಹಟಕ್ಕಾಗಿ ಅಭಿನಂದನೆ ಇದೆ, ಸಾಹಿತ್ಯದ ಬಗ್ಗೆ ಅವರಲ್ಲಿದ್ದ ಆಸಕ್ತಿಗಾಗಿ ಸಮಾಧಾನವಿದೆ. ಆದರೆ ಈ ತರುಣರ

ಪ್ರಯತ್ನಗಳು — ನಾನು ಈಗ ಹೇಳಲಿರುವ ಸಂಗತಿಗಳಿಲ್ಲದಲ್ಲಿ — ಫಲಕಾರಿಯಾಗುವವಲ್ಲದೆ ಕನ್ನಡ ಸಾಹಿತ್ಯದ ಮಟ್ಟವನ್ನೂ ಉತ್ತಮಗೊಳಿಸುವುವು. ಈ ಸಂಗತಿಗಳಲ್ಲಿ ನನ್ನ ದೃಷ್ಟಿಯಿಂದ ಮೊದಲನೆಯದೆಂದರೆ, ಸಂಸ್ಕೃತ ಭಾಷೆಯ ಮತ್ತು ಸಾಹಿತ್ಯದ ಅಭ್ಯಾಸ ಮತ್ತು ಪರಿಚಯ. ಕನ್ನಡವು ದ್ರಾವಿಡ ಗುಂಪಿನ ಭಾಷೆ, ಸಂಸ್ಕೃತ ಆರ್ಯ ಗುಂಪಿನ ಭಾಷೆ ಎಂಬ ಶಾಸ್ತ್ರ ನನಗೆ ಗೊತ್ತಿದೆ. ಆದರೆ ಭಾಷೆ ಅದನ್ನು ನುಡಿಯುವ ಮನುಷ್ಯನೊಡನೆ ಜೀವಂತವಾಗಿರುವುದಲ್ಲದೆ ಶಾಸ್ತ್ರದ ವ್ರತನಿಯಮಗಳನ್ನು ಆಚರಿಸುವುದಿಲ್ಲ. ಈ ಎರಡು ಭಾಷೆಗಳ ಮೂಲ ಬೇರೆಯಾಗಿದ್ದರೂ ಇವುಗಳನ್ನು ಆಡುವವರ ಜೀವನ ಸಾವಿರಾರು ವರ್ಷಗಳಿಂದ ಒಂದೇ ಪ್ರವಾಹವಾಗಿದೆ. ಇವರಿಬ್ಬರ ಸಂಸ್ಕೃತಿ, ಇತಿಹಾಸ, ದಂತಕಥೆ, ಸಂಪ್ರದಾಯ ಇವು ಒಂದನ್ನೊಂದು ಹೊಂದಿಕೊಂಡು ಬೆಳೆದಿವೆ. ಸಂಸ್ಕೃತವನ್ನು ಅರಿಯದ ಹಳ್ಳಿಗನು ಕೂಡ "ಹಣೆಬ್ಯಾಗ ಏನ್ಬರೆದೇತ್ಯೋ ಅಳಿಸಾಕ ಬಂದೀತ?" ಎನ್ನುವನು. "ಲಿಖಿತಮಪಿ ಲಲಾಟೇ ಪ್ರೋಜ್ಝಿತುಂ ಕಃ ಸಮರ್ಥಃ?" ಎಂಬ ಸಂಸ್ಕೃತ ಮತ್ತು ಸಂಸ್ಕೃತಿ ಅದು; ಕಷ್ಟದಲ್ಲಿದ್ದಾಗ "ವನವಾಸ ನಡದೇತಿ" ಎನ್ನುವನು. ರಾಮಾಯಣ–ಮಹಾಭಾರತ ಸಂದರ್ಭವದು. ನಮ್ಮ ಭಾಷೆ, ನಮ್ಮ ವಿಚಾರ, ನಮ್ಮ ರೀತಿನೀತಿಗಳು, ನಮ್ಮ ಗಾದೆಯ ಮಾತುಗಳು, ನಮ್ಮ ಅಜ್ಜಿಯರು ಹೇಳುವ ಕತೆಗಳು — ಇವೆಲ್ಲವೂ ಆರ್ಯರ ಸಂಸ್ಕೃತಿಯೊಡನೆ ಕಲಬೆರಕೆಯಾಗಿ, ಆರ್ಯದ್ರಾವಿಡವೆಂಬ ಭೇದವೆ ಮಾಯವಾಗಿ ಸಂಸ್ಕೃತ ಸಾಹಿತ್ಯದ ಮಾರ್ಗವಾಗಿ ನಮಗೆ ಜೀವನಶಕ್ತಿಗಳಾಗಿ ದೊರೆತಿವೆ. ಸಂಸ್ಕೃತ ಭಾಷೆಯನ್ನರಿಯದಿದ್ದರೆ ಒಂದೆಡೆ ಬೇಕಾದ ವಿಚಾರಕ್ಕೆ ತಕ್ಕ ಶಬ್ದಸಾಮಗ್ರಿ, ಇಲ್ಲದೆ ಹೋದರೆ, ಇನ್ನೊಂದೆಡೆ ನಮ್ಮಲ್ಲಿಯ ಸಾಮಾನ್ಯ ಜನರ ಮಾಧ್ಯಮ ನಮಗೆ ಇಲ್ಲದಂತಾಗುವುದು ಸಂಸ್ಕೃತದ ಅಗತ್ಯದ ಬಗ್ಗೆ ಕನ್ನಡಿಗರಲ್ಲಿ ಆಂಡಯ್ಯನ ಕಾಲದಿಂದಲೂ ಭಿನ್ನಾಭಿಪ್ರಾಯವಿದೆ; ಆದರೆ ಅಭಿಪ್ರಾಯ ಭಿನ್ನವಾದರೆ ಸಂಸಾರವು ಕೂಡಿಯೆ ನಡೆಯುವುದು ಅನಿವಾರ್ಯವೆಂಬ ಸಾಂಪ್ರದಾಯಿಕ ಗಂಡಹೆಂಡತಿಯ ಜೊತೆಯಂತೆ ಸಂಸ್ಕೃತ–ಕನ್ನಡಗಳ ಜೊತೆ ಇದೆ.

**ಸಾಹಿತಿಯ ವಿನಯ**

ಸಾಹಿತಿಗೆ ಅಗತ್ಯವಾದ ಇನ್ನೂ ಒಂದು ಮಹತ್ವದ ಸಂಗತಿ ಎಂದರೆ ಆತ್ಮವಿಶ್ವಾಸ ಮತ್ತು ವಿನಯಶೀಲತೆ. ಇವೆರಡೂ ತೋರಿಕೆಗೆ ಪರಸ್ಪರವಿರುದ್ಧವೆನ್ನಿಸಬಹುದು. ಆದರೂ "ಮಂದಃ ಕವಿಯಶಃಪ್ರಾರ್ಥೀ" ಎಂದು ಕಾಳಿದಾಸನು ಕೂಡಲೆ "ತಂ ಸಂತಃ ಶ್ರೋತುಮರ್ಹಂತಿ" ಎಂದಿದ್ದಾನೆಂಬುದನ್ನು ನೋಡಬಹುದು. ತಾನು ಮಂದಮತಿ ಎಂದು ಹೇಳಿಕೊಳ್ಳುವಾಗಲೂ ತಾನು ಬರೆದ ಕಾವ್ಯವನ್ನು ವಿವೇಕಿಗಳು ಮಾತ್ರ ಓದಲು ಅರ್ಹರು ಎಂದು ಹೇಳುತ್ತಾನೆ ಕಾಳಿದಾಸ. ಮಂದಮತಿ ಎನ್ನುವಲ್ಲಿ ವಿನಯ, ವಿವೇಕಿಗಳೆ ಅರ್ಹರು ಎಂಬಲ್ಲಿ ಆತ್ಮವಿಶ್ವಾಸ. ಬರೆಯುವುದಾರೆ ಒಳ್ಳೆಯದನ್ನೆ ಬರೆಯುವೆ ಎಂಬುದು ಆತ್ಮವಿಶ್ವಾಸ; ಎಷ್ಟು ಬರೆದರೂ ನಾನು ಹೊಸತನ್ನು ನೋಡಿದಂತೆ ಹೊಸದನ್ನು ಕಲಿಯುವ ಜಿಜ್ಞಾಸು, ವಿದ್ಯಾರ್ಥಿ ಎಂಬುದು ವಿನಯ. ಇಂದು ನಮ್ಮ ಸಾಹಿತಿಗಳಲ್ಲಿ ಈ ವಿನಯವಿಲ್ಲದ್ದಕ್ಕೆ ತಾವು ಬರೆದುದು ಒಳ್ಳೆಯದು, ಇನ್ನು ಮುಂದೆ ತಾವು ತಿಳಿಯಬೇಕಾದುದೇನೂ ಇಲ್ಲ ಎಂದೆನ್ನಿಸಿ ಅವರೂ ಅವರ ಕೃತಿಗಳೂ ಹೊಂಡದ ನೀರಾಗಿ ನಿಂತು

ಬಿಡುವುವು. ಒಮ್ಮೊಮ್ಮೆ ಬರೆಯುವ ಮುಂಚೆ ಇದೇ ಸರಿ ಎಂಬ ಪೂರ್ವಗ್ರಹ ಗಟ್ಟಿಯಾಗಿರುವುದು. ನಿಂತಲ್ಲಿ ನಿಂತ ಮೋಟಾರನ್ನು ಕ್ಯಾಮರಾದ ಕೈಚಳಕದಿಂದ ನಡೆಯುವಂತೆ ತೋರಿಸುವ ಪ್ರಗತಿಯೆ ಇಂತಹರ ಪ್ರಗತಿಯಾಗುವುದು, ನಮ್ಮ ಕಣ್ಮುಂದೆಯೆ ಆಗುತ್ತಲಿದೆ. ಕ್ಷಣಕ್ಷಣಕ್ಕೆ ಬದಲಾಗುತ್ತಿರುವ ಪ್ರಪಂಚದಲ್ಲಿ ಬದುಕುವ ಸಾಹಿತಿ ಪೂರ್ವಗ್ರಹವನ್ನಿಟ್ಟುಕೊಂಡರೆ ತನಗೆ ತಾನೇ ದ್ರೋಹ ಬಗೆದಂತಾಗುವುದು. ಕ್ಯಾಮರಾದ ಕೈಚಳಕದಲ್ಲಿ ನಿಜವಾಗಿಯೆ ತನ್ನ ಪ್ರಗತಿ ಇದೆ ಎಂದು ತಿಳಿದುಕೊಳ್ಳುವಂತೆ ಇನ್ನೊಂದು ಕಡೆಯ ಚಲನವಲನದಿಂದ ತಾನೆ ಮುಂದುವರಿಯುತ್ತಿದ್ದಾನೆ ಎಂದು ತಿಳಿದುಕೊಳ್ಳುವುದು ವಂಚನೆ.

**ಇಂದಿನ ಸಾಹಿತಿ**

ಈ ಮಾತುಗಳನ್ನು ನಾನೊಬ್ಬ ಹಿರಿಯ ಇಲ್ಲವೆ ಉತ್ತಮ ತರಗತಿಯ ಸಾಹಿತಿ ಎಂಬ ಅಧಿಕಾರದಿಂದ ಹೇಳುತ್ತಿಲ್ಲ. ಈ ಮಾತುಗಳನ್ನು ಹೇಳಲು ಬೇರೆ ಕಾರಣಗಳಿವೆ. ಇಂದಿನ ಸಾಹಿತಿ ನಿಜವಾಗಿಯೂ ನನ್ನ ತಲೆಮಾರಿನವರಿಗಿಂತ ಹೆಚ್ಚು ಸುದೈವಿ ಎಂದು ಹೇಳಬಹುದು. ಇಂದು ದೇಶ ಸ್ವತಂತ್ರವಾಗಿದೆ; ವ್ಯಕ್ತಿಸ್ವಾತಂತ್ರ್ಯದ ತತ್ತ್ವ ವ್ಯವಹಾರಕ್ಕಿಳಿದಿದೆ; ದೇಶದ ಪ್ರಗತಿಗೆ ಸಾಹಿತಿಗಳ ಅಗತ್ಯವಿದೆ ಎಂಬ ಮಾತನ್ನು ದೇಶದ ಬೇರೆಬೇರೆ ಸರಕಾರಗಳು ಒಪ್ಪುತ್ತಿವೆ; ಸಾಹಿತ್ಯಕ್ಕೆ ತಕ್ಕ ಉತ್ತೇಜನವನ್ನು ಕೊಡಬೇಕು ಎನ್ನುವುದಲ್ಲದೆ ಸಾಕ್ಷಾತ್ತಾಗಿ ಕೊಡುತ್ತಿರುವ ದೃಷ್ಟಾಂತಗಳು ಕಾಣಿಸಿಕೊಳ್ಳತೊಡಗಿವೆ; ದಿನದಿನಕ್ಕೆ ಓದುಬಲ್ಲವರ ಸಂಖ್ಯೆ ಹೆಚ್ಚುತ್ತಲಿದೆ; ಎಲ್ಲ ಮಟ್ಟಗಳಲ್ಲಿ ಶಿಕ್ಷಣದ ಮಾಧ್ಯಮವು ಪ್ರಾದೇಶಿಕ ಭಾಷೆಯಾಗಿರಬೇಕೆಂಬ ವಿಚಾರಕ್ಕೆ ಪ್ರಾಶಸ್ತ್ಯ ದೊರೆಯುತ್ತಿದೆ; ಅಲ್ಲಲ್ಲಿ ಒಳ್ಳೆಯ ಸಾಹಿತ್ಯಕ್ಕೆ ಪಾರಿತೋಷಕದ ಮನ್ನಣೆ ದೊರೆಯುತ್ತಲಿದೆ. ಇದಲ್ಲದೆ ದಿನದಿನಕ್ಕೆ ಇದಕ್ಕಿಂತ ಹೆಚ್ಚಿನ ಅನುಕೂಲಗಳು ಒದಗಬಹುದಾಗಿವೆ. ಇದು ತರುಣ ಸಾಹಿತಿಗಳ ಸುದೈವ. ಇವೆಲ್ಲ ಅನುಕೂಲಗಳನ್ನು ಒದಗಿಸಬೇಕೆನ್ನುವ ಸಮಾಜಕ್ಕೆ ಪ್ರತಿಯಾಗಿ ಸಾಹಿತಿಯು ಯೋಗ್ಯ ಸಾಹಿತ್ಯವನ್ನು ಒದಗಿಸಬೇಕೆಂಬುದು ಸಮಂಜಸವಾದ ಸಲಹೆಯಲ್ಲವೆ? ಶಿಕ್ಷಣವನ್ನು ಪೂರ್ತಿಯಾಗಿ ಇಂಗ್ಲಿಷದಲ್ಲಿ ಪಡೆದು ಪಟ್ಟಣದಲ್ಲಿ ನೋಕರಿ ಮಾಡಿಕೊಂಡಿರುವ ಸಾಹಿತಿಗಿಂತ ಜನಭಾಷೆಯಲ್ಲಿ ಶಿಕ್ಷಣವನ್ನು ಪಡೆದು, ಸುಧಾರಿಸುತ್ತಿರುವ ಹಳ್ಳಿಯಲ್ಲಿ ಜನಸಾಮಾನ್ಯರೊಡನಿದ್ದ ಸಾಹಿತಿಯ ಸಾಹಿತ್ಯವು ಹೆಚ್ಚು ಸತ್ತ್ವಯುತವಾದುದು, ಸಮಾಜಕ್ಕೆ ಪೋಷಕವಾದುದು ಎಂದು ಹೇಳಬಹುದಲ್ಲವೆ?

**ಒಂದು ಸಲಹೆ**

ನನ್ನ ಅಲ್ಪಯೋಗ್ಯತೆಗೆ ತಕ್ಕಂತೆ ನಾನೂ ಒಬ್ಬ ಸಾಹಿತಿ. ಆದುದರಿಂದ ಕೇವಲ ಸಾಹಿತಿಗಳಿಗೆಯೆ ಉಪದೇಶ ಮಾಡಿದರೆ ನನಗೆ ಸಮಾಧಾನವಿಲ್ಲ, ನನ್ನ ಕೆಲಸವೂ ಮುಗಿದಂತಾಗಲಿಲ್ಲ. ಇಂದಿನ ಸಾಹಿತಿ ಸುದೈವಿ ಎಂದೇನೋ ಹೇಳಿದೆನು. ಆದರೆ ಅಷ್ಟಕ್ಕೆ ಅವನು ಸುಖಜೀವಿ ಎಂದು ಹೇಳುವಂತಿಲ್ಲ. ದೇಶವು ಸ್ವತಂತ್ರವಾದಂದಿನಿಂದ ವಾತಾವರಣವು ಅನುಕೂಲವಾಗಿದೆಯೇನೋ ನಿಜ. ಆದರೆ ಹವೆ ಒಳ್ಳೆಯದಿದ್ದರೂ ಎಲ್ಲರಿಗೂ ಅದರ ಲಾಭ ದೊರೆಯುವುದಿಲ್ಲ ಎಂಬುದನ್ನು ಅನುಭವದಿಂದ ನೋಡುತ್ತಲಿದ್ದೇವೆ. ಅದಕ್ಕಾಗಿ ಇಂದಿನ ವಾತಾವರಣಕ್ಕಾಗಿ ಸಮಾಧಾನಪಡುವಂತಿಲ್ಲ. ಯಾರು ಹೇಳಬಲ್ಲರು ?

ದೇಶ ವಿಶಾಲವಿದ್ದಷ್ಟು ನಮ್ಮ ಹೃದಯ ಸಂಕುಚಿತವಾಗುತ್ತಿರುವ ಇಂದಿನ ಕಾಲದಲ್ಲಿ ಹವೆಯು ನಿರರ್ಗಳವಾಗಿ ಬೀಸುವುದು ಎಂದು ಹೇಗೆ ಹೇಳಬಹುದು ? ಒಂದೆ ಭಾಷೆಯನ್ನು ಆಡುವವರಲ್ಲಿ ಇಂದು ಮೈಸೂರು ಬೇರೆ, ಮಂಗಳೂರು ಬೇರೆ, ಬೆಳಗಾಂವಿ ಬೇರೆ ಎಂದು ನಾವು ಹೇಳಲು ಹಿಂದುಮುಂದು ನೋಡದಿರುವಾಗ ಹದಿನಾಲ್ಕು ಭಾಷೆಗಳುಳ್ಳ ದೇಶದಲ್ಲಿ ಎಲ್ಲ ಭಾಷೆಗಳಿಗೂ ಸಮವಾದ ಉತ್ತೇಜನ ದೊರೆಯುವುದೆಂದು ಯಾವ ಧೈರ್ಯದಿಂದ ಹೇಳಬಹುದು ? ಇದಲ್ಲದೆ ನೈಸರ್ಗಿಕವಾಗಿಯೆ ಭಾಷೆ-ಭಾಷೆಗಳ ಅನುಕೂಲತೆಗಳಲ್ಲಿ ವ್ಯತ್ಯಾಸವಿದೆ. ಹಿಂದೀ ಭಾಷೆಯನ್ನಾಡುವವರ ಸಂಖ್ಯೆ ತೀರ ದೊಡ್ಡದಿದ್ದರೆ ಮಲಯಾಳಿಗರ ಸಂಖ್ಯೆ ಕಡಿಮೆ ಇದೆ. ಹಿಂದೀ ಸಾಹಿತ್ಯಕ್ಕೆ—ಜೊತೆಗೆ ಆಡಳಿತದ ಭಾಷೆ ಎನಿಸುವುದರಿಂದ—ಇನ್ನಿಷ್ಟು ಹೆಚ್ಚು ಓದುಗರು ದೊರೆತರೆ–ಮೈಸೂರು ಧಾರವಾಡ ಎಂಬ ವಾದದಲ್ಲಿ ಕನ್ನಡ ಸಾಹಿತ್ಯಕ್ಕೆ ಇನ್ನಿಷ್ಟು ಕಡಿಮೆ ಓದುಗರು ದೊರೆಯಬಹುದು. ಓದುಗರು ಕಡಿಮೆಯಾದಮಟ್ಟಿಗೆ ಉತ್ತಮ ಸಾಹಿತ್ಯ ನಿರ್ಮಾಣಕ್ಕೆ ಉತ್ತೇಜನವೂ ಕಡಿಮೆಯಾಗಬಹುದು. ಈ ಪರಿಸ್ಥಿತಿಯನ್ನು ಮುಂಚಿತವಾಗಿಯೆ ಅರಿತುಕೊಳ್ಳಬೇಕು. ಇದಕ್ಕೆ ಉಪಾಯವನ್ನು ಯೋಚಿಸುವುದು ಯೋಗ್ಯ ಸಾಹಿತ್ಯವನ್ನು ನಿರ್ಮಿಸಬಲ್ಲ ಸಾಹಿತಿಗಳ ಕೈಯಲ್ಲಿದೆಯಲ್ಲದೆ ಕಾಯಿದೆಗಳನ್ನು ಗೊತ್ತುಮಾಡುವ ಸರಕಾರಗಳ ಕೆಲಸವಿದಲ್ಲ. ಸಾಹಿತ್ಯ ಪರಿಷತ್ತಿನಂತಹ ಸಂಸ್ಥೆಗಳು ಈ ಪರಿಸ್ಥಿತಿಯನ್ನು ಸುಧಾರಿಸುವಲ್ಲಿ ಹೆಚ್ಚು ಸಹಾಯಕವಾಗಬಲ್ಲವು. ಮೊದಲನೆಯದಾಗಿ, ಆಯಾ ಭಾಷೆಯ ಕೇಂದ್ರ ಸಾಹಿತ್ಯ ಸಂಸ್ಥೆಗಳು ಪ್ರತಿವರ್ಷ ದೇಶದ ಬೇರೆ ಬೇರೆ ಸಾಹಿತ್ಯಗಳಿಂದ ಒಂದೊಂದು ಉತ್ತಮ ಕೃತಿಯನ್ನು ತಮ್ಮ ಭಾಷೆಗೆ, ತಮ್ಮ ಕೆಲವು ಉತ್ತಮ ಕೃತಿಗಳನ್ನು ಬೇರೆಬೇರೆ ಭಾಷೆಗಳಿಗೆ ಪರಿವರ್ತಿಸುವಂತೆ ತಜ್ಞರ ಸಮಿತಿಗಳನ್ನು ಏರ್ಪಡಿಸಬೇಕು. ಪ್ರತಿವರ್ಷವೂ ಕೇಂದ್ರ ಮತ್ತು ಸಂಬಂಧಿಸಿದ ರಾಜ್ಯಸರಕಾರಗಳು ಮೇಲಿನ ಕೃತಿಗೆ ಕೊಡುವಂತೆ ಉತ್ತಮ ಭಾಷಾಂತರಿತ ಕೃತಿಗಳಿಗೂ ಪಾರಿತೋಷಕಗಳನ್ನು ಕೊಡಬೇಕು. ಹೀಗಾದಲ್ಲಿ ಪ್ರತಿಯೊಂದು ಸಾಹಿತ್ಯವೂ ಪರಸ್ಪರ ಪೋಷಕತೆಯಿಂದ ಬಲಗೊಳ್ಳುವದಲ್ಲದೆ ದೇಶದ ಯಾವದೇ ಭಾಷೆಯ ಉತ್ತಮ ಸಾಹಿತಿಯ ಪರಿಚಯವು ಇಡಿಯ ದೇಶಕ್ಕಾಗುವುದು. ಇದೇ ಸಂದರ್ಭದಲ್ಲಿ ಒಂದು ವಿಷಯದ ಕಡೆ ತಮ್ಮ ಲಕ್ಷ್ಯವನ್ನು ಸೆಳೆಯಬಯಸುತ್ತೇನೆ. ಕಳೆದ ಎರಡು ವರ್ಷಗಳ ಸ್ವಂತದ ಅನುಭವಕ್ಕಾಗಿಯೂ ಇದನ್ನು ತುಸು ಹಟದಿಂದ ಹೇಳಬಯಸುತ್ತೇನೆ. ದೇಶದ ಮಿಕ್ಕ ಸಾಹಿತ್ಯಗಳೊಡನೆ ಸಂಪರ್ಕ ಬೆಳೆಯಬೇಕೆಂದು ಹೇಳಿದೆನಲ್ಲವೆ? ಈಗಾಗಲೆ ಈ ಕೆಲಸ ನಡೆದಿದೆ. ಕಳೆದ ಹತ್ತು-ಹನ್ನೆರಡು ವರ್ಷಗಳಿಂದ ಹೊರನಾಡ ಕನ್ನಡಿಗರ ಸಂಸ್ಥೆ ಎಂಬ ಹೆಸರಿನಿಂದ ನಮ್ಮ ಕನ್ನಡಗೆಳೆಯರು ದೇಶದ ಅನೇಕ ಕಡೆಗಳಲ್ಲಿ ಕರ್ನಾಟಕ ಸಂಘಗಳನ್ನು ರಚಿಸಿಕೊಂಡು, ವರ್ಷಕ್ಕೊಮ್ಮೆ ಸಮ್ಮೇಳನವನ್ನು ನಡೆಯಿಸಿ ಕನ್ನಡನಾಡು–ನುಡಿ–ಸಾಹಿತ್ಯ–ಸಂಸ್ಕೃತಿಗಳ ಪರಿಚಯವನ್ನು ಹೊರಗಿನವರಿಗೆ ಮಾಡಿಕೊಡುತ್ತಿದ್ದಾರೆ. ಅನಿವಾರ್ಯ ಕಾರಣಗಳಿಗಾಗಿ ಈ ಕಾರ್ಯಕ್ಕೆ ಸಾಕಷ್ಟು ಬಲ ಬಂದಿಲ್ಲ, ನಮ್ಮೆಲ್ಲರ ಪ್ರೋತ್ಸಾಹ– ಆಶ್ರಯಗಳಿಲ್ಲದೆ ಅದು ಬರುವಂತಿಲ್ಲ. ಹೊರನಾಡ ಕನ್ನಡಿಗರ ಚಟುವಟಿಕೆಗಳ ಒಳ್ಳೆಯ ಪರಿಣಾಮಗಳನ್ನು ನೋಡಿದರೆ ಈ ಪ್ರೋತ್ಸಾಹ– ಆಶ್ರಯಗಳು ಅಗತ್ಯ, ಅರ್ಹ ಎಂದು ಖಂಡಿತವಾಗಿ ಕಂಡು ಬರುವುದು. ಕನಿಷ್ಠ ಪಕ್ಷಕ್ಕೆ ನಾವು—ಪರಿಷತ್ತಿನ ವತಿಯಿಂದ ಕೆಲವು ವಿದ್ವಾಂಸ ಉಪನ್ಯಾಸಕರನ್ನು, ಆಗಾಗ ನಾಟಕ—ನೃತ್ಯ ಕಲೆಗಾರರನ್ನು ಮತ್ತು ಕರ್ನಾಟಕದ ಸಾಹಿತ್ಯ

—ಸಂಸ್ಕೃತಿಗಳ ಬಗ್ಗೆ ಅಂಕಿ–ಸಂಖ್ಯೆ–ನಕ್ಷೆ–ಸಮಾಚಾರಗಳನ್ನು ಒದಗಿಸುತ್ತ ಹೋದರೂ ಹೊರನಾಡ ಕನ್ನಡ ಕಾರ್ಯಕರ್ತರಿಗೆ ಹೆಚ್ಚಿನ ಉತ್ಸಾಹ ಬರುವುದು. ಅದರಂತೆ ಅಲ್ಲಿಯ ಬೇರೆ ದೇಶೀಯ ಸಾಹಿತ್ಯಗಳ ಪರಿಚಯವನ್ನು ಮಾಡಿಕೊಡಲು ಹೊರನಾಡ ಸಂಘಗಳು ಸಹಾಯಕವು.

## ಪ್ರಕಾಶನದ ಮೇಲೆ ಬೆಳಕು

ಗೆಳೆಯರೆ, ನಾನು ಇಲ್ಲಿ ಕೇವಲ ನನ್ನ ಸೂಚನೆಗಳನ್ನು ಸಲ್ಲಿಸುತ್ತಿರುವೆನಲ್ಲದೆ ಯಾವೊಂದು ಯೋಜನೆಯನ್ನು ಸಿದ್ಧಪಡಿಸಿ ತಮ್ಮೆದುರು ಇಡುವ ಧಾರ್ಷ್ಟ್ಯವನ್ನು ಮಾಡುವುದಿಲ್ಲ. ನನ್ನ ಯಾವುದೆ ಸೂಚನೆಗೆ ತಮ್ಮ ಒಪ್ಪಿಗೆ ದೊರೆತಲ್ಲಿ ಅದಕ್ಕನುಗುಣವಾದ ಯೋಜನೆಯನ್ನು ಅಧಿಕಾರದ ಸಂಸ್ಥೆಗಳು ತಯಾರಿಸಬಹುದು. ಈ ರೀತಿ – ನನ್ನ ಇನ್ನೊಂದು ಸೂಚನೆ ಪ್ರಕಾಶಕರಿಗೆ ಸಂಬಂಧಿಸಿದೆ. ಕರ್ನಾಟಕದಲ್ಲಿ ಪ್ರಕಾಶನ ಸಂಸ್ಥೆ ಎಂಬ ಗೌರವಕ್ಕೆ ತಕ್ಕ ಸಂಸ್ಥೆಗಳು ಇವೆಯೋ ಇಲ್ಲವೋ ಬಲ್ಲವರು ತಿಳಿಸಿದಲ್ಲಿ ನನಗೆ ಖಂಡಿತ ಸಂತೋಷವಾಗುವುದು. ನನಗೆ ಗೊತ್ತಿದ್ದ ಸಂಸ್ಥೆಗಳೆಂದರೆ ಸಾಹಿತ್ಯ ಪ್ರಕಾಶನದ ಸಂಸ್ಥೆಗಳಲ್ಲ, ನಿಯತಕಾಲಿಕ ಪ್ರಕಾಶನದ ಸಂಸ್ಥೆಗಳು. ತಿಂಗಳಿಗೊ, ಎರಡು ತಿಂಗಳಿಗೊ ಒಂದು ಪ್ರಕಟನೆಯನ್ನು ಹೊರಡಿಸಬೇಕು; ಅದು ಏನೆ ಇರಲಿ, ಎಂತಹದೆ ಇರಲಿ, ಬರೆಯುವವನಿಗೆ ಆದಷ್ಟು ಕಡಿಮೆ ಹಣವನ್ನು ಕೊಡಬೇಕು, ಬೆಲೆ ಶಕ್ಯವಿದ್ದಷ್ಟು ಹೆಚ್ಚಾಗಿರಬೇಕು, ಪ್ರಕಟವಾದ ಕೃತಿಯ ಬಗ್ಗೆ ತಾವೇ ಒಂದು ಜಾಹಿರಾತಿನ ವಿಮರ್ಶೆಯನ್ನು ಬರೆಯತಕ್ಕದ್ದು. ತರುವಾಯ ಮುಂದಿನ ಪ್ರಕಟನೆಯನ್ನು ಕೈಕೊಳ್ಳತಕ್ಕದ್ದು. ಹೆಚ್ಚಾಗಿ ಈ ತರದ ಸಂಸ್ಥೆಗಳು. ಇವಾದರೂ ಊರ್ಜಿತ ಸ್ಥಿತಿಯಲ್ಲಿಯೆ? ಇಲ್ಲದಿದ್ದರೂ ಇಂತಹ ಸಂಸ್ಥೆಗಳು ಹುಟ್ಟುತ್ತಿರುವುದು ನಮ್ಮ ಸಂಸ್ಕೃತಿಗೇಡಿತನದ ಲಕ್ಷಣವಾಗಿದೆ. ಹೀಗಿರುವಾಗ ಈ ಪರಿಸ್ಥಿತಿಯಲ್ಲಿಯೂ ಸದ್ಭಾವನೆಯಿಂದ ಪ್ರೇರಿತವಾಗಿ ದುಡಿಯುತ್ತಿರುವ ಕೆಲವೇ ಕೆಲವು ಬಳ್ಳಿ – ಮಾಲಿಗಳ ಪ್ರಕಾಶಕರಿಗೆ ನನ್ನದೊಂದು ಸೂಚನೆ ಇದೆ. ನೀವೆಲ್ಲರೂ ಒಂದು ಮಾತಿಗಾಗಿ ಒಂದೆಡೆ ಸೇರಿರಿ; ನಿಮ್ಮ ವತಿಯಿಂದ ಒಬ್ಬೊಬ್ಬ ತಜ್ಞನನ್ನು ನಿಯಮಿಸಿ ಒಂದು "ಭೋಜ ಸಭೆ"ಯನ್ನು (Book Club ದ ಮಾದರಿ) ಗೊತ್ತುಮಾಡಿರಿ; ನಿಮ್ಮಿಂದ ಪ್ರಕಟನೆಗೆ ಸ್ವೀಕರಿಸಲ್ಪಟ್ಟ ಪ್ರತಿಯೊಂದು ಹಸ್ತಪ್ರತಿಯನ್ನೂ ಈ ಸಭೆಯು ಮುಂಚಿತ ಓದಲಿ; ಪ್ರಕಟವಾದಮೇಲೆ ಅದು ತನ್ನ ಮೆಚ್ಚಿಗೆಯಾಗಿದೆಯೋ ಇಲ್ಲವೋ ಎಂಬುದನ್ನು ಸಾರಲಿ. ಹೀಗಾದಲ್ಲಿ ನಿಮ್ಮ ಪ್ರಕಾಶನಕ್ಕೆ ಮತ್ತು ಸಾಹಿತಿಗೆ ಏಕಕಾಲಕ್ಕೆ ಪ್ರೋತ್ಸಾಹ ದೊರೆಯುವುದಲ್ಲದೆ ಓದುಗರ ಸಂಖ್ಯೆಯು ಖಂಡಿತವಾಗಿಯೂ ಬೆಳೆಯುವುದು. ಒಳ್ಳೆಯ ವಿಮರ್ಶೆ ನಮ್ಮಲ್ಲಿ ಇನ್ನೂ ಬಂದಿಲ್ಲ; ಒಂದೆಡೆ ಅಂತ ವಿಮರ್ಶೆಯನ್ನು ಬರೆಯುವ ಯೋಗ್ಯತೆ ಇದ್ದವರು ವಿರಳ, ಇನ್ನೊಂದೆಡೆ ಅಂತಹ ವಿಮರ್ಶೆಯನ್ನು ಪ್ರಕಟಿಸಲು ಸಿದ್ಧವಿದ್ದ ಪ್ರಾಮಾಣಿಕತೆಯೂ ಕಡಿಮೆ.

## ಶೋಧ – ಸಾಹಿತ್ಯ, ಶೋಷ – ಸಾಹಿತ್ಯ

ಪ್ರಾಮಾಣಿಕತೆಯ ಪ್ರಶ್ನೆ ಸಾಹಿತ್ಯದಲ್ಲಿ ಅತ್ಯಂತ ಮಹತ್ವದ್ದಾಗಿದೆ. ಅದಕ್ಕಾಗಿಯೆ ಸಾಹಿತಿಯು ಸ್ವತಂತ್ರನಾಗಿರಬೇಕು, ಸಾಹಿತ್ಯ ನಿರ್ಮಾಣದ ಬಗ್ಗೆ ಯಾವ

ನಿರ್ಬಂಧಗಳೂ ಇರಕೂಡದು ಎಂದು ಸುಸಂಸ್ಕೃತ ಅಭಿಪ್ರಾಯವಿದೆ. ಇಂದು ಸಾಹಿತಿಯ ಸ್ವಾತಂತ್ರ್ಯಕ್ಕೆ ಒಳಗಿನ ಮತ್ತು ಹೊರಗಿನ ಎರಡು ಶತ್ರುಗಳಿವೆ. ಒಳಗಿನ ಶತ್ರು ಎಂದರೆ ಸಾಹಿತಿ ತನಗೆ ತಾನೇ ಶತ್ರುವಾಗಿರುವುದು. ಯಾವ ಸಾಹಿತಿ ಬುದ್ಧಿಪೂರ್ವಕವಾಗಿ ಸಂಕುಚಿತ ವೃತ್ತಿಯವನಾಗಿರುತ್ತಾನೋ ಅವನು ತನಗೆ ತಾನೇ ಶತ್ರು ಎಂದು ಹೇಳ ಬಹುದು. ಸಾಹಿತಿಯ ಹೃದಯ ತಳಮಳಿಸುವುದು ಇಡಿಯ ಲೋಕಕ್ಕಾಗಿ, ಕೇವಲ ನೆರೆಮನೆಯ ಬಾಲವಿಧವೆಗಾಗಿ ಅಲ್ಲ; ಸಾಹಿತಿಯ ಸಹೃದಯದಲ್ಲಿ ಸಕಲರೂ ಸರಿಸಮಾನ ರಾಗಿರುತ್ತಾರೆ, ಕೇವಲ ಒಂದು ವರ್ಗಕ್ಕೆ ವಿಶಿಷ್ಟಸ್ಥಾನವಿಲ್ಲ; ಸಾಹಿತಿಯ ಶೋಧ ಪ್ರಾಮಾಣಿಕ ಸತ್ಯಕ್ಕಾಗಿ, ಪೇಟೆಯ ಪ್ರಚಾರಕ್ಕಾಗಿ ಅಲ್ಲ. ಇಂದು ಅಂತಹ ಶೋಧ ಮಾಡುವ ಧೈರ್ಯ ಇಲ್ಲವೆ ಯೋಗ್ಯತೆ ಇಲ್ಲದ್ದಕ್ಕಾಗಿ, ಅಗ್ಗದ ಪ್ರಚಾರಜ್ಞಾನದಿಂದ ಸಮಾಜಕ್ಕೂ, ಸಾಹಿತ್ಯಕ್ಕೂ ಧಕ್ಕೆಯನ್ನು ಕೆಲವರು ಕೊಡುತ್ತಿದ್ದಾರೆ. ಎಲ್ಲಿಯವರೆಗೆ ನಮ್ಮಲ್ಲಿ ಯೋಗ್ಯ ವಿಮರ್ಶೆ ಇಲ್ಲವೋ ಅಲ್ಲಿಯವರೆಗೆ ಈ ಶೋಷ ಸಾಹಿತ್ಯಕ್ಕೆ ಅನುಕೂಲ ವಿದೆ. ಆದರೆ ಸಾಕ್ಷರತೆ ಇದೇ ಬೆಳೆಯುತ್ತಿರುವ ಈ ಕಾಲದಲ್ಲಿ ಇಂತಹ ಸಾಹಿತ್ಯ ಅಪಾಯ ಕಾರಕವಾಗಬಹುದಾಗಿದೆಯಾದ್ದರಿಂದ ಸಾಹಿತ್ಯ ಸಂಘಗಳು ಒಳ್ಳೆಯ ಸಾಹಿತ್ಯಕ್ಕೆ ಮನ್ನಣೆ ಯನ್ನು ಕೊಡುವ ಅಧಿಕೃತ ಯೋಜನೆಗಳನ್ನು ಬೇಗ ಕೈಗೊಳ್ಳಬೇಕು. ಪ್ರಚಾರವು ಅರ್ಧಜ್ಞಾನ ಅಜ್ಞಾನಕ್ಕಿಂತಲೂ ಅಪಾಯಕಾರಕ, ಪ್ರಚಾರವು ಪ್ರಾಮಾಣಿಕ ಬುದ್ಧಿಯ ಚಟುವಟಿಕೆಯಾಗಿರುವುದಿಲ್ಲ; ಅದಕ್ಕಾಗಿ ಸಮಾಜದ ಸಂಸ್ಕೃತಿಗೆ ಘಾತಕ. ಯಾವೊಂದು ಗುಂಪನ್ನೂ ಸೇರದೆ ವಿಶ್ವಶಾಂತಿಗಾಗಿ ಹೆಣಗುವ ವಿದೇಶ ನೀತಿಯನ್ನು ಸಾರುವ ಪಂಡಿತ ಜವಾಹರರು ಶ್ರೇಷ್ಠವಾದ ಮತ್ತು ನಿಜವಾದ ಸಾಹಿತಿಯಾಗಿದ್ದಾರೆ ಎಂಬುದು ನಮ್ಮೆಲ್ಲ ರಿಗೂ ಅಭಿಮಾನದ ಸಂಗತಿಯಾದರೆ ಸದ್ಯದ ನನ್ನ ವಿಚಾರಕ್ಕೆ ಪುಷ್ಟಿಯನ್ನು ಕೊಡುವು ದೆಂದು ನನಗೆ ಇನ್ನಿಷ್ಟು ಅಭಿಮಾನದ ಮಾತಾಗಿದೆ.

### ಹೊರಗಿನ ಶತ್ರು

ಎಂಬ ಮಾತನ್ನು ಹೇಳುವಾಗ ಯಾರೂ ತಪ್ಪು ತಿಳಿಯಬಾರದಾಗಿ ಬೇಡುತ್ತೇವೆ. 'ಶತ್ರು' ಎಂದು ನಾನು ಹೇಳುವುದು ಒಂದು ವ್ಯಕ್ತಿಯ ವಿಷಯವಾಗಿ ಅಲ್ಲ, ಅದು ಒಂದು ಸಾಮಾಜಿಕ ಪರಿಸ್ಥಿತಿ. ಇಂದು ಪ್ರಕಾಶಕರೂ ಗ್ರಂಥಕರ್ತರ ಬಗ್ಗೆ ಅನ್ಯಾಯವನ್ನು ಬಗೆಯುತ್ತಿದ್ದಾರೆ ಎಂಬುದನ್ನೆ ಸಾಮಾನ್ಯವಾಗಿ ಪ್ರಕಾಶಕರು ಗ್ರಂಥಕರ್ತನ ಹೊರಗಿನ ಶತ್ರುವಾಗಿದ್ದಾರೆ ಎಂದು ಹೇಳುವುದು. ಪ್ರಕಾಶಕ ಎಂಬುದು ವ್ಯಾಪಕವಾಗಿದೆ. ಒಂದು ಗ್ರಂಥವನ್ನು ಪ್ರಕಟಿಸುವ ಪ್ರಕಾಶಕ ಇಲ್ಲವೆ ಗ್ರಂಥಮಾಲೆಯ ಸಂಚಾಲಕ, ಒಂದು ಲೇಖವನ್ನು ಪ್ರಕಟಿಸುವ ಪತ್ರಿಕಾಕರ್ತ, ಒಂದು ಬರವಣಿಗೆಯನ್ನು ಸ್ತುತಿಸುವ ಮುನ್ನುಡಿಕಾರ—ಇಂತಹರೆಲ್ಲರನ್ನೂ ಈ ಒಂದು ಪದದಲ್ಲಿ ಉದ್ದೇಶಿಸಿದ್ದೇನೆ. ಇವರು ಅನೇಕ ರೀತಿಯಿಂದ ಗ್ರಂಥಕರ್ತನಿಗೆ ಅಪಾಯವನ್ನು ಬಗೆಯಬಹುದು, ಬಗೆಯುತ್ತಲಿ ದ್ದಾರೆ. ಒಳ್ಳೆಯ ಕೃತಿಗೆ ತಕ್ಕ ಹಣವನ್ನು ಸಲ್ಲಿಸದೆ ತಾನು ಲಾಭವನ್ನು ಪಡೆದು ಕೊಳ್ಳವಷ್ಟೆ ತನ್ನ ಅನುಕೂಲತೆಗಾಗಿ ಕೆಟ್ಟ ಕೃತಿಗೆ ಮನ್ನಣೆಯನ್ನು ಕೊಡುವುದೂ ಗ್ರಂಥ ಕರ್ತನಿಗೆ ಅಪಾಯ ಬಗೆದಂತಾಗುವುದು. ಸಾಮಾನ್ಯವಾಗಿ ಪ್ರಕಾಶಕರು ಗ್ರಂಥಕರ್ತ ರೊಡನೆ ಉತ್ಸಾಹದ ಮಾತುಗಳನ್ನೆ ಆಡುವುದಿಲ್ಲ. ಇನ್ನೊಬ್ಬನ ಶೋಷಣೆಯಿಂದ ತಾನು

ಪುಷ್ಟನಾಗಬೇಕೆನ್ನುವ ವ್ಯಕ್ತಿ ಸಮಾಜದ ದೃಷ್ಟಿಯಿಂದ, ಸಾಹಿತ್ಯದ ಬೆಳವಣಿಗೆಯ ದೃಷ್ಟಿಯಿಂದ ವಿಘಾತಕನಾಗಿದ್ದಾನೆ. ಸಾಹಿತ್ಯ ಪ್ರಕಾಶನಕ್ಕೆ ಸಾಹಿತ್ಯ ನಿರ್ಮಾಣಪ್ಪ ಅಗತ್ಯ ಎಂಬುದನ್ನರಿತು ಆ ಸಾಹಿತ್ಯ ನಿರ್ಮಾತೃವನ್ನು ಯೋಗ್ಯವಾಗಿ ಪ್ರಕಾಶಕರು ಮನ್ನಿಸ ಬೇಕು. ಬೇರೆ ಸಾಹಿತ್ಯಗಳ ಪ್ರಕಾಶದ ಅನುಭವದಿಂದ ತಮ್ಮಲ್ಲಿಯ ಪರಿಸ್ಥಿತಿಯ ಇತಿ-ಮಿತಿಗಳಿಗೆ ಹೊಂದಿಕೊಂಡು ಪ್ರಕಾಶಕರು ಗ್ರಂಥಕರ್ತರೊಡನೆ ಕೆಲವು ಕರಾರುಗಳನ್ನು ಬಹಿರಂಗವಾಗಿ ಒಪ್ಪಿಕೊಳ್ಳುವ ಯೋಜನೆಯನ್ನು ಮಾಡಬೇಕು. ಇದಕ್ಕೆ ವಿರುದ್ಧವಾಗಿ ಇನ್ನೊಂದು ತರದ ಅಪಾಯವಿದೆ. ಈ ತಿಂಗಳ ಈ ತಾರೀಕಿಗೆ ಒಂದು ಕಾದಂಬರಿಯನ್ನು ಪ್ರಕಟಿಸಲೇಬೇಕೆಂಬ ಹಟದಿಂದ ಕ್ಷುಲ್ಲಕ ಕೃತಿಯನ್ನು ಪ್ರಕಟಿಸುವವರು ಆ ಕೃತಿಯನ್ನೇ ಬರೆದವನ ಶತ್ರು ಎನ್ನಿಸುತ್ತಾರೆ; ಅದರಂತೆ ಪುಟ ತುಂಬುವುದಕ್ಕೆ ಲೇಖನವನ್ನಾಗಲಿ ಕವಿತೆಯನ್ನಾಗಲಿ ಸ್ವೀಕರಿಸುವ ಪತ್ರಿಕಾಕರ್ತನೂ ಸಾಹಿತಿಯ ಶತ್ರು ಆಗುವನು. ಇಂತಹ ಸಂದರ್ಭಗಳಲ್ಲಿ ಕೊಟ್ಟ ಕೃತಿಗಳನ್ನು ಬರೆದವನು ತಾನು ನಿಜವಾಗಿಯೆ ಒಳ್ಳೆಯ ಸಾಹಿತಿ ಎಂದು ತಿಳಿದುಕೊಳ್ಳುತ್ತಾನೆ. ಆಗಾಗ ಸ್ಪರ್ಧೆಗಳನ್ನೇರ್ಪಡಿಸಿ ತಜ್ಞರಿಂದ ಹೊಸಬರ ಲೇಖನಗಳನ್ನು ಪರೀಕ್ಷಿಸಿ ಪಾರಿತೋಷಕವನ್ನೂ, ಸಲಹೆಗಳನ್ನೂ ಕೊಡುವುದರಿಂದ ಇಂತಹ ಪತ್ರಿಕಾಕರ್ತರು ಉತ್ತಮ ಸಾಹಿತ್ಯ ನಿರ್ಮಾಣಕ್ಕೆ ಉತ್ತೇಜನವನ್ನು ಕೊಡಬಹುದಲ್ಲ?

**ಸಾಹಿತ್ಯ ಸಮಾಲೋಚನೆ**

ರಸಿಕ ಮಹಾನುಭಾವರೆ, ಇಂತಹ ಭಾಷಣದಲ್ಲಿ ಸಾಮಾನ್ಯವಾಗಿ ಅಪೇಕ್ಷಿಸಲಾದ ಕೆಲವು ಸಂದರ್ಭಗಳು ಇಲ್ಲ ಎಂಬುದನ್ನು ನಾನೆ ಚೆನ್ನಾಗಿ ಬಲ್ಲೆ. ಕನ್ನಡ ಸಾಹಿತ್ಯದ ಬೆಳವಣಿಗೆಯ ಹಿನ್ನೆಲೆಯಲ್ಲಿ, ಪ್ರಕಟವಾಗುತ್ತಿರುವ ಸಾಹಿತ್ಯ ಕೃತಿಗಳ ಸಮಾಲೋಚನೆ, ಅವುಗಳನ್ನು ಬರೆದವರ ಹೆಸರುಗಳ ಪಟ್ಟಿ, ಔಪಚಾರಿಕವಾದ ವಿಮರ್ಶಾತ್ಮಕ ಮಾತುಗಳು — ಇದೆಲ್ಲ ಇಲ್ಲಿ ಇರಬೇಕೆಂದು ತಾವು ಬಯಸುವುದು ಸಂಪ್ರದಾಯದೃಷ್ಟಿಯಿಂದ ಸಹಜ. ಆದರೆ ನನ್ನ ಅಭಿಪ್ರಾಯ ಬೇರೆಯಾಗಿದೆ. ಸಮ್ಮೇಳನದ ಅಧ್ಯಕ್ಷನಾಗುವವನು ಆಯಾ ವರ್ಷಾವಧಿಯ ಪ್ರತಿಯೊಂದು ಪ್ರಕಟನೆಯನ್ನೂ ಅರಿತುಕೊಂಡು ಅಭ್ಯಸಿಸಿಕೊಂಡು ಸಜ್ಜಾಗಿರಬೇಕೆಂದು ಬಯಸುವುದು ಒಂದು ವ್ಯಕ್ತಿಗೆ ಅನ್ಯಾಯ, ಒಂದು ಮಹತ್ತ್ವದ ಕೆಲಸ ವಿರಸ. ಸಾಹಿತ್ಯದ ಸಮಾಲೋಚನೆಯನ್ನು ನಿಧಾನವಾಗಿ ಮಾಡುವುದು ಉಚಿತ: ಅಲ್ಪಾವಧಿಯಲ್ಲಿ ಅಧ್ಯಕ್ಷ ಭಾಷಣವನ್ನು ಬರೆಯುವಾಗ ಮಾಡಬಾರದಂತಹ ಮಹತ್ವದ ಕೆಲಸವದು. ಇದಲ್ಲದೆ ಸಾಹಿತ್ಯದ ಬೆಳವಣಿಗೆ ಕೃತಿಗಳ ಯೋಗ್ಯತೆಯನ್ನು ಅವಲಂಬಿಸಿರುವುದು, ಅವನ್ನು ಬರೆದವರ ಹೆಸರುಗಳನ್ನಲ್ಲ. ಹೀಗೆ ಹೇಳಿ ಈ ಕೆಲಸ ಅನಾವಶ್ಯಕ ಎಂದು ನಾನು ಹೇಳಬಯಸುವುದಿಲ್ಲ. ವರ್ಷ ವರ್ಷಕ್ಕೆ ಸಾಹಿತ್ಯ ಸಮಾಲೋಚನೆ ಎಷ್ಟು ಅಗತ್ಯದ್ದೊ ಅಷ್ಟೆ ಮಹತ್ವದ್ದೂ ಆಗಿದೆ. ಈ ಬಗ್ಗೆ ನನ್ನದೊಂದು ಸೂಚನೆ ಇದೆ. ಸಾಹಿತ್ಯ ಪರಿಷತ್ತಿನಂತಹ ಸಂಸ್ಥೆಯು ಈ ಕೆಲಸವನ್ನು ಮಾಡುವುದು ಯೋಗ್ಯ. ಪ್ರತಿ ವರ್ಷ ಸಾಹಿತ್ಯ ಸಮ್ಮೇಳನದ ಕಾಲಕ್ಕೆ ಪರಿಷತ್ತು ಆ ವರ್ಷದ ಸಾಹಿತ್ಯ ಸಮಾಲೋಚನೆಯನ್ನು ತನ್ನ ವಾರ್ಷಿಕ ವರದಿಯ ಅಂಗವಾಗಿ ಪ್ರಕಟಿಸಬಹುದಲ್ಲ? ಪರಿಷತ್ತಿನಂತಹ ಸಂಸ್ಥೆ ಒಂದೇ ಒಂದಾಗಿ ಈ ಕಾರ್ಯವನ್ನು ಮಾಡಲು ಶಕ್ಯ

ವಿಲ್ಲ ಎಂಬುದನ್ನು ಬಲ್ಲೆ. ಇದಕ್ಕೆ ಪ್ರಕಾಶಕರು, ಗ್ರಂಥಕರ್ತರು ಪೂರ್ತಿಯಾಗಿ ಸಹಕಾರವನ್ನು ನೀಡಬೇಕು. ಪುಸ್ತಕದ ಪ್ರತಿಯನ್ನು ಕಳಿಸುವುದು ಬೇಡ; ಕನಿಷ್ಠ ಪಕ್ಷಕ್ಕೆ ಒಂದು ಗ್ರಂಥ ಪ್ರಕಟವಾದೊಡನೆ ಅದರ ಹೆಸರು, ಗ್ರಂಥಕರ್ತ, ಪ್ರಕಾಶಕ, ಪುಟಸಂಖ್ಯೆ, ಆಕಾರ, ಬೆಲೆ, ಪ್ರಕಟನೆಯ ತಿಂಗಳು ಇಲ್ಲವೆ ತಾರೀಕು—ಇಷ್ಟನ್ನಾದರೂ ಪ್ರಕಾಶಕನಾಗಲಿ ಗ್ರಂಥಕರ್ತನಾಗಲಿ ಪರಿಷತ್ತಿನ ಕಚೇರಿಗೆ ತಿಳಿಸಬಹುದಲ್ಲ? ಅದರಂತೆಯೇ ಶಕ್ಯವಾದರೆ, ಆಯಾ ಸಾಹಿತ್ಯ ಮಾದರಿಯ ಆ ವರ್ಷದ ವೈಶಿಷ್ಟ್ಯಗಳ, ಸ್ಥೂಲರೂಪದಲ್ಲಿ ಮಾತ್ರವೇ ಆಗಲಿ ವಿಮರ್ಶಿಸುವ ಯೋಜನೆಯನ್ನು ಪರಿಷತ್ತು ಮಾಡಬಹುದು. ಇಂದು ನಾವು ಮುಂದರಿಯುತ್ತಿರುವೆವೆ ಇಲ್ಲವೆ ಎಂಬುದನ್ನು ತಿಳಿದುಕೊಳ್ಳಲು ಈ ತರದ ಆತ್ಮವಿಮರ್ಶೆ ಅಗತ್ಯವಾಗಿದೆ.

**ಸಾಮಾಜಿಕ ಹೊಣೆ**

ಇಂದಿನವರೆಗೆ, ಈ ಪೀಠವನ್ನು ಅಲಂಕರಿಸಿದವರು ನನಗಿಂತ ಹಿರಿಯರು, ವಿದ್ವಾಂಸರು, ಕನ್ನಡ ಸಾಹಿತ್ಯಕ್ಕೆ ಪ್ರತಿಭಾನ್ವಿತ ಕಾಣಿಕೆಗಳನ್ನು ಸಲ್ಲಿಸಿದವರು. ತಮ್ಮ ಅಧಿಕಾರವಾಣಿಯಿಂದ ಅವರು ಸಾಹಿತ್ಯ ಮತ್ತು ಸಾಹಿತಿಯ ಕುರಿತು ಕೂಲಂಕಷವಾಗಿ ವಿವೇಚನೆಯನ್ನು ಮಾಡಿದ್ದಾರೆ. ಪುನರುಕ್ತಿ ಬೇಡವೆಂದೊ ಇಲ್ಲವೆ ಆ ಯೋಗ್ಯತೆ ಇಲ್ಲವೆಂದೊ ನಾನು ಬೇರೊಂದು ದಾರಿಯನ್ನು ಹಿಡಿದಿದ್ದೇನೆ. ನನ್ನ ಕಿರಿದಾದ ಅನುಭವದಲ್ಲಿ ತೋಚಿದ ನಾಲ್ಕಾರು ಮಾತುಗಳನ್ನು ಹೇಳುತ್ತಲಿದ್ದೇನೆ. ಒಂದು ವೇಳೆ ನಾನು ಪಂಡಿತನೆನ್ನಿಸಲಿಕ್ಕಿಲ್ಲ, ಆದರೆ ಪೂರ್ತಿಯಾದ ಪ್ರಾಮಾಣಿಕತೆಯಿಂದ ಹೇಳುತ್ತಲಿದ್ದೇನೆ, ಎಂಬುದನ್ನು ತಾವು ದಯವಿಟ್ಟು ಮನ್ನಿಸಬೇಕು. ಸಾಹಿತ್ಯವೆ ನನ್ನ ಜೀವನದ ಉಸಿರಾಗಿದೆ; ಉಚ್ಚ ಅಧಿಕಾರ ಸ್ಥಾನದಲ್ಲಿ ಸುಖದಿಂದ ಇರುವುದಕ್ಕಿಂತ ಉಪವಾಸದಿಂದಿದ್ದರೂ ಸಾಹಿತಿಯಾಗಿರುವುದು ನನಗೆ ಮೆಚ್ಚಿಗೆಯಾಗಿದೆ. ಸಾಹಿತ್ಯದಲ್ಲಿ ದ್ವಂದ್ವಾತೀತ ಸುಖವಿದೆ; ಅದಕ್ಕಾಗಿಯೆ ಸುಖದುಃಖದ ದ್ವಂದ್ವರಾಜಕಾರಣದಲ್ಲಿ ಸಾಹಿತಿ ಸೇರುವುದು ಅಗೌರವ ಎಂದು ನಾನು ತಿಳಿಯುತ್ತೇನೆ. ದೇಶವು ಪರಕೀಯರ ದಾಸ್ಯದಲ್ಲಿದ್ದಾಗ ರಾಜಕೀಯಕ್ಕೆ ಅನಿವಾರ್ಯವಾಗಿ ಪ್ರಾಧಾನ್ಯವಿದ್ದಿತು. ಇಂದು ದೇಶ ಸ್ವತಂತ್ರವಾಗಿದೆ. ದೇಶದ ಸ್ವಾಸ್ಥ್ಯ–ಗೌರವಗಳು ಬೆಳೆಯಬೇಕಾಗಿದೆ. ಇದು ಸಂಸ್ಕೃತಿಯ ಮಾತು, ಎಂದರೆ ಸಾಹಿತ್ಯದ ಮಾತು. ನಮ್ಮ ದೇಶದ ಸಾಹಿತ್ಯವು ಯಾವ ಮಟ್ಟದಲ್ಲಿರುವುದೊ ಆ ಮಟ್ಟಕ್ಕೆ ಅದರ ಸಂಸ್ಕೃತಿ ನಿಲ್ಲುವುದು. ಸಾಹಿತಿಗಳಾದವರು, ಆಗಬಯಸುವವರು, ತಾವು ಸಾಹಿತಿ ಎಂದು ತಿಳಿದುಕೊಂಡವರು – ಎಲ್ಲರೂ ಈ ಮಾತನ್ನು ಲಕ್ಷ್ಯದಲ್ಲಿಡಬೇಕಾಗಿದೆ. ದೇಶ–ಕಾಲ–ಪರಿಸ್ಥಿತಿಗನುಸರಿಸಿ ನಮ್ಮದೂ ಒಂದು ಸಂಸ್ಕೃತಿ ಇದೆ ಎಂಬುದನ್ನು ನೆನಪಿನಲ್ಲಿಡೋಣ. ವೇದ – ಉಪನಿಷತ್ತು – ಬೌದ್ಧಮತ – ಭಗವದ್ಗೀತೆ – ವೇದಾಂತಮಾರ್ಗ – ಭಕ್ತಿಮಾರ್ಗ – ಕರ್ಮಮಾರ್ಗ ಹೀಗೆ ಆಯಾ ಪರಿಸ್ಥಿತಿಗನುಗುಣವಾಗಿ ಹೊಸ ಚೈತನ್ಯವನ್ನು ಹೊಂದಿ ಬದಲಾಗುತ್ತ ಬಂದ ಸಂಸ್ಕೃತಿ ನಮ್ಮದು ಎಂಬುದನ್ನು ಮರೆಯದಿರೋಣ. ನಮ್ಮ ಸಾಹಿತಿಗಳು ಒಂದೆಡೆ ನಮ್ಮ ಸಂಸ್ಕೃತಿಯ ಪ್ರತೀಕರಾಗಿರಬೇಕು, ಇನ್ನೊಂದೆಡೆ ಸಂಸ್ಕೃತಿಯ ಬದಲಾವಣೆಯ ಜನಕರಾಗಿರಬೇಕು. ಎಂದರೇನೆ ಅವರು ನಮ್ಮ ಸಾಹಿತಿಗಳು. ಒಂದು ಕಾಲಕ್ಕೆ ಸಂಸ್ಕೃತದ ಅನುಕರಣ ಮಾಡಿದೆವು, ಮತ್ತೊಮ್ಮೆ ಮರಾಠಿ –

ಬಂಗಾಲಿಗಳಿಂದ ವಸ್ತುವನ್ನು ಎತ್ತಿದೆವು; ಅನೇಕ ವರ್ಷಗಳವರೆಗೆ ಇಂಗ್ಲಿಷದಿಂದ ವಿಚಾರಗಳನ್ನು ಆಯ್ದುಕೊಂಡೆವು. ಪರಸ್ಪರ ಸಂಪರ್ಕ ಬೇರೆ, ಕೇವಲ ಅನುಕರಣ ಬೇರೆ. ಪರಸ್ಪರ ಸಂಪರ್ಕ ಸರಿಸಮಾನತೆ ಇದ್ದಲ್ಲಿ ಜರುಗುವುದು. ಅನುಕರಣ ಅಸಾಮರ್ಥ್ಯದ ಲಕ್ಷಣ. ಇಂಗ್ಲಿಷ ಸಾಹಿತ್ಯದಿಂದ ಎತ್ತಿದರೂ ಅಷ್ಟೆ, ಸೊವಿಯೆಟ್ ಸಾಹಿತ್ಯದಿಂದ ಎತ್ತಿದರೂ ಅಷ್ಟೆ; ಒಂದು ಪಾಪ, ಇನ್ನೊಂದು ಪುಣ್ಯ, ಒಂದು ದುರ್ಗತಿ, ಇನ್ನೊಂದು ಪ್ರಗತಿ ಎನ್ನಲಾಗುವುದು. ಕಳವು ಕಳವೆ, ಚಾರುದತ್ತನ ಮನೆಯಿಂದಿರಲಿ, ಶಕಾರನ ಮನೆಯಿಂದಿರಲಿ. ಮತ್ತು ಕಳುವಿನ ವಸ್ತು ಎಂದೂ ನಮ್ಮದಾಗದು. ದೇಶವು ದಾಸ್ಯದಲ್ಲಿದ್ದಾಗ ಸತ್ತ್ವಯುತವಾಗಿದ್ದ ಸಾಹಿತ್ಯವು ಸ್ವಾತಂತ್ರ್ಯ ದೊರೆತಮೇಲೆ ಸಪ್ಪೆಯಾಗಿರುವುದೆಂದರೆ ಆಶ್ಚರ್ಯವಲ್ಲವೆ? ವ್ಯಕ್ತಿಸ್ವಾತಂತ್ರ್ಯ ದೊರೆತಕಾಲದಲ್ಲಿ ನಮಗೆ ಸ್ವತಂತ್ರವಿಚಾರಗಳಿರಬಾರದೆಂದರೆ? ಆದರೂ ಇಂದಿನ ಸಾಹಿತ್ಯಕೃತಿಗಳನ್ನು ನೋಡಿದರೆ ವಿಚಾರದಾಸ್ಯ, ಅನುಕರಣ ಇನ್ನು ಸಾಕಷ್ಟಾಗಿ ಕಂಡುಬರುತ್ತಿದೆ. ಇದಕ್ಕೆ ಅನೇಕ ಕಾರಣಗಳಿವೆ; ಮುಖ್ಯವಾದ ಎರಡನ್ನು ಇಲ್ಲಿ ಹೇಳುತ್ತೇನೆ. ಒಂದು, ಸ್ವತಂತ್ರ ವಿಚಾರಕ್ಕೆ ಸ್ಫೂರ್ತಿಯನ್ನು ಕೊಡುವಂತಹ ಧ್ಯೇಯ ತರುಣ ಸಾಹಿತಿಗಳ ಎದುರಿಗಿಲ್ಲ. ಸ್ವಾತಂತ್ರ್ಯದ ಮುಂಚೆ, ಸ್ವಾತಂತ್ರ್ಯ ಸಾಧನೆಯ ಉದಾತ್ತ ಧ್ಯೇಯವಿದ್ದಿತು. ಈಗೇನಿದೆ? ಎಷ್ಟು ಕಲಿತರೂ ನೌಕರಿ ಸಿಕ್ಕುವುದಿಲ್ಲ–ಎಂಬ ಕಟು ವಿಚಾರವಿದೆ. ಇದಕ್ಕೆ ಸಂಬಂಧಿಸಿದ ಎರಡನೆಯ ವಿಷಯ; ಅದೆಂದರೆ, ಸ್ವಾತಂತ್ರ್ಯದ ತರುವಾಯ ಅನಿವಾರ್ಯವಾಗಿ ಕಂಡು ಬರುವ ಕೆಲವು ವಿಷಮತೆಗಳು. ಒಂದೆಡೆ ಉಚ್ಚಶಿಕ್ಷಣದಲ್ಲಿ ಉತ್ತಮವಾಗಿ ತೇರ್ಗಡೆ ಹೊಂದಿದವನು ಹೊಟ್ಟೆಗಿಲ್ಲದೆ ಬಳಲುವಾಗ, ಇನ್ನೊಂದೆಡೆ ಹೆಬ್ಬೆರಳಿನ ದೊರೆಯೊಬ್ಬ ಘನವಂತನಾಗಿರುವುದು ಯಾಕೆ? ಹೇಗೆ? ಎಂದು ತಲೆ ತುರಿಸುವ ತರುಣನು ಈ ಜಗತ್ತಿನಲ್ಲಿ ಬುದ್ಧಿಗೂ, ಪ್ರಾಮಾಣಿಕತೆಗೂ ಬೆಲೆ ಇಲ್ಲ ಎಂದು ಸಮಾಜ ವಿರೋಧಕನಾಗುವನು. ಈ ವಾತಾವರಣದಲ್ಲಿ ಸಹೃದಯ ಸಾಹಿತ್ಯ ನಿರ್ಮಾಣವಾಗುವುದು ಹೇಗೆ? ಇದು ನಮ್ಮ ಮುಂದಾಳುಗಳು ಬಿಡಿಸಬೇಕಾದ ಪ್ರಶ್ನೆ. ಸಮಾಜದಲ್ಲಿ ವಿಷಮತೆಗಳು ಶಕ್ಯವಾಗದಂತೆ, ಯೋಗ್ಯತೆಗೆ ತಕ್ಕ ಮನ್ನಣೆ ದೊರೆಯುವಂತೆ ಪರಿಸ್ಥಿತಿಯನ್ನು ಸ್ವಂತದ ಉದಾಹರಣದಿಂದ ಮತ್ತು ಪ್ರಯತ್ನಗಳಿಂದ ಸಾಧಿಸಬೇಕಾದುದು ಮುಂದಾಳುಗಳ ಹೊಣೆಗಾರಿಕೆಯಾಗಿದೆ.

**ಕೊನೆಯದಾಗಿ**

ಸಾಹಿತ್ಯಾಭಿಮಾನಿಗಳಾದ ಸಭಿಕಮಹಾಶಯರೆ, ಇನ್ನೂ ಅನೇಕ ಮಾತುಗಳನ್ನು ನಾನು ಹೇಳಬಹುದಾಗಿತ್ತು. ಆದರೆ ವರ್ಷವರ್ಷಕ್ಕೆ ಸೇರುವ ಈ ಸಮ್ಮೇಳನದಲ್ಲಿ ಇಡಿಯ ಭವಿಷ್ಯತ್ಕಾಲಕ್ಕಾಗಿ ಮಾತಾಡುವಷ್ಟು ಆಶೆಬುರುಕನಾಗುವುದು ಅಷ್ಟೊಂದು ಯೋಗ್ಯವಾಗಲಿಕ್ಕಿಲ್ಲ. ಈ ಕ್ಷಣ ನಮ್ಮೆದುರಿಗಿದ್ದ ಕೆಲವು ಸಮಸ್ಯೆಗಳು, ಅವುಗಳನ್ನು ಬಿಡಿಸಲು ಒಂದು ವರ್ಷದ ಅವಧಿಯಲ್ಲಿ ಮಾಡಬಹುದಾದ ಉಪಾಯಗಳು, ಇವಕ್ಕೆ ಹಿನ್ನೆಲೆಯಾದ ಪರಿಸ್ಥಿತಿ ಇಷ್ಟನ್ನು ಹೇಳಿದರೆ ನನ್ನ ಕೆಲಸ ಮುಗಿಯಿತು ಎಂದು ನಾನು ತಿಳಿಯುತ್ತೇನೆ. ಸಾಹಿತಿಯ ಸಮಸ್ಯೆ ಬಹುಮುಖವಾದ ಸಮಸ್ಯೆ. ಉಪಜೀವನ ಪ್ರಶ್ನೆ ಅವನ ವೈಯಕ್ತಿಕ ಸಮಸ್ಯೆ ಎನ್ನಿಸಿದರೆ, ಅವನು ಅನ್ಯೋಪಜೀವಿಯಾಗುವುದು ಸಾಮಾಜಿಕ ಸಮಸ್ಯೆ ಎನ್ನಿಸುವುದು. ಅನ್ಯೋಪಜೀವಿಯಾದ ಸಾಹಿತಿ ಸಮಾಜಕ್ಕೆ ಕಂಟಕನಾಗಬಹುದಾಗಿದೆ. ಸಾಹಿತಿಯನ್ನು

ಅನ್ಯೋಪಜೀವಿಯನ್ನಾಗಿ ಮಾಡುವ ಅನೇಕ ಶಕ್ತಿಗಳು ನಮ್ಮ ಸಮಾಜ ರಚನೆಯಲ್ಲಿವೆ. ಧನಿಕ ಒಡೆಯನಿಗಾಗಿ ಅಗ್ರಲೇಖನಗಳನ್ನು ಬರೆಯುವ ಸಂಪಾದಕರು, ದೇಶದ ಸರಕಾರಕ್ಕಾಗಿ ಸ್ತುತಿಪಾಠವನ್ನು ಬರೆಯುವ ಸಾಹಿತಿಗಳು, ಪ್ರೊಪ್ರಾಯಿಟರ ಇಲ್ಲವೆ ಅವನ ಸೂಳೆಗಾಗಿ ನಾಟಕಗಳನ್ನು ಬರೆಯುವ ನಾಟಕಕಾರರು, ಬರೆದುದಕ್ಕೆ ಚಿತ್ರನಿರ್ಮಾಪಕನ ಹೆಸರನ್ನು ಕೊಡುವ ಕತೆಗಾರರು — ಇಂತಹ ವ್ಯಕ್ತಿಗಳು ದೊರಕಿಯೇ ದೊರಕುತ್ತಾರೆ. ಅವರಲ್ಲಿ ಯೋಗ್ಯತೆ ಇದ್ದರೆ ಆ ಮಟ್ಟಿಗೆ ಸಮಾಜಕ್ಕೆ ಹಾನಿ, ಯೋಗ್ಯತೆ ಇಲ್ಲದಿದ್ದರೆ ಆ ಮಟ್ಟಿಗೆ ಸಮಾಜದಲ್ಲಿ ಅನ್ಯಾಯ. ಈ ಪರಿಸ್ಥಿತಿಯನ್ನು ವಿಧಿಸುವುದು ಹೇಗೆ? ಇದು ಆಯಾ ವ್ಯಕ್ತಿಗಳದೆ ತಪ್ಪು ಎಂದು ಒಂದು ಅಭಿಪ್ರಾಯ, ಇದು ಸಮಾಜ ಪರಿಸ್ಥಿತಿಯ ತಪ್ಪು ಎಂಬುದು ಇನ್ನೊಂದು ಅಭಿಪ್ರಾಯ. ತಪ್ಪು ಯಾರದೇ ಇದ್ದರೂ ಸಾಹಿತ್ಯಸೃಷ್ಟಿಯಲ್ಲಿ ಇದೊಂದು ಅನಾಹುತ ಎಂಬುದನ್ನು ಒಪ್ಪಲೇಬೇಕು.

ಇಷ್ಟಾದರೂ ನಾನು ಆಶಾವಾದಿಯಾಗಿದ್ದೇನೆ. ದೋಷಗಳನ್ನು ಹುಡುಕುವದು ನನ್ನ ಸ್ವಭಾವವಾಗಿದ್ದರೂ ಸರಿಪಡಿಸಿಕೊಳ್ಳುವ ಅವಸರ ಅದರಲ್ಲಿದೆ. ಸ್ಫೂರ್ತಿಗೆ ಅನೇಕ ವ್ಯಾಖ್ಯೆಗಳನ್ನು ಕೊಡಬಹುದಾದರೂ ವ್ಯಾವಹಾರಿಕವಾಗಿ ಒಂದು ವ್ಯಾಖ್ಯೆಯನ್ನು ಕೊಡಬಹುದಾಗಿದೆ. ಸ್ಫೂರ್ತಿ ಎಂದರೆ ಅಸಮಾಧಾನ, ಅತೃಪ್ತಿ. ಆ ತರದ ಸ್ಫೂರ್ತಿ ನಮ್ಮ ತರುಣರಿಗೆ ಸಾಕಷ್ಟಿದೆ. ಜೊತೆಗೆ ಹೊರಗಿನ ವಾತಾವರಣವೂ ಅನುಕೂಲವಾಗುತ್ತಲಿದೆ. ಸಾಹಿತ್ಯ, ನಾಟಕ, ಲಲಿತಕಲೆ ಇವುಗಳಿಗೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ದಿನ ದಿನಕ್ಕೆ ಉತ್ತೇಜನವನ್ನು ಕೊಡುತ್ತಲಿವೆ. ಅನೇಕ ರಾಜ್ಯಗಳಲ್ಲಿ ಮತ್ತು ಕೇಂದ್ರದಲ್ಲಿ ನಾಟಕ ಮತ್ತು ನೃತ್ಯಕಲೆಗೆ ಮನ್ನಣೆ ಮತ್ತು ಆಶ್ರಯ ದೊರೆಯುತ್ತಲಿವೆ. ಅಲ್ಲಲ್ಲಿ ಸ್ಪರ್ಧೆಗಳು ನಡೆಯುತ್ತಿವೆ. ಇದಲ್ಲದೆ ಆಗಾಗ ವಿದೇಶೀಯ ಕಲಾಕಾರರು ನಮ್ಮಲ್ಲಿ ಬಂದು ತಮ್ಮ ಕಲೆಯ ಪ್ರದರ್ಶನವನ್ನು ಮಾಡುತ್ತಾರೆ, ನಮ್ಮದರ ಪರಿಚಯವನ್ನು ಮಾಡಿಕೊಳ್ಳುತ್ತಾರೆ. ನಮ್ಮಲ್ಲಿಯ ಕಲಾಕಾರರೂ ಪರದೇಶಗಳ ಸಂಚಾರವನ್ನು ಮಾಡುತ್ತಾರೆ. ಸ್ವಾತಂತ್ರ್ಯ ದೊರೆತ ಸ್ವಲ್ಪಾವಧಿಯಲ್ಲಿಯೆ ಇದೆಲ್ಲ ನಡೆದುದನ್ನು ನೋಡಿದರೆ ಆಶಾವಾದಿಯಾಗುವುದರಲ್ಲಿ ಆಶ್ಚರ್ಯವೇನು? ದೇಶ–ವಿದೇಶಗಳ ಪರಿಚಯದ ಜೊತೆಗೆಯೆ ನಂನಮ್ಮೊಳಗೂ ಪರಿಚಯವಾದರೆ ಭಾರತವು ಒಂದು ರಾಷ್ಟ್ರ, ಭಾರತಕ್ಕೆ ಒಂದು ಸಂಸ್ಕೃತಿ ಎಂಬುದನ್ನು ನಮ್ಮವರು ಕಣ್ಣಾರೆ ಕಂಡು ಉತ್ತೇಜಿತರಾಗುತ್ತಾರೆ. ಅಂತಹ ಉತ್ಕರ್ಷದ ಕಾಲ ಬೇಗ ಬರಲಿ, ಹಾಗಾಗುವುದರಲ್ಲಿ ಕನ್ನಡಿಗರ ಕೊಡುಗೆ ಶ್ರೇಷ್ಠವಾದುದಾಗಿರಲಿ ಎಂದು ಹಾರಯಿಸಿ. ಇಂದು ಈ ರೀತಿಯಾಗಿ ನನ್ನನ್ನು ಈ ಗೌರವ ಸ್ಥಾನದಲ್ಲಿ ತಮ್ಮೆಲ್ಲರ ಸೇವೆಗಾಗಿ ಎತ್ತಿ ಕುಳ್ಳಿರಿಸಿದ್ದಕ್ಕೆ ತಮ್ಮನ್ನೆಲ್ಲ ಇನ್ನೊಮ್ಮೆ ಕೃತಜ್ಞತಾಪೂರ್ವಕವಾಗಿ ವಂದಿಸುತ್ತೇನೆ.

---



# ಮೂವತ್ತೆಂಟನೆಯ ಕನ್ನಡ ಸಾಹಿತ್ಯ ಸಮ್ಮೇಳನ, ರಾಯಚೂರು

## ನಾಟಕ ಗೋಷ್ಠಿಯ ಅಧ್ಯಕ್ಷರಾದ
## ನಾಟಕರತ್ನ ಶ್ರೀ ಜಿ. ಎಚ್. ವೀರಣ್ಣನವರ ಭಾಷಣ

**26-12-1955**

ಮಹಾಶಯರೇ !

ಈ ದಿನದ ಪವಿತ್ರವಾದ ಮತ್ತು ಪ್ರಾಚೀನಕಾಲದಿಂದಲೂ ನಡೆದುಕೊಂಡು ಬಂದ ನಾಟಕ ಕಲೆಯ ಸಮ್ಮೇಳನದ ಸಮಾರಂಭಕ್ಕೆ ನನ್ನನ್ನು ತುಂಬಾ ಅಕ್ಕರೆಯಿಂದ ಬರಮಾಡಿಕೊಂಡಿರುವುದಕ್ಕಾಗಿ ನಾನು ಈ ಸಮಿತಿಯವರಿಗೆ ನನ್ನ ಹೃತ್ಪೂರ್ವಕವಾದ ವಂದನೆಗಳನ್ನು ಸಲ್ಲಿಸುತ್ತೇನೆ. ನಾನು ನನ್ನ ಬಾಲ್ಯದಿಂದಲೂ ಅಂದರೆ ನನ್ನ ಐದನೇ ವಯಸ್ಸಿನಿಂದಲೂ ನಾಟಕದ ಕಲೆಯಲ್ಲೇ ನನ್ನ ಜೀವನವನ್ನು ನಡೆಯಿಸಿಕೊಂಡು ಒಂದೇ ಸಮನಾಗಿ ರಂಗದೇವತೆಯ ಸೇವೆಗಾಗಿಯೇ ಅರವತ್ತು ವರ್ಷಗಳ ಕಾಲ ಶರೀರವನ್ನೇ ಮೀಸಲಾಗಿಟ್ಟಿದ್ದೇನೆಂದು ಹೇಳಿದರೂ ಅತಿಶಯೋಕ್ತಿಯಾಗಲಾರದು. ಈ ಅರವತ್ತು ವರ್ಷಗಳ ಹಿಂದೆ ರಂಗಭೂಮಿಯು ಯಾವ ಸ್ಥಿತಿಯಲ್ಲಿತ್ತು ಎಂಬುದನ್ನು ನನ್ನ ಅನುಭವದ ಮೂಲಕ ಸೂಕ್ಷ್ಮವಾಗಿ ತಿಳಿಸಬಯಸುತ್ತೇನೆ.

### ಅರವತ್ತು ವರ್ಷಗಳ ಹಿಂದೆ !

"ಗುಬ್ಬಿ ಶ್ರೀ ಚೆನ್ನಬಸವೇಶ್ವರಸ್ವಾಮಿ ಕೃಪಾಪೋಷಿತ ನಾಟಕ ಸಭಾ" ಎಂಬ ಹೆಸರಿನಿಂದ ಒಂದು ಸಂಸ್ಥೆಯನ್ನು ಸ್ಥಾಪಿಸಿ "ಕುಮಾರ ರಾಮ" ಎಂಬ ನಾಟಕವನ್ನು ಯಕ್ಷಗಾನದ ರೀತಿಯಿಂದ ಆರಂಭಿಸಿ ಕೆಲದಿನಗಳಾದನಂತರ ಅದೇ ಸಂಸ್ಥೆಯೇ "ಚೋರ ಕಥೆ" ಎಂಬ ಒಂದು ನಾಟಕವನ್ನು ಕಲಿತು ಆಡಿತು. ಅನಂತರ ಸಾಂಗ್ಲಿ ಮತ್ತು ಪಾರ್ಸಿ ಕಂಪೆನಿಗಳು ಬಂದ ನಂತರ ನಮ್ಮ ಸಂಘದವರು "ಗುಲೇಬಕಾವಲಿ" ಎಂಬ ನಾಟಕವನ್ನು ಕನ್ನಡದಲ್ಲಿ ಬರೆಯಿಸಿ ಅಭ್ಯಾಸಮಾಡಿ ಆಡಿದರು. ಅನಂತರ ಶ್ರೀ ವೀರಪ್ಪಶಾಸ್ತ್ರಿಗಳವರಿಂದ "ಜಗನ್ಮೋಹನ ಚರಿತ್ರೆ ಅಥವಾ ಕರಿಭಂಟನ ಕಥೆ" ಎಂಬ ಬೈಲಾಟದ ಕಥೆಯನ್ನು ನಾಟಕಕ್ಕೆ ರೂಪಾಂತರ ಮಾಡಿಸಿ ಅಭಿನಯಿಸಿದರು. ಈ ಮೂರು ನಾಟಕಗಳಿಂದ ನಮ್ಮ ಸಂಘವು ಬಹಳ ಪ್ರಸಿದ್ಧಿಗೆ ಬಂದಿತು ಆಗ ನಾಟಕ ನೋಡಿದ ಜನಗಳು ಪರದೆ ಮೇಲಕ್ಕೆ ಹೇಗೆ ಸುತ್ತಿಕೊಂಡು ಹೋಗುತ್ತದೆ ಎಂದು ಆಶ್ಚರ್ಯದಿಂದ ನೋಡುವ ಕಾಲವಾಗಿತ್ತು. ಅನಂತರ ಶ್ರೀ ಶಂಕರಶಾಸ್ತ್ರಿಗಳಿಂದ "ಪಾಂಡವ ವಿಜಯ" ಎಂಬ ನಾಟಕವನ್ನು (ಭಾರತದ ಭಾಗಗಳನ್ನೊಳಗೊಂಡದ್ದು) ಕಲಿತು ಆಡಿದರು. ಅನಂತರ "ನಂ

ಶ್ಚಂದ್ರ", "ಧರ್ಮಪಾಲ" ಮತ್ತು "ದ್ರೌಪದೀ ಸ್ವಯಂವರ" ಎಂಬ ನಾಟಕಗಳನ್ನು ಆಡಲು ಪ್ರಾರಂಭಿಸಿ ಊರೂರು ಸಂಚಾರ ಮಾಡುತ್ತಿದ್ದರು.

ಆಗಿನ ರಂಗಭೂಮಿಯ ನಟರು ಒಂದು ಸಂಸ್ಥೆಯಲ್ಲಿ ಕೇವಲ ಸುಮಾರು ಹನ್ನೆರಡು ಜನರಿದ್ದರು. ಒಂದು ಸಂಘದಲ್ಲಿ 20–25 ಜನರು ಇರುತ್ತಿದ್ದರು. ಅದರಲ್ಲಿ ಪ್ರೊಪ್ರೈಟರ್, ವ್ಯವಸ್ಥೆಗಾರರು, ನಟರು, ವಾದ್ಯಗಾರರು, ಸೀನರಿ ಕೆಲಸದವರು, ಗೇಟಿನವರು, ಅಡಿಗೆಯವರು ಮುಂತಾದವರೆಲ್ಲರೂ ಸೇರಿ ಇಪ್ಪತ್ತೈದು ಜನಗಳಾಗುತ್ತಿದ್ದರು. ಸಲಬು ಐದು ರೂಪಾಯಿನಿಂದ ಹಿಡಿದು ಹದಿನೈದು ರೂಪಾಯಿಗಳವರೆಗೂ ಇರುತ್ತಿತ್ತು. ಆಗ ನಾನು ಐದು ರೂಪಾಯಿನ ಗ್ರೇಡಿನಲ್ಲಿದ್ದೆ. ನನಗೆ ಆಗ ಇನ್ನೂ ಆರೇ ವರ್ಷ ವಯಸ್ಸು. ನಾನು "ಹರಿಶ್ಚಂದ್ರ" ನಾಟಕದಲ್ಲಿ 'ರೋಹಿತಾಶ್ವ'ನ ಪಾತ್ರವನ್ನು ಮಾಡುತ್ತಿದ್ದೆ. ಆಗಿನಿಂದಲೇ ನಮ್ಮ ಸಂಘವು ಮೈಸೂರು ದೇಶದಲ್ಲಿ ಉತ್ತಮವಾದ ಸಂಘವೆನಿಸಿಕೊಂಡಿತ್ತು.

## ಆಗ ಇದ್ದ ಸಂಘದ ಸಲಕರಣೆ ಮತ್ತು ವ್ಯವಸ್ಥೆ.

**ಸೀನ್‌ಗಳು :—**1 ಅಂಕದ ಪರದೆ. 1 ಸೂತ್ರಧಾರಿ ಪರದೆ, 1 ದರ್ಬಾರಿನ ಪರದೆ, 1 ಉದ್ಯಾನವನದ ಪರದೆ, 1 ಕಾಡು ಪರದೆ, 2 ಜೊತೆ ದರ್ಬಾರ್ ವಿಂಗ್ಸ್, 1 ಜೊತೆ ಉದ್ಯಾನವನದ ವಿಂಗ್ಸ್, ೧ ಜೊತೆ ಕಾಡು ವಿಂಗ್ಸ್ ಇವನ್ನು ಬರೆಸಿ ಇಳಿಬಿಟ್ಟಿರುತ್ತಿತ್ತು. ರಂಗಭೂಮಿಗೆ ನಟರು ಪ್ರವೇಶಮಾಡುವಾಗ ಮತ್ತು ಹೋಗುವಾಗ ಈ ಇಳಿಬಿಟ್ಟ ವಿಂಗ್ಸ್‌ಗಳು ನಟರ ಹೆಗಲಮೇಲೆ ಬಂದು ಹೋಗುತ್ತಿದ್ದವು!

ಸೀಮೆ ಎಣ್ಣೆಯ ಖಾಲಿ ಡಬ್ಬಗಳನ್ನು ಕೆಳಗೆ ಹಾಕಿ, ಅವುಗಳ ಮೇಲೆ ಐದು ಅಡಿ ಹಲಗೆಗಳನ್ನು ಹಾಕಿ, ಅದರ ಮೇಲೆ ಜಾಕಾಯಿ ಪೆಟ್ಟಿಗೆಗಳನ್ನಿಟ್ಟು ಮೇಲೆ ಕೆಂಪು ಬೂರ್ನೀಸನ್ನು ಹೊದಿಸಿ ಅದನ್ನೇ ಸಿಂಹಾಸನವೆಂದು ಉಪಯೋಗಿಸುತ್ತಿದ್ದರು.

ರಂಗಭೂಮಿಯು ಎತ್ತರವಾಗಿರುವುದಕ್ಕಾಗಿ, ಕುರ್ಚಿ ಹಾಕಲು ತೆಗೆಯುವ ಹಳ್ಳದ ಮಣ್ಣನ್ನು ರಂಗಭೂಮಿಯ ಪೂರ್ತ ಎತ್ತರವಾಗಿ ಹಾಕುತ್ತಿದ್ದರು. ರಂಗಭೂಮಿಯ ಅಳತೆ ಹದಿನೆಂಟು ಅಡಿ ಉದ್ದ, ಹನ್ನೆರಡು ಅಡಿ ಅಗಲ ಇಡುತ್ತಿದ್ದರು.

**ಮೇಕಪ್ :—**ಅರಿದಾಳವನ್ನು ಸಾಣೆಕಲ್ಲಿನ ಮೇಲೆ ತೇದು ಮುಖಕ್ಕೆ ಬಳಿಯುತ್ತಿದ್ದರು. ಇದ್ದಿಲನ್ನು ತೇದು ಜಿಂಕಿ ಕಡ್ಡಿಯಿಂದ ಹುಬ್ಬುಗಳನ್ನೂ ಮೀಸೆಗಳನ್ನೂ ಬರೆದುಕೊಳ್ಳುತ್ತಿದ್ದರು. ಕೊಂಚ ನಾಗರಿಕವಾಗುತ್ತಾ ಆಗುತ್ತಾ "ಸಫೇತ"ವನ್ನು ಹಚ್ಚಿಕೊಂಡು ಅದರ ಮೇಲೆ "ಇಂಗ್ಲೀಕ" ಬೆರಸಿ, ಅದರ ಮೇಲೆ "ಕಾಗೆಬಂಗಾರ" ಪುಡಿಮಾಡಿ ಮುಖಕ್ಕೆ ಮೆತ್ತಿಕೊಂಡು ಮಿಂಚು ಹೊಳೆಯುವಂತೆ ಮಾಡುತ್ತಿದ್ದರು. ಕ್ರಮೇಣ ವೈಟ್‌ಜಿಂಕ್ ಅಥವಾ ವೈಟ್ ಲೆಡ್‌ಗೆ ರೆಡ್ ಮಿಶ್ರಮಾಡಿ ಹಚ್ಚುತ್ತ ಬಂದು ಕ್ರಮೇಣ ವ್ಯಾಸಲೈನ್ ಮಿಶ್ರಮಾಡಿ ಚೆನ್ನಾಗಿ ಅರೆದು ಮೇಕಪ್ ಮಾಡುತ್ತಿದ್ದು ಈಗ "ಮ್ಯಾಕ್ಸ್‌ಫ್ಯಾಕ್ಟರ್" ಕಂಪೆನಿಯಿಂದ ಬಣ್ಣಗಳ ಟ್ಯೂಬುಗಳನ್ನು ತರಿಸಿಕೊಳ್ಳುತ್ತಾರೆ. ಲಿಪ್‌ಸ್ಟಿಕ್‌ನಿಂದ ಅಲಂಕರಿಸಿಕೊಳ್ಳುತ್ತಾರೆ. ಹಿಂದೆ ಮೇಕಪ್ ಮಾಡಿಕೊಳ್ಳಲು ಒಂದು ಜಾಯಿಕಾಯಿ ಪೆಟ್ಟಿಗೆಯನ್ನು ಇಟ್ಟು ಅದರ ಮೇಲೆ ಒಂದು ಲ್ಯಾಂಪನ್ನು ಇಟ್ಟುಕೊಂಡು ಕೊಂಡು ಸುತ್ತಲೂ ನಟರು ಕುಳಿತುಕೊಂಡು ಬಣ್ಣ ಹಚ್ಚಿಕೊಳ್ಳುತಿದ್ದರು. ಒಂದು ಸಣ್ಣ ಕನ್ನಡಿ, ಸುಣ್ಣದ ಡಬ್ಬಿಗೆ ಹಾಕುವಂತಹುದು; ಮುಖಕ್ಕೆ ಮಾತ್ರ ಬಣ್ಣ ಹಾಕುತ್ತಿದ್ದರು.

ಕುತ್ತಿಗೆಗೆ, ಕೈಗೆ ಹಾಕುತ್ತಿರಲಿಲ್ಲ. ಕ್ರೂರವಾದ ಪಾತ್ರಗಳಿಗೆ ಅಂಪರೆ ಘೀಮು, ದುರ್ವಾಸನ ಮುಂತಾದ ಪಾತ್ರಗಳಿಗೆ ಕಣ್ಣಿನ ಸುತ್ತಲೂ ಕಪ್ಪು ಅಥವಾ ಕೆಂಪನ್ನು ಬಳಿದು ಅದರ ಸುತ್ತಲೂ ಬಿಳಿಯ ಬಣ್ಣದ ಚುಕ್ಕೆಗಳನ್ನು ಇಟ್ಟುಕೊಳ್ಳುತ್ತಿದ್ದರು.

**ಡ್ರೆಸ್ಸುಗಳು :—** ರಾಜ ಪಾರ್ಟುಗಳಿಗೆ ಕರೀ ಬಟ್ಟೆಯಲ್ಲಿ ಕೋಟು ಷರಾಯಿಗಳನ್ನು ಹೊಲಿಸಿ, ಅದಕ್ಕೆ ಅಗಲವಾದ ಚಂಕಿಗಳನ್ನು ಹೊಲಿದು ಡ್ರೆಸ್ ಮಾಡುತ್ತಿದ್ದು, ತಲೆಗೆ ಕಲಾಪತ್ತು ಪೇಟ ಸುತ್ತಿಕೊಳ್ಳುತ್ತಿದ್ದರು. ಕಾಲುಚೀಲ ಹಾಕುತ್ತಿದ್ದರು. ಪೌರಾಣಿಕ ನಾಟಕವಾಗಲಿ ಕಾಲ್ಪನಿಕ ನಾಟಕವಾಗಲಿ ಎಲ್ಲಾ ನಾಟಕಗಳಿಗೂ ಅದೇ ಉಡುಪುಗಳೇ ಆಗಿದ್ದವು.

ಸ್ತ್ರೀ ಪಾತ್ರಗಳನ್ನು ಗಂಡಸರೇ ಮಾಡುತ್ತಿದ್ದರು. ತಲೆಗೆ ಟೋಪನ್ನು ಹಾಕುತ್ತಿದ್ದರು. ಮತ್ತು ಕರೀಬಟ್ಟೆಗೆ ಮಧ್ಯೆ ಬಿಳೀದಾರ ಹೊಲಿದು ತಲೆಗೆ ಕಟ್ಟಿಕೊಳ್ಳುತ್ತಿದ್ದರು. ಕಿವಿಗೆ ಚಂಪಕಲ್ಲಿ ಜುಂಕಿಗಳನ್ನು ಹಾಕುತ್ತಿದ್ದರು. ಮಳೆಗಾಲದಲ್ಲಿ ಪತಂಗದ ಹುಳುಗಳು ದೀಪದ ಬೆಳಕಿಗೆ ಮುತ್ತಿಕೊಂಡು ಟೋಪನ್ನಿನ ಒಳಗೆ ನುಗ್ಗಿ ಮುಲುಮುಲು ಅಂದಾಗ ಟೋಪನ್ನನ್ನು ಕದಲಿಸಿದಾಗ ಕ್ಷೌರ ಮಾಡಿಸಿದ ತಲೆ ಕಂಡು ನೋಡುವ ಪ್ರೇಕ್ಷಕರಿಗೆ ಅಸಹ್ಯವಾಗಿ ಕಾಣುತ್ತಿದ್ದ ಸಂದರ್ಭಗಳು ಅನೇಕವಾಗಿ ಬರುತ್ತಿದ್ದವು. ಸಂದರ್ಭಾನುಸಾರ ನಾಟಕ ನೋಡಲು ಬಂದ ಸ್ತ್ರೀಯರಿಂದ ಒಡವೆ ವಸ್ತುಗಳನ್ನು ಸಹ ಅನೇಕ ಬಾರಿ ತೆಗೆದುಕೊಂಡು ಪಾತ್ರವಹಿಸುತ್ತಿದ್ದುದೂ ನಡೆಯುತ್ತಿತ್ತು. ಕಾಲುಗಳಿಗೆ ಕಾಲುಚೀಲಗಳನ್ನು ಗಂಡುಪಾತ್ರಕ್ಕೆ ಮಾತ್ರವಲ್ಲದೆ ಹೆಣ್ಣುಪಾತ್ರಕ್ಕೂ ಸಹ ಉಪಯೋಗಿಸುತ್ತಿದ್ದರು. ಅದು ಕರೀ ಕಾಲುಚೀಲ.

**ನಾಟಕಗಳು :—** ಪೌರಾಣಿಕ ನಾಟಕಗಳೇ ಹೆಚ್ಚಾಗಿ ಆಡಲ್ಪಡುತ್ತಿದ್ದವು. ಯಾವ ನಾಟಕಗಳಾಗಲೀ ರಾಜ, ಮಂತ್ರಿ, ಸೇನಾಧಿಪತಿ ಮೊದಲನೇ ಸೀನಿನಲ್ಲಿ ಬರುವ ಹಾಗೆ ಕವಿಗಳು ಬರೆಯುತ್ತಿದ್ದರು. ಒಂದು ನಾಟಕಕ್ಕೆ ಎಪ್ಪತ್ತು-ಎಂಭತ್ತು ಹಾಡುಗಳು, ಇಪ್ಪತ್ತು-ಮೂವತ್ತು ಕಂದಗಳಿಗೆ ಕಡಿಮೆ ಇರುತ್ತಿರಲಿಲ್ಲ. ಒಂದು ಹಾಡಿಗೆ ಪಲ್ಲವಿ, ಅನುಪಲ್ಲವಿ, 3 ಚರಣಕ್ಕೆ ಕಡಿಮೆ ಇರುತ್ತಿರಲಿಲ್ಲ. ಹೋಗುವುದಕ್ಕೂ ಬರುವುದಕ್ಕೂ ಹಾಡು ! ಹೀಗಿದ್ದು ರಾತ್ರಿ 9½ ಘಂಟೆಗೆ ಪ್ರಾರಂಭವಾದ ನಾಟಕ ಬೆಳಗಿನ ಜಾವ 4½ ಘಂಟೆಯವರೆಗೂ ನಡೆಯುತ್ತಿತ್ತು. ಪರದೆ ಬಿದ್ದಾಗ ಒಳಗಡೆ ಹಾಡುವ ಪದ್ಧತಿ ಬೇರೆ ಇತ್ತು. ಕವಿ ಪ್ರಾಸಬದ್ಧವಿಲ್ಲದೆ ಯಾವ ಹಾಡನ್ನಾಗಲೀ ಬರೆಯುತ್ತಿರಲಿಲ್ಲ. ಉತ್ತಮ ವರ್ಗದ ಕವಿಗಳಿದ್ದರೂ ಸಹ ನಾಟಕಗಳನ್ನು ಬರೆಯಬೇಕೆಂದರೆ ತಾತ್ಸಾರಭಾವನೆಯಿಂದ ಗಮನ ಕೊಡುತ್ತಿರಲಿಲ್ಲ.

1919ರಿಂದ ಈಚೆಗೆ ನಮ್ಮ ಸಂಘದಲ್ಲಿ ಕರ್ನಾಟಕ ಕವಿಕೇಸರಿ ಅಸ್ಥಾನವಿದ್ವಾನ್ ಶ್ರೀ ಬೆಳ್ಳಾವೆ ನರಹರಿಶಾಸ್ತ್ರಿಗಳನ್ನಿಟ್ಟುಕೊಂಡು ಕೃಷ್ಣಲೀಲಾ, ಕಂಸವಧ, ರುಕ್ಮಿಣೀ ಹರಣ, ಪಾರಿಜಾತ, ಶಿವಜಲಂಧರ, ಕೃಷ್ಣಗಾರುಡಿ, ಸತ್ಯಭಾಮಾ ಪರಿಣಯ, ಕಬೀರದಾಸ್, ತುಕಾರಾಮ ಚರಿತ್ರೆ ಮೊದಲಾದ ಪೌರಾಣಿಕ, ಐತಿಹಾಸಿಕ ನಾಟಕಗಳನ್ನು ಬರೆಯಿಸಿ ಅಭಿನಯಿಸಿದುದು ಸಂಘದ ಅಭಿವೃದ್ಧಿಗೆ ಕಾರಣವಾಯಿತು.

**ಪಬ್ಲಿಸಿಟಿ :—** ನಾಟಕ ಸಂಘದವರು ಹೊಸ ಮೊಕ್ಕಾಮಿಗೆ ಹೋದ ಕೂಡಲೇ ತಮ್ಮಟೆಯವನನ್ನು ಕರೆದು ತಮ್ಮಟೆ ಹೊಡೆಸಿಕೊಂಡು ಒಂದೊಂದು ಚೌಕದಲ್ಲಿ ತಮ್ಮಟೆ

ಹೊಡೆಯುವುದನ್ನು ಸೀಟಿ ಸಂಜ್ಞೆಗಳಿಂದ ನಿಲ್ಲಿಸಿ, ತಾವೇ ಬಾಯಲ್ಲಿ ಸಾರುವ ಪದ್ಧತಿಯನ್ನು ಇಟ್ಟಿದ್ದರು. 10–12 ಪ್ರಸಿದ್ಧಿಪತ್ರಿಕೆ ಕೊಡುತ್ತಿದ್ದರು.

ಕುರ್ಚಿ ಗುಂಡಿಯಲ್ಲಿ ಮಣ್ಣಿನ ದಿಂಡುಗಳನ್ನು ಬಿಟ್ಟು ಹಲಗೆಗಳನ್ನು ಹಾಕುತ್ತಿದ್ದರು. ಜೇರಿ ಹೊಸ ಕ್ಯಾಂಪಿಗೆ ಬೆಳಗ್ಗೆ 9 ಘಂಟೆಗೆ ಹೋದರೆ ಅದೇ ದಿನ ರಾತ್ರಿ ನಾಟಕ ಮಾಡುವ ಪದ್ಧತಿಯಿತ್ತು.

**ವಾದ್ಯ:**—ನಾಟಕಗಳು ನಡೆಯುವ ಕಾಲದಲ್ಲಿ ಒಳಗಡೆ ಒಂದು ಪಿಟೀಲು, ತಬಲ ಇವೆರಡೇ ವಾದ್ಯಗಳು. ಬಹುಕಾಲದ ಮೇಲೆ ಹಾರ್ಮೋನಿಯಂ ಶೃತಿಗಾಗಿ ಇಡಲಾಯಿತು. ಪ್ರತಿಯೊಂದು ಉಚ್ಚ ನೀಚ ಪಾತ್ರಗಳಿಗೂ ಹಾಡಿಲ್ಲವೆ ಇರುವ ನಾಟಕಗಳೇ ಇರುತ್ತಿರಲಿಲ್ಲ. ಗಂಡಸರೇ ಆಗಲಿ ಹೆಂಗಸರೇ ಆಗಲಿ ಒಂದೇ ಶೃತಿಯಲ್ಲಿ ಹಾಡಬೇಕಾಗಿತ್ತು! ಅವರವರ ಶಾರೀರಕ್ಕೆ ತಕ್ಕ ಶೃತಿ ಇಡುತ್ತಿರಲಿಲ್ಲ. ಮತ್ತು ಆಯಾ ಹಾಡಿನ ಟ್ಯೂನಿಗೆ ಸರಿಹೋಗುವ ಶೃತಿ ಇಡುತ್ತಿರಲಿಲ್ಲ. ಹಾರ್ಮೋನಿಯಮ್ಮಿನಲ್ಲಿ ಹಾಡುಗಳನ್ನು ನುಡಿಸಬಹುದೆಂಬ ವಿಚಾರವೇ ಗೊತ್ತಿರಲಿಲ್ಲ. ಏನಿದ್ದರೂ ಪಿಟೀಲಿನಲ್ಲಿ ಒಂದೇ ಶೃತಿಯಲ್ಲಿಯೇ ಎಲ್ಲರೂ ಹಾಡಬೇಕಾಗಿತ್ತು. ಸಂದರ್ಭಾನುಸಾರ ಶಾರೀರ ಶೃತಿಗೆ ಎಟುಕದಿದ್ದರೆ ಒಂದು ಪಾತ್ರದ ಹಾಡನ್ನು ಮತ್ತೊಬ್ಬ ಪಾತ್ರಧಾರಿ ಹಾಡುತ್ತಿದ್ದುದು ಹಾಸ್ಯಾಸ್ಪದವಾಗಿರುತ್ತಿತ್ತು.

**ಬೆಳಕಿನ ವ್ಯವಸ್ಥೆ:**—40 ಇಂಚಿನ ಸಿಲ್ವರ್ ಲ್ಯಾಂಪುಗಳು ಎರಡನ್ನು ಸ್ಟೇಜಿಗೆ ಕಟ್ಟಿ ಫುಟ್ ಲೈಟುಗಳಿಗೆ ದೋಣಿಯಂತೆ ಡಬ್ಬಗಳನ್ನು ಮಾಡಿ ಒಂದೊಂದು ಡಬ್ಬಿಗೆ ಮೂರು ಮೂರು ಬರ್ನರಂತೆ ಹಾಕಿ ಅದಕ್ಕೆ ಚಿಮ್ಮಣಿ ಹಾಕಿ ಮುಂದೆ ಇಡುತ್ತಿದ್ದರು. ಕ್ರಮೇಣ ಗ್ಯಾಸ್ ಲೈಟ್ ಬಂದನಂತರ ಅದಕ್ಕೆ ಷೇಡನ್ನು ತಗಡಿನಲ್ಲಿಟ್ಟುಕೊಂಡು ಸಂದರ್ಭಾನುಸಾರ ಕತ್ತಲು ಬೆಳಕು ಮಾಡಿಕೊಳ್ಳುತ್ತಿದ್ದರು. ಆಗಿನ ಕಾಲದಲ್ಲಿ ಹೇಗೆ ನಾಟಕಗಳನ್ನಾಡಿದರೂ ಜನರಿಗೆ ಒಂದು ವಿಚಿತ್ರವಾಗಿ ಕಂಡು ಸಂತೋಷಪಡುತ್ತಿದ್ದರು. ಆಗ ಬಹಳ ಅನಾಗರಿಕ ಕಾಲವೆಂದು ಧಾರಾಳವಾಗಿ ಹೇಳಬಹುದು. ಹೆಣ್ಣು ಪಾತ್ರವನ್ನು ಗಂಡಸರು ಧರಿಸುತ್ತಿದ್ದ ಕಾಲದಲ್ಲಿ ಪಾತ್ರಧಾರಿಗಳು ತಲೆಗೂದಲನ್ನು ಬೆಳೆಸಬಹುದಾಗಿತ್ತು. ಟೋಪನ್ನೇ ಬೇಕಿರಲಿಲ್ಲ! ಆದರೆ ಇದು ಬುದ್ಧಿಗೆ ಹೊಳೆಯುತ್ತಿರಲಿಲ್ಲ! ಅದರಂತೆಯೇ ಪ್ರೇಕ್ಷಕ ವರ್ಗದವರು ಕೂಡ ಹೇಗೆ ಮಾಡಿದರೂ ಹೇಗೆ ಆಡಿದರೂ ಆಕ್ಷೇಪಣೆ ಮಾಡುತ್ತಿರಲಿಲ್ಲ. ನಾಟಕ ಆಡುವಾಗ್ಗೆ ಹಿಂದೂಸ್ಥಾನೀ ಹಾಡಿ ಎಂದು ಪ್ರೇಕ್ಷಕರೇ ಕೂಗಿಕೊಳ್ಳುತ್ತಿದ್ದರು. ದೃಷ್ಟಾಂತಕ್ಕೆ ಮರಣವಾದಾಗಲೂ ಒನ್ಸ್‌ಮೋರ್ ಎಂದು ಹೇಳಿದ ಪ್ರೇಕ್ಷಕರೂ ಉಂಟು! ಸತ್ತವನು ಎದ್ದು ಹಾಡಿದುದೂ ಉಂಟು! ಹೀಗೆ ಅನಾಗರಿಕತೆಯಿಂದ ನಾಟಕಗಳನ್ನಾಡುತ್ತಿದ್ದರು.

ರಂಗಭೂಮಿಕೆಯ ಸಜ್ಜಿಕೆಯು 6–7 ಚಕ್ಕಡಿ ಬಂಡಿಯ ಸಾಮಾನುಗಳಿಂದ ಊರಿಂದ ಊರಿಗೆ ಸಾಗಿಸಲ್ಪಡುತ್ತಿತ್ತು. ನಟವರ್ಗದವರೇ ಎಲ್ಲಾ ಕೆಲಸಗಳನ್ನೂ ಮಾಡುತ್ತಿದ್ದರು. ಬೆಳಗ್ಗೆ ಹೊಸ ಕ್ಯಾಂಪಿಗೆ ಹೋದರೆ ಅವರೇ ಸ್ವತಃ ಡೇರೆ ಹಾಕಿಕೊಂಡು ರಾತ್ರಿ $9\frac{1}{2}$ ಘಂಟೆಗೆ ಅಮಲ್ದಾರ್ರವರ ಅಧ್ಯಕ್ಷತೆಯಲ್ಲಿ ನಾಟಕವಾಡುವ ಪದ್ಧತಿಯಿತ್ತು. ಅಮಲ್ದಾರರು ಕುಳಿತುಕೊಳ್ಳಲು ಸೀಟು ಕೂಡ ಅವರದನ್ನೇ ತರಬೇಕಾಗಿತ್ತು. ಇಷ್ಟು ಅವ್ಯವಸ್ಥೆಯಲ್ಲಿದ್ದ ನಾಟಕ ಸಂಘಗಳು ಇತ್ತೀಚೆಗೆ ಸುಧಾರಣೆಯಾಗಿ 6 ಪರದೆ, 5 ಜೊತೆ ವಿಂಗ್ಸ್ ಬಟ್ಟೆ ಇಳಿಬಿಟ್ಟು, ಅರಿದಾಳ, ಇದ್ದಲು, ಸಪೇದ, ಕಾಗೆ ಬಂಗಾರ, ಸೀಮೆಯೆಣ್ಣೆ

ಲ್ಯಾಂಪಿನ ಬೆಳಕುಗಳಲ್ಲಿ ನಾಟಕ ನಡೆಯುತ್ತಿದ್ದುದು ಹೋಗಿ ದಿನೇ ದಿನೇ ರಂಗಭೂಮಿಯು ಅವ್ಯವಸ್ಥೆ ಸುವ್ಯವಸ್ಥೆಯಾಗುತ್ತಲಿದೆ.

## ಮೈಸೂರು ಪ್ರಭುಗಳು—ರಂಗಭೂಮಿ

ನಮ್ಮ ಮೈಸೂರು ಸಂಸ್ಥಾನದ ಪ್ರಭುವರ್ಯರಾಗಿದ್ದ ಶ್ರೀ ಚಾಮರಾಜ ಒಡೆಯರ್‌ರವರು ತಮ್ಮದೇ ಆದ ಒಂದು ಸಂಘವನ್ನು ಸ್ಥಾಪಿಸಿ "ಚಾಮರಾಜೇಂದ್ರ ಕರ್ನಾಟಕ ನಾಟಕ ಸಭಾ" ಎಂಬ ಹೆಸರಿಟ್ಟು ಅರಮನೆಯಿಂದಲೇ ಸೀನರಿ, ಡ್ರೆಸ್ ವಗೈರೆ ಸಲಕರಣೆಗಳನ್ನು ಒದಗಿಸಿಕೊಟ್ಟು ಕೆಲವು ದಿನಗಳಾದಮೇಲೆ ಕಾಳಿದಾಸನ ಶಾಕುಂತಲ ನಾಟಕವನ್ನು ಅರಮನೆಯ ವಿದ್ವಾಂಸರಾದ ಶ್ರೀ ಬಸವಪ್ಪಶಾಸ್ತ್ರಿಗಳವರಿಂದ ಕನ್ನಡಕ್ಕೆ ಅನುವಾದ ಮಾಡಿಸಿ ನಾಟಕವನ್ನು ಅಭ್ಯಾಸ ಮಾಡಿಸಿ ಆಡಿಸಿ, ಶ್ರೀ ಶಾಸ್ತ್ರಿಗಳವರಿಗೆ "ಅಭಿನವ ಕಾಳಿದಾಸ" ಎಂಬ ಬಿರುದನ್ನು ದಯಪಾಲಿಸಿದರು. ಆಗಿನಿಂದಲೂ ಕನ್ನಡ ನಾಡಿನಲ್ಲಿ ನಾಟಕಗಳು ಅಭಿವೃದ್ಧಿಗೆ ಬಂದು ಮೈಸೂರಿನಲ್ಲಿ "ಶಾಕುಂತಲ ನಾಟಕ ಸಭಾ" ಎಂದೂ "ಗೌಡರ ಕಂಪೆನಿ" ಎಂತಲೂ, ಬೆಂಗಳೂರು ತುಮಕೂರುಗಳಲ್ಲಿ ಶ್ರೀ ವರದಾಚಾರ್ಯರೇ ಮುಂತಾದವರ ಸಂಘಗಳೂ, ಅಮೆಚೂರ್ ಸಂಘಗಳೂ ಸ್ಥಾಪಿತವಾದುವು. ಉತ್ತರದೇಶದಲ್ಲಿ ಶಿರಹಟ್ಟಿ ಕಂಪೆನಿ ಅಲಗೇರಿ, ಗರೂಡ ಮುಂತಾದ ಸಂಘಗಳು ಪ್ರಾರಂಭವಾದುವು. ಕಾಳಿದಾಸನ "ಶಾಕುಂತಲ" ಕನ್ನಡದಲ್ಲಿ ತಯಾರಾದ ಮೇಲೆ ಎಲ್ಲೆಲ್ಲಿಯೂ ನಾಟಕ ಸಂಘಗಳು ಪ್ರಬಲವಾಗಿ ನಾಟಕದ ಪ್ರಪಂಚವೇ ಆಯಿತೆಂದರೆ ತಪ್ಪಲ್ಲ.

## ಮಾನವನ ಜೀವನದ ಗುರಿ: ಆನಂದ

ಮನುಷ್ಯ ಜೀವನದ ಅವಧಿ ಬಹಳ ಅತ್ಯಲ್ಪ. ಆದರೂ ಅವನು ತನ್ನ ನಿತ್ಯ ವ್ಯವಹಾರಗಳಲ್ಲಿ ತೊಡಗಿ ಸುಖ ದುಃಖಗಳ ಸುಳಿಯಲ್ಲಿ ಸಿಕ್ಕಿ ಪರಿತಪಿಸುತ್ತಾನೆ. ಬಾಳು ಅತ್ಯಲ್ಪವಾದರೂ ಜೀವಿಸಿರುವಷ್ಟು ಕಾಲ ಸಂತೋಷವಾಗಿ ಬಾಳಬೇಕೆಂಬುದು ಈ ಹೋರಾಟಕ್ಕೆ ಕಾರಣ. ನಾವು ಅನುಭವಿಸುವ ಸುಖ ಎರಡು ವಿಧ. ಒಂದು ಬಾಹ್ಯ ಸುಖ, ಮತ್ತೊಂದು ಅಂತರಂಗ ಸುಖ. ಬಾಹ್ಯ ಸುಖ ದೇಹ ವ್ಯಾಪಾರಕ್ಕೆ ಸಂಬಂಧಿಸಿದುದು. ಅಂತರಂಗ ಸುಖ ಆತ್ಮವಿಕಾಸಕ್ಕೆ ಸೇರಿದ್ದು. ದೇಹಕ್ಕೆ ಅನ್ನ ಬಟ್ಟೆಗಳು ಅಗತ್ಯ. ಅಂತರಂಗ ಸುಖ ಆತ್ಮವಿಕಾಸಕ್ಕೆ ಕಾರಣವಾದುದೇ ಕಲೆ. ಪ್ರಸಿದ್ಧ ಸಾಹಿತಿ ಎಮರ್ಸನ್ನನು "ಅನ್ನ ಬಟ್ಟೆಗಳು ದೇಹಕ್ಕೆ, ಕಲೆಯು ಆತ್ಮವಿಕಾಸಕ್ಕೆ" ಎಂದು ಹೇಳಿದುದು ಇದನ್ನೇ. ಅನ್ನದಿಂದ ದೇಹ ಬೆಳೆದಂತೆ ಕಲೋಪಾಸನೆಯಿಂದ ಮನಸ್ಸು ಅರಳಿ ಆತ್ಮೋಲ್ಲಾಸವಾಗುತ್ತದೆ. ಆಗಲೇ ಮಾನವನು ಪೂರ್ಣನೆನಿಸಿ ಆತ್ಮಾನಂದಭರಿತನಾಗುವನು. ಇಂಥ ಪರಿಪೂರ್ಣ ಆನಂದ ಪ್ರಾಪ್ತಿಯೇ ಮಾನವ ಜೀವನದ ಗುರಿ.

## ಪರಮಾತ್ಮನು ಕಲಾಸ್ವರೂಪ

ಪರಮಾತ್ಮನಲ್ಲಡಗಿರುವ ಚಿತ್‌ಶಕ್ತಿಯೇ ವಿದ್ಯಾ, ನಿವೃತ್ತಿ, ಪ್ರತಿಷ್ಠೆ, ಶಾಂತಿ, ಶಾಂತ್ಯತೀತ ಮತ್ತು ಶಾಂತ್ಯತೀತೋತ್ತರ ಕಲೆಗಳೆಂದು ಆರು ವಿಧವಾಗಿ ಜಗತ್ತಿನ ಸೃಷ್ಟಿಗೆ

ಕಾರಣವಾಗಿರುವ ವಿಷಯ ಎಲ್ಲರಿಗೂ ವೇದ್ಯವಿದೆ. ವಿಶ್ವವೇ ಕಲಾಮಯವಾದುದು. ಆತ್ಮವಿಕಾಸಕ್ಕೆ ಕಲೆ ಸಾಧನ. ಕಲೆ ವಿಶ್ವತೋಮುಖ. ಸಂಗೀತ, ನೃತ್ಯ, ನಾಟಕ, ಚಿತ್ರ, ಶಿಲ್ಪ ಮುಂತಾಗಿ ಕಲೆ ಅನಂತಸ್ವರೂಪಿಣಿ. ಇದರಲ್ಲಿ ನಾಟಕಕಲೆ ಉಳಿದುದೆಲ್ಲ ಕಲೆಗಳಿಗೂ ಆಶ್ರಯಸ್ಥಾನ.

"ನಾಟ್ಯಂ ಭಿನ್ನರುಚೇರ್ಜನಸ್ಯ ಬಹುಧಾಪ್ಯೇಕಂ ಸಮಾರಾಧನಂ" "ಭಿನ್ನಭಿನ್ನ ರುಚಿಯುಳ್ಳ ಪ್ರೇಕ್ಷಕರಿಗೆ ಏಕಕಾಲದಲ್ಲಿ ಸಂತೃಪ್ತಿಯನ್ನುಂಟುಮಾಡುವ ಒಂದೇ ಒಂದು ಸಾಧನ ನಾಟಕ" ಎಂಬ ಮಹಾಕವಿ ಕಾಳಿದಾಸನ ಮಾತು ನಾಟಕದ ಹಿರಿಮೆಯನ್ನು ಸಾರಿದೆ. ಭರತಮುನಿಯು ನಾಟಕವನ್ನು ಐದನೇ ವೇದವೆಂದು ಕರೆದಿದ್ದಾನೆ. ಋಗ್ವೇದ ದಿಂದ ಸಂಭಾಷಣೆ, ಸಾಮವೇದದಿಂದ ಸಂಗೀತ, ಯಜುರ್ವೇದದಿಂದ ಅಭಿನಯ, ಅಥರ್ವಣವೇದದಿಂದ ರಸವನ್ನು ಸ್ವೀಕರಿಸಿ ನಾಟ್ಯವೇದ ರಚಿಸಿದುದಾಗಿ ಹೇಳಿದ್ದಾನೆ. ಷೇಕ್ಸ್‌ಪಿಯರ್ ಮಹಾಕವಿ ಈ ಭೂಮಂಡಲವೇ ಒಂದು ರಂಗಭೂಮಿಯೆಂದೂ, ನಾವೆಲ್ಲರೂ ಪಾತ್ರಧಾರಿಗಳೆಂದೂ ಹೇಳಿದ್ದಾನೆ. ಅಂದರೆ ಜೀವನ ಒಂದು ನಾಟಕವಿದ್ದಂತೆ.

ಭಾರತದ ನಾಟಕಕಲೆ ವೇದಕಾಲದಷ್ಟು ಪ್ರಾಚೀನವಾದರೂ ನಮಗೆ ದೊರೆತಿ ರುವ ನಾಟಕಸಾಹಿತ್ಯ ಎರಡು ಸಾವಿರ ವರ್ಷಗಳಷ್ಟು ಹಿಂದಿನದು. ಕ್ರಿ. ಶ. 1ನೇ ಶತ ಮಾನದ ಅಶ್ವಘೋಷ, 2ನೇ ಶತಮಾನದ ಭಾಸ, 4–5ನೇ ಶತಮಾನಗಳ ಕಾಳಿದಾಸಾದಿ ಮಹಾಕವಿಗಳು ರಚಿಸಿರುವ ನಾಟಕಸಾಹಿತ್ಯ ನಮ್ಮ ಭಾರತ ಸಂಸ್ಕೃತಿಯ ಭಂಡಾರವೆನಿ ಸಿದೆ. ಗ್ರೀಸ್, ರೋಂ ಚಕ್ರಾಧಿಪತ್ಯಗಳಲ್ಲಿಯೂ ಸಹ ಅತ್ಯಂತ ಪ್ರಾಚೀನಕಾಲದಲ್ಲಿಯೇ ನಾಟಕಕಲೆ ಅಭಿವೃದ್ಧಿಯಲ್ಲಿತ್ತೆಂದು ತಿಳಿದು ಬಂದಿದೆ.

## ನಾಟಕದ ಉದ್ದೇಶ

ನಾಟಕಕಲೆಯ ಉದ್ದೇಶದ ವಿಷಯದಲ್ಲಿ ಪಾಶ್ಚಾತ್ಯದೇಶಗಳಿಗೂ ಭಾರತೀಯ ರಿಗೂ ಭಿನ್ನಾಭಿಪ್ರಾಯವಿದೆ. ಗ್ರೀಸ್ ಮತ್ತು ರೋಮಿನಲ್ಲಿ ಈ ಕಲೆಯನ್ನು ರಾಷ್ಟ್ರ ಸರ್ಕಾರವೇ ಬೆಳಸಿ ನಡೆಸಿತು. ಏಕೆಂದರೆ ಹಗಲಿರುಳೂ ಹೋರಾಡಿ ರಾಜ್ಯವನ್ನು ಗೆಲ್ಲುವ ಸೈನ್ಯಕ್ಕೆ ಮನರಂಜನೆ ಬೇಕಾಗಿತ್ತು. ಅಪಾರವಾದ ಐಶ್ವರ್ಯದಿಂದ ಕೂಡಿ ಮೆರೆಯುವ ಶ್ರೀಮಂತರಿಗೆ ಮನೋಲ್ಲಾಸ ಬೇಕಾಗಿತ್ತು. ಇದರಿಂದ ಅಲ್ಲಿ ತಮ್ಮ ಯುದ್ಧಭೂಮಿಯ ಕೌಶಲ್ಯವನ್ನು ಅನುಕರಿಸುವ ದೃಶ್ಯಗಳನ್ನು ಅವರು ಪ್ರದರ್ಶಿಸುತ್ತಿದ್ದರು. ಆದರೆ ಭಾರತದ ನಾಟಕಕಲೆಯ ಉದ್ದೇಶವೇ ಬೇರೆ. ಇಲ್ಲಿ ಧರ್ಮಪ್ರಸಾರಕ್ಕಾಗಿ ಈ ಕಲೆ ಆರಂಭವಾಯಿತು. ಋಗ್ವೇದ ಕಾಲದಲ್ಲಿ ದೊಡ್ಡ ಯಾಗಗಳಲ್ಲಿ ನಾಟಕಗಳು ಏರ್ಪಡುತ್ತಿ ದ್ದವಂತೆ. ಅಶ್ವಘೋಷನ ನಾಟಕಗಳು ಪ್ರಧಾನವಾಗಿ ಬುದ್ಧನ ತತ್ವಪ್ರಸಾರಕ್ಕಾಗಿ ಏರ್ಪಟ್ಟವುಗಳು. ಭಾಸನ ನಾಟಕಗಳು ಪುರಾಣ ಪ್ರಸಿದ್ಧ ವ್ಯಕ್ತಿಗಳ ತತ್ತ್ವ ಮತ್ತು ಜೀವನ ಆದರ್ಶಗಳನ್ನು ಪ್ರಸಾರಮಾಡುವುದಕ್ಕಾಗಿ ರಚಿತವಾದವುಗಳು. ಧರ್ಮವನ್ನು ನೇರವಾಗಿ ಉಪದೇಶಮಾಡಹೊರಟರೆ ಅದು ಜನಸಾಮಾನ್ಯರಿಗೆ ರುಚಿಸುವುದಿಲ್ಲ. ಆದು ದರಿಂದ ಸಕ್ಕರೆಯೊಡನೆ ಕಹಿಯಾದ ಔಷಧಿಯನ್ನು ರೋಗಿಗೆ ಕೊಡುವಂತೆ ಮನರಂಜ ನೆಯ ಸಾಧನೆಗಳಾದ ನಾಟ್ಯ, ಸಂಗೀತಗಳ ನೆಪದಲ್ಲಿ ತತ್ತ್ವಗಳನ್ನು ಪ್ರಚಾರಮಾಡುವ ಪದ್ಧತಿ ಭಾರತದಲ್ಲಿ ಹಿಂದಿನಿಂದ ಬಂದಿದೆ. ಆದರೆ ಕರ್ಣಾಟಕದಲ್ಲಿ ಮಾತ್ರ ಕ್ರಿ. ಶ.

17ನೇ ಶತಮಾನದವರೆಗೆ ನಾಟಕ ರಚನೆಯಾಗಿಲ್ಲವೆಂಬುದು ವಿಚಾರಣೀಯ ! ಚಿಕ್ಕದೇವರಾಜ ಒಡೆಯರ ಆಸ್ಥಾನಕವಿ ಸಿಂಗಾರ್ಯನ 'ಮಿತ್ರವಿಂದಾ ಗೋವಿಂದ' ನಾಟಕವೇ ಮೊದಲನೆಯದೆನ್ನಬಹುದು. ಇದೂ ಸಂಸ್ಕೃತ ರತ್ನಾವಳಿಯ ಭಾಷಾಂತರ. ಇತ್ತೀಚೆಗೆ ಕನ್ನಡ ರಂಗಭೂಮಿಯನ್ನು ಅಲಂಕರಿಸಿದ ಶಾಕುಂತಲಾದಿ ನಾಟಕಗಳೂ ಸಂಸ್ಕೃತದಿಂದ ಉದ್ಧೃತವಾದವುಗಳೇ ಎಂಬುದು ಗಮನಾರ್ಹವಾದ ಅಂಶ. ಕನ್ನಡದಲ್ಲಿ ಮೊದಮೊದಲು ನಾಟಕ ರಚನೆಯಾಗದಿರುವುದಕ್ಕೆ ಕಾರಣಗಳನ್ನು ವಿದ್ವಾಂಸರು ಶೋಧಿಸುತ್ತಿದ್ದಾರೆ.

## ಕಾವ್ಯಸ್ಫೂರ್ತಿಗೆ ರಂಗಭೂಮಿಯ ಆವಶ್ಯಕತೆ

ಭಾರತದ ಭಾಸ, ಕಾಳಿದಾಸ, ವಿಶಾಖದತ್ತ, ಸಾಮ್ರಾಟ್ ಶ್ರೀಹರ್ಷ ಮೊದಲಾದವರಿಗೆ ರಂಗಭೂಮಿಯೇ ಸಾಹಿತ್ಯ ಸೃಷ್ಟಿಯ ಸ್ಫೂರ್ತಿಯನ್ನೊದಗಿಸಿದೆ. ರಂಗಭೂಮಿ ಇಲ್ಲದಿದ್ದರೆ ಇಂಗ್ಲಿಷ್ ಸಾಹಿತ್ಯಕ್ಷೇತ್ರದಲ್ಲಿ ಬಹುಶಃ ಷೇಕ್ಸ್‌ಪಿಯರ್‌ನ ಅವತಾರವಾಗುತ್ತಿರಲಿಲ್ಲವೋ ಏನೊ ! ಕರ್ಣಾಟಕದಲ್ಲೂ ಪ್ರಾಯೋಗಿಕ ರಂಗಭೂಮಿ ಆವಶ್ಯಕತೆಯೇ ಕನ್ನಡದಲ್ಲಿ "ಅಭಿನವ ಕಾಳಿದಾಸ"ನ ಸೃಷ್ಟಿಗೆ ಪ್ರೇರೇಪಣೆಯಾಯಿತು. ಇದೇ ರೀತಿಯಲ್ಲಿ ಬೇರೆಬೇರೆ ಕಾಲ, ಬೇರೆಬೇರೆ ದೇಶ, ವಿವಿಧ ಸಂಸ್ಕೃತಿಗಳಲ್ಲಿ ನಾಟಕ ಕಲೆ, ತನ್ನ ಬೆಳವಣಿಗೆಗೆ ಸ್ಫೂರ್ತಿಯನ್ನು ಪಡೆದಿರುವುದೇ ಅಲ್ಲದೆ ತಾನೂ ಆ ಕಲೆಗಳ ಬೆಳವಣಿಗೆ, ಪ್ರಗತಿ, ಪ್ರಯೋಗಗಳಿಗೆ ದೋಹದಕಾರಿಯಾಗಿದೆ. ನಾಟ್ಯ, ಸಂಗೀತ, ಮೊದಲಾದವುಗಳಿಗೆ ನಾಟಕಕಲೆ ಎಷ್ಟು ಉಪಕೃತವಾಗಿದೆಯೋ ಅಷ್ಟೇ ಮಟ್ಟಿಗೆ ಆ ಕಲೆಗಳೂ ನಾಟಕಕಲೆಗೆ ಉಪಕಾರಕವಾಗಿವೆ. ಇದು ನಾನು ನಾಟಕ ಕಂಪೆನಿಯ ಮೂಲಕ, ನಟ ಎನ್ನುವ ದೃಷ್ಟಿಯಿಂದ ಹೇಳುವ ಮಾತಲ್ಲ. ಜಗತ್ತಿನ ಲಲಿತಕಲೆಗಳ ಇತಿಹಾಸವೇ ಈ ಮಾತಿಗೆ ಸಾಕ್ಷಿಯಾಗಿದೆ. ಈ ಮಾತು ಜನತೆಯ ಹೃದಯಕ್ಕೆ ಮನವರಿಕೆಯಾಗಿದ್ದುದರಿಂದಲ್ಲೇ ಒಂದು ಕಾಲಕ್ಕೆ ನಾಟಕಕಲೆ ಎಲ್ಲರಿಗೂ ಬೇಕಾದುದಾಗಿತ್ತು ; ನಾಗರಿಕರ ಅಭಿರುಚಿಯ ಅನಿವಾರ್ಯ ಅಂಗವಾಗಿತ್ತು. ಈ ಕಲೆಯ ಪ್ರೋತ್ಸಾಹದಿಂದ ರಸಿಕತೆಯು ಹೆಗ್ಗುರುತಾಗಿತ್ತು.

## ಚಲಚ್ಚಿತ್ರಗಳಿಂದ ನಾಟಕಕಲೆಯ ಅವನತಿ

ಆದರೆ ಇಂದು ಕಾಲ ಬದಲಾದಂತೆ ಮಾನವನ ಜೀವನದ ಎಲ್ಲ ರಂಗಗಳನ್ನೂ ವ್ಯಾಪಿಸಿ ಯಂತ್ರದಾನವನು ನಾಟಕಕಲೆಯಮೇಲೂ ತನ್ನ ಪಾದವನ್ನಿಟ್ಟು ಈ ಕಲೆಯನ್ನು ಕೆಳಕ್ಕೆ ತುಳಿದಿದ್ದಾನೆ. ಆಧುನಿಕ ವಿಜ್ಞಾನದ ಮಿಂಚಿನನೋಟ ಮಾನವನ ಬಾಳಿಗೆ ಎಷ್ಟು ಉಪಕಾರ ಮಾಡಿದೆಯೋ ನಾಟಕ ಕಲೆಗೆ, ಪ್ರಾಯಶಃ ಅಷ್ಟು ಉಪಕಾರ ಮಾಡಿಲ್ಲ. ವಿದ್ಯುದ್ದೀಪ, ವಿದ್ಯುತ್ ಶಬ್ದ ವ್ಯವಸ್ಥೆಗಳಿಂದ ನಾಟಕಕ್ಕೆ ಅಷ್ಟಿಷ್ಟು ಉಪಕಾರವಾಗಿದೆ ; ನಿಜ. ಆದರೆ ಇದೇ ವಿಜ್ಞಾನ, ನಾಟಕವೃಕ್ಷಕ್ಕೆ ಕೊಡಲಿಯ ಪೆಟ್ಟಾದ ಚಲಚಿತ್ರವನ್ನೂ ಸೃಷ್ಟಿಸಿ ಅದರ ಉರುಬಿನಲ್ಲಿ ನಾಟಕ ವಿದ್ಯುದ್ದೀಪದ ಮುಂದೆ ಹಿಡಿದ ಹಣ್ಣೆಯ ಹಂಜನಂತಾಗಿದೆ. ಚಲಚಿತ್ರದಿಂದ ಆಗಿರುವ ಬಹು ದೊಡ್ಡ ಅಪಕಾರ, ನಾಟಕಕಲೆಯ ಮೂಲಭೂತ ಆವಶ್ಯಕತೆಗಳನ್ನೇ ಕೀಳು ಮಾಡಿರುವುದು.

ರಂಗಭೂಮಿಯು ಸಜೀವ ನಟನಿಗೆ ಇಷ್ಟ ಬಹುದೊಡ್ಡ ಎಚ್ಚರಿಕೆ, ಹಾಗೆಯೇ ಬಹು

ದೊಡ್ಡ ಪ್ರೋತ್ಸಾಹ, ಪ್ರೇಕ್ಷಕ ವೃಂದ. ನಟನ ಜೀವನದಲ್ಲಿ ಒಂದೊಂದು ದಿನವೂ, ಒಂದೊಂದು ಪ್ರದರ್ಶನವೂ, ಒಂದೊಂದು ಪ್ರಯೋಗ, ಒಂದು ಸಾಹಸವಾಗಿತ್ತು. ಎಂದೂ ಆತ ನಾನು ನನ್ನ ಕಲೆಯ ಪರಮಾವಧಿಯನ್ನು ಮುಟ್ಟಿದೆ ಎನ್ನುವ ಅವಕಾಶ ವಿರಲಿಲ್ಲ.

ಒಂದು ಊರಿನಲ್ಲಿ ಕರತಾಡನ ಪಡೆದ ನಟನೇ, ಮತ್ತೊಂದು ಊರಿನಲ್ಲಿ ಕಲ್ಲಿನೇಟು ತಿನ್ನುವ ಪ್ರಸಂಗವೂ ಇರುತ್ತಿತ್ತು. ಹೀಗಾಗಿ ನಟ, ಸದಾ ಜಾಗೃತನಾಗಿರಬೇಕಾಗು ತ್ತಿತ್ತು. ದಿನದಿನವೂ ತನ್ನ ಅಭಿನಯದ ವಿಷಯದಲ್ಲಿ ಅಭ್ಯಾಸ ಮಾಡಬೇಕಾಗಿತ್ತು. ಇಂದರಿಂದಾಗಿ, ಎಷ್ಟೋ ಜನ ಶ್ರೇಷ್ಠ ಕಲಾವಿದರು ಜನಿಸಲು ಅವಕಾಶವಾಯಿತು.

ಆದರೆ ಚಲನಚಿತ್ರ, ಕಲಾವಿದನ ಪ್ರಗತಿಗೆ ಅತ್ಯಗತ್ಯವಾದ ಈ ಎಚ್ಚರಿಕೆ ಯನ್ನೇ ಅನಗತ್ಯಗೊಳಿಸಿ, ಅಭಿನಯದ ಮಟ್ಟವನ್ನು ಕೆಳಗಿಳಿಸಿದೆ ಎಂಬುದೇ ನನ್ನ ಅಭಿಪ್ರಾಯ.

ಕಲೆಯ ದೃಷ್ಟಿಯಿಂದ ನೋಡಿದರೆ ಈಗ ಆಗಿರುವ ನಷ್ಟಕ್ಕಿಂತಲೂ ದೊಡ್ಡ ನಷ್ಟ ಬೇರೊಂದಿಲ್ಲ. ಕೇವಲ ಯಂತ್ರಗತವಾದ ಚಲನಚಿತ್ರ, ನಟನಿಗೂ ನೋಟಕರಿಗೂ ಇದ್ದ ಸಜೀವ ಸಂಬಂಧವನ್ನು ಕಡಿದುಹಾಕಿ, ಕಲಾಭಿರುಚಿಯನ್ನು ಯಾಂತ್ರಿಕಗೊಳಿಸಿದೆಯೆಂದೇ ನನಗೆ ತೋರುತ್ತದೆ. ಈ ವಿಷಯದಲ್ಲಿ ನಮ್ಮ ದೇಶದ ಕಲಾಭಿಮಾನಿಗಳು ಸಾಕಷ್ಟು ಜಾಗೃತರಾಗಿಲ್ಲ ಎಂಬುದೇ ನನ್ನ ಅಭಿಪ್ರಾಯ.

## ಪಾಶ್ಚಾತ್ಯ ದೇಶಗಳಲ್ಲಿ ನಾಟಕ ಕಲೆಗೆ ಕೊಡುತ್ತಿರುವ ಪ್ರೋತ್ಸಾಹ.

ಚಲಚ್ಚಿತ್ರದ ವಿಪರೀತ ಬೆಳೆವಣಿಗೆ ನಮ್ಮ ದೇಶದಲ್ಲಿ ಮೂಡಿಸಿರುವ ಈ ವಿಷ ಪರಿಣಾಮವನ್ನೇ ಬೇರೆ ದೇಶಗಳಲ್ಲೂ ಮೂಡಿಸಿತ್ತು. ಇಂಗ್ಲೆಂಡ್, ಅಮೆರಿಕ, ಫ್ರಾನ್ಸ್, ಮೊದಲಾದ ದೇಶಗಳು ಇದೇ ಪರಿಸ್ಥಿತಿಯನ್ನೇ ಎದುರಿಸಬೇಕಾಗಿ ಬಂದಿತ್ತೆಂದು ಹೇಳು ತ್ತಾರೆ. ಆದರೆ, ನಾಟಕ ಕಲೆ ತಮ್ಮ ರಾಷ್ಟ್ರೀಯ ಸಂಸ್ಕೃತಿಯ ಸಂಪತ್ತಿನ ಅತ್ಯಮೂಲ್ಯ ನಿಧಿ ಎಂಬುದನ್ನು ಅರಿತ ದೇಶದ ಸರಕಾರಗಳು ನಾಟಕ ಕಲೆ ಖಿಲವಾಗದಂತೆ ರಕ್ಷಣೆಯನ್ನು ಕೊಟ್ಟವು. ಈ ನಾಟಕ ಕಲೆಯ ರಕ್ಷಣೆಗಾಗಿಯೇ ಪ್ರತಿಯೊಂದು ನಗರದ ಪುರಸಭೆಗಳೂ ಪ್ರತ್ಯೇಕ ನಾಟಕ ಮಂದಿರಗಳನ್ನು ನಿರ್ಮಾಣ ಮಾಡಿದವು.

ದೇಶದಲ್ಲಿ ಪ್ರತಿಭಾಶಾಲಿಗಳನ್ನು ನಾಟಕರಂಗಕ್ಕೆ ಸಿದ್ಧಗೊಳಿಸುವ ಶಿಕ್ಷಣ ಶಿಬಿರ ಗಳು ಏರ್ಪಟ್ಟವು. ಸರಕಾರ ನಾಟಕ ಕಲೆಯ ವಿಷಯದಲ್ಲಿ ವಹಿಸಿದ ಈ ಎಚ್ಚರಿಕೆಯಿಂದ, ಅಲ್ಲಿನ ಜನತೆ ನಾಟಕ ಕಲೆಯ ಬಗ್ಗೆಯೂ, ಹಿಂದಿನ ಉತ್ಸಾಹವನ್ನೇ ಉಳಿಸಿಕೊಳ್ಳಲು ಸಾಧ್ಯವಾಯಿತು. ನಾಟಕರಂಗದ ನಟರಿಗೆ ದೊರೆಯುವಷ್ಟು ಜನಮನ್ನಣೆ ಬಹುಶಃ ಚಲಚ್ಚಿತ್ರ ನಟರಿಗೆ ಅಲ್ಲಿ ದೊರೆಯುವುದಿಲ್ಲ. ಇದರಿಂದಾಗಿಯೇ ಆ ದೇಶಗಳ ಅತ್ಯಂತ ಪ್ರಖ್ಯಾತ ಚಲಚಿತ್ರನಟರೂ ರಂಗಭೂಮಿಯಮೇಲೆ ಬರಲು ಹಾತೈಸುತ್ತಾರೆ. ಆದರೆ ನಮ್ಮ ದೇಶದಲ್ಲಿ ಮಾತ್ರ ಪರಿಸ್ಥಿತಿ ತದ್ವಿರುದ್ಧವಾಗಿದೆ. ಇಲ್ಲಿನ ರಂಗಭೂಮಿಯ ರಾಜಾ ಪಾರ್ಟಿನಾತ ಚಲಚಿತ್ರದಲ್ಲಿ ಚಿಲ್ಲರೆ ಪಾರ್ಟು ದೊರೆತರೂ ತನ್ನ ಬಾಳು ಸಾರ್ಥಕವಾಯಿ ತೆನ್ನುತ್ತಾನೆ. ಈ ಕಾರಣದಿಂದ ರಂಗಭೂಮಿಯ ನಟನಟಿಯರು ಚಲನಚಿತ್ರದ ವ್ಯಾಮೋ ಹಕ್ಕೆ ಬಲಿಬಿದ್ದು, ರಂಗಭೂಮಿಯ ಮೇಲೆ ಅಲಕ್ಷ್ಯಮಾಡಿ ಒಬ್ಬೊಬ್ಬರಾಗಿ ರಂಗಭೂಮಿ

ಯನ್ನು ಬಿಟ್ಟು ಚಲನಚಿತ್ರದ ವ್ಯವಸಾಯವನ್ನೇ ಭದ್ರವಾಗಿ ಹಿಡಿಯುತ್ತಾ ಬಂದು ರಂಗಭೂಮಿಗೆ ಸರಿಯಾದ ನಟರು ದೊರೆಯುವುದೇ ದುರ್ಲಭವಾಗಿ, ರಂಗಭೂಮಿ ದಿನೇದಿನೆ ಕ್ಷೀಣವಾಗುತ್ತಾ ಬಂದಿದೆ. ಇದರಿಂದಾಗಿ ನಮ್ಮ ದೇಶದ ರಂಗಭೂಮಿ ಎಷ್ಟು ಮುಂದುವರಿಯಬೇಕೋ ಅಷ್ಟು ಮುಂದುವರೆದಿಲ್ಲ. ಅಮೆರಿಕ, ಇಂಗ್ಲೆಂಡ್, ರಷ್ಯಾ ದೇಶಗಳಲ್ಲಿ ರಂಗಭೂಮಿಯಲ್ಲಿ ದಿನಕ್ಕೊಂದು ಹೊಸ ಬಗೆಯ ಪ್ರಯೋಗ ನಡೆಯುತ್ತಿದೆ. ರಂಗಸಜ್ಜಿಕೆಗಳಷ್ಟೇ ಅಲ್ಲ, ರಂಗಭೂಮಿಗೆ ಬರೆಯುವ ನಾಟಕಗಳ ವಿಷಯದಲ್ಲೂ ಈ ಪ್ರಯೋಗ ನಡೆದಿದೆ.

ವಿದ್ಯುದುಪಕರಣಗಳಿಂದ ಚಲಿಸುವ ಪರದೆಗಳು, ವೃತ್ತಾಕಾರವಾಗಿ ಸುತ್ತುವ ರಂಗಭೂಮಿ, ಮೊದಲಾದ ಯಾಂತ್ರಿಕ ಪ್ರಯೋಗಗಳು ನಡೆದಿರುವಂತೆಯೇ ನಾಟಕದ ರಚನೆಯಲ್ಲಿ ಪ್ರೇಕ್ಷಕರನ್ನು ನಟರನ್ನಾಗಿ ಮಾಡಿಕೊಳ್ಳುವ ಪ್ರಯೋಗವೂ ನಡೆದಿದೆ. ಕ್ಲಿಫ್ಫರ್ಡ್ ಆಡಿಟ್ಸ್, ಟೆನಿಸಿ ವಿಲಿಯಂಸ್, ಟೆರೆನ್ಸ್ ರ್‍ಯಾಟಿಗರ್, ಜೇಬಿ ಪ್ರಿಸ್ಟ್ಲಿ ಮೊದಲಾದವರು, ಷೇಕ್ಸ್‌ಪಿಯರ್, ಮಾಲಿಯರ್, ರೆಸ್ಸಿನ್, ಸ್ಟ್ರಿಂಡ್‌ಬರ್ಗ್ ಮೊದಲಾದ ನಾಟಕಕಾರರ ಪರಂಪರೆಯನ್ನು ಬೆಳೆಸಿಕೊಂಡು ಬಂದು, ನಾಟಕ ಸಾಹಿತ್ಯವನ್ನಷ್ಟೇ ಅಲ್ಲ ಸಾಹಿತ್ಯವನ್ನೇ ಪುಷ್ಟಿಗೊಳಿಸಿದ್ದಾರೆ.

## ನಾಟಕ ರಚನೆಯ ಬಗ್ಗೆ ನಮ್ಮ ಸಾಹಿತಿಗಳ ದೃಷ್ಟಿ.

ನಮ್ಮ ದೇಶದಲ್ಲಿ ಈ ವಿಷಯದಲ್ಲೂ ಪರಿಸ್ಥಿತಿ ತದ್ವಿರುದ್ಧವಾಗಿದೆ. ಆ ದೇಶಗಳಲ್ಲಿ ಉತ್ತಮ ನಾಟಕವನ್ನು ಬರೆದಾತ ಪ್ರಖ್ಯಾತ ಸಾಹಿತಿಯಾಗುವುದಾದರೆ, ನಮ್ಮ ದೇಶದಲ್ಲಿ ಖ್ಯಾತ ಸಾಹಿತಿಗಳಿಗೆ ಪ್ರಾಯೋಗಿಕ ರಂಗಭೂಮಿಯೆಂದರೆ ಏನೋ ಒಂದು ತರಹ ಅಸಡ್ಡೆ. ಉತ್ತಮ ಸಾಹಿತ್ಯವನ್ನು ಬರೆದ ತಮ್ಮ ಕೈಯನ್ನು ನಾಟಕ ಬರೆದು ಕೆಡಿಸಿಕೊಳ್ಳಲೇಕೆ ಎಂಬ ಬೇಸರ. "ನಾವು ಬರೆದ ನಾಟಕ ಆಡಿ" ಎನ್ನುವ ಜನರು ಹೆಚ್ಚೇ ಹೊರತು ಪ್ರಾಯೋಗಿಕ ರಂಗಭೂಮಿಯ ಇತಿಮಿತಿಗಳನ್ನು, ಸಾಧನ ಸಲಕರಣೆಗಳನ್ನು ಅರಿತುಕೊಂಡು, ರಂಗಭೂಮಿಗಾಗಿಯೇ ನಾಟಕಗಳನ್ನು ಬರೆಯುವ ಸಾಹಿತಿಗಳು ಅತಿ ವಿರಳ. ಇದರಿಂದಾಗಿ ನಮ್ಮ ದೇಶದ ನಾಟಕ ಕಂಪನಿಗಳು ಹಳೆಯ ನಾಟಕಗಳನ್ನೇ ಅವಲಂಬಿಸಬೇಕಾಗಿ ಬಂದಿದೆ. ಇದು ಇಬ್ಬಗೆಯ ದುರದೃಷ್ಟ. ಒಂದುಕಡೆ ನಾಟಕ ಸಾಹಿತ್ಯವೂ ಬೆಳೆಯುತ್ತಿಲ್ಲ; ಕಂಪನಿಯವರಿಗೆ ಕೆಟ್ಟ ಹೆಸರೂ ತಪ್ಪಿಲ್ಲ. ಇಲ್ಲಿ ನೆರೆದಿರುವ ಸಾಹಿತಿಗಳು ಇತ್ತಕಡೆ ಅಗತ್ಯವಾಗಿ ಗಮನ ಕೊಡಬೇಕು. ಬರೀ ಸಾಹಿತಿಗಳು ನಾಟಕವನ್ನು ಬರೆಯುವುದರಿಂದಲೇ ನಾಟಕದ ಪುನರುಜ್ಜೀವನವಾಗುತ್ತದೆಯೆಂದೂ ನಾನು ನಂಬಲಾರೆ. ಅದಕ್ಕೆ ಸರಕಾರದ ನೆರವು, ಪ್ರೇಕ್ಷಕವೃಂದದ ಪೋಷಣೆ ಎರಡೂ ಅಗತ್ಯ. ನಮ್ಮ ಸರಕಾರದವರು ಇತ್ತೀಚಿಗೆ ನಾಟಕ ಕಲೆಯ ವಿಷಯದಲ್ಲಿ ಆಸಕ್ತಿ ತೋರಿಸುತ್ತಿರುವುದು ಅಭಿನಂದನಾರ್ಹವಾದರೂ, ಎಷ್ಟು ಲಕ್ಷ್ಯ ಕೊಡಬೇಕೋ ಅಷ್ಟು ಲಕ್ಷ್ಯ ಕೊಡುತ್ತಿಲ್ಲವೆಂದು ವಿಷಾದಪೂರ್ವಕವಾಗಿ ಹೇಳಬೇಕಾಗಿದೆ.

## ನಾಟಕ ಕಲಾಭಿವೃದ್ಧಿಗೆ ಸರ್ಕಾರದ ಕರ್ತವ್ಯ

ಶಿಕ್ಷಣ ಮಾಧ್ಯಮಗಳಲೆಲ್ಲಾ ನೋಟದ ಮೂಲಕ ಶಿಕ್ಷಣ (Visual

Education) ಎಂದು ಎಲ್ಲ ಶಿಕ್ಷಣ ಶಾಸ್ತ್ರತಜ್ಞರೂ ಅಭಿಪ್ರಾಯ ಪಟ್ಟಿದ್ದಾರೆ. ಹಾಗೆ ಮನೋರಂಜನೆಯ ಮೂಲಕ ಬೋಧಿಸುವುದು ಅತ್ಯಂತ ಪರಿಣಾಮಕಾರಿಯಾದುದೆಂದು ಮನೋವಿಜ್ಞಾನಿಗಳ ಅಭಿಪ್ರಾಯ. ಈ ಎರಡು ಮಾತನ್ನೂ ನಾವು ನಿಜ ಎಂದು ಒಪ್ಪಿ ಕೊಳ್ಳುವುದಾದರೆ ಜನತೆಯ ಜ್ಞಾನ ಪ್ರಸಾರಕ್ಕೆ ನಾಟಕ ಕಲೆಗಿಂತ ಅತ್ಯಂತ ಉತ್ತಮ ಮಾಧ್ಯಮ ಬೇರೊಂದಿಲ್ಲ. ಹಳ್ಳಿಗಳೇ ಹೆಚ್ಚಾಗಿ, ಗ್ರಾಮವೇ ನಾಗರಿಕತೆಯ ತಳಹದಿ ಯಾಗಿರುವ ನಮ್ಮ ದೇಶದಲ್ಲಂತೂ, ಇದಕ್ಕಿಂತಲೂ ಉತ್ತಮವಾದ ಜ್ಞಾನಪ್ರಸಾರ ಸಾಧನ ಬೇರೊಂದಿಲ್ಲ. ಯಂತ್ರವನ್ನು ಹೆಚ್ಚಾಗಿ ಅವಲಂಬಿಸದೆ ಮಾನವನ ಸಹಜ ಶಕ್ತಿಯೇ ಪ್ರಗತಿಯ ವಿಕಾಸಕ್ಕೆ ಬುನಾದಿಯಾಗಬೇಕು ಎನ್ನುವ ಪೂಜ್ಯ ಗಾಂಧೀಜಿಯವರ ತತ್ವವನ್ನು ಅಂಗೀಕರಿಸಿದ ನಮ್ಮ ಸರಕಾರ, ಈ ದಾರಿಯಲ್ಲಿ ಮಾತ್ರ ತಪ್ಪುಹೆಜ್ಜೆ ಇಟ್ಟಿದೆಯೇನೋ ಎಂದೇ ನನಗೆ ತೋರುತ್ತದೆ. ಏಕೆಂದರೆ, ಸರಕಾರ ಪ್ರಸಾರ ಚಲಚ್ಚಿತ್ರ ಕ್ಕಾಗಿ ವಿನಿಯೋಗಿಸುತ್ತಿರುವ ಹಣದಲ್ಲಿ ನೂರರಲ್ಲಿ ಒಂದು ಪಾಲನ್ನು ನಾಟಕ ಕಲೆಗೆ ವಿನಿಯೋಗಿಸುತ್ತಿಲ್ಲ. ಇದರಿಂದಾಗಿ ಲಾಭದೃಷ್ಟಿಯಿಂದ ನಡೆಸುತ್ತಿರುವ ಖಾಸಗೀ ಸಂಸ್ಥೆಗಳು ಮತ್ತು ಜನತೆಯಲ್ಲಿ ಕಲೆ ಮತ್ತು ಜ್ಞಾನದ ಪ್ರಸಾರವನ್ನೇ ಉದ್ದಿಶ್ಯವಾಗಿ ಇಟ್ಟು ಕೊಂಡ ಪ್ರಾಯೋಗಿಕ ಸಂಸ್ಥೆಗಳು ಹೆಚ್ಚು ಕಾಲ ಬಾಳಲು ಅವಕಾಶವಿಲ್ಲದಂತಾಗಿದೆ.

ಪ್ರಾಯೋಗಿಕ ಸಂಸ್ಥೆಗಳ ಮಾತು ಹಾಗಿರಲಿ, ಇದೂ ಒಂದು ವ್ಯವಹಾರ ಎಂದು ಕೊಂಡು ನಡೆಯುತ್ತಿರುವ ನಾಟಕ ಸಂಸ್ಥೆಗಳು ಎಷ್ಟಿವೆ ನಮ್ಮ ದೇಶದಲ್ಲಿ? ಊರಿಗೊಂದು ನಾಟಕ ಕಂಪನಿಯಿದ್ದ ಕರ್ಣಾಟಕದಲ್ಲಿ, ಈ ದಿನ ಬೆರಳಲ್ಲಿ ಎಣಿಸುವಷ್ಟು ನಾಟಕ ಸಂಸ್ಥೆ ಗಳೂ ಉಳಿದಿಲ್ಲ. ಅದಕ್ಕೆ ಪ್ರತಿ ಹಳ್ಳಿಗೂ ಒಂದೊಂದು ಚಲಚ್ಚಿತ್ರ ಮಂದಿರವಾಗಿದೆ. ಅಷ್ಟೇ ಅಲ್ಲ, ಈಗ ಮನೆಗೊಂದೊಂದು ಚಲಚ್ಚಿತ್ರ ಮಂದಿರವಾಗುವ ಕಾಲವೂ ಬಂದಿದೆ. ಈ ಪರಿಸ್ಥಿತಿಯಲ್ಲಿ ರಂಗಭೂಮಿ ಹೇಗೆ ಬದುಕಿ ಉಳಿಯಬೇಕು ಎಂಬುದನ್ನು ದೇಶದ ಸಂಸ್ಕೃತಿಯ ರಕ್ಷಕರೆಲ್ಲರೂ ವಿಚಾರಿಸಬೇಕಾಗಿದೆ.

ಅಸ್ತಿತ್ವಕ್ಕೇ ಸಂಚಕಾರ ಬಂದಿರುವ ಈ ರಂಗಭೂಮಿಯಲ್ಲಿ ಏನು ಹೊಸ ಪ್ರಯೋಗ ನಡೆಯುವುದು ಸಾಧ್ಯ? ಇಂತಹ ಪ್ರಯೋಗಗಳಿಗೆ ಅಗತ್ಯವಾದ ಹಣ ವನ್ನೊದಗಿಸಲು ಮುಂದೆ ಬರುವವರಾದರೂ ಯಾರು? ಸರಕಾರಕ್ಕೆ ಸಾಕಷ್ಟು ಆಸಕ್ತಿಯಿಲ್ಲ. ಹಣವಂತರಿಗೆ ಹಣ ಹಾಕಲು ಸಾಕಷ್ಟು ಧೈರ್ಯವಿಲ್ಲ! ಈ ಇಬ್ಬಗೆಯ ಕುತ್ತಿನಿಂದ ಪಾರಾಗಿ ರಂಗಭೂಮಿ ಉಳಿಯಬೇಕಾಗಿದೆ. ಈ ಪೇಚಿನ ಪರಿಸ್ಥಿತಿಯಿಂದ ರಂಗಭೂಮಿ ಯನ್ನು ಉಳಿಸಿ ಬೆಳೆಸುವುದರತ್ತ ವಿಚಾರವಂತರು ಲಕ್ಷ್ಯಕೊಡಬೇಕು. ನಮ್ಮ ಪ್ರಾಚೀನ ಸಂಸ್ಕೃತಿಯ ಅಭಿಮಾನ ಬರೀ ಮಾತುಗಳಲ್ಲೇ ಮುಕ್ತಾಯವಾಗದೆ ಕಾರ್ಯರೂಪದಲ್ಲಿ ಬರಬೇಕು ಎಂದರೆ ಸರಕಾರ ವರ್ಷಕ್ಕೊಂದು ಬಹುಮಾನ ಕೊಟ್ಟರೆ ಸಾಲದು. ಮನೋ ರಂಜನೆ ತೆರಿಗೆ ವಿನಾಯಿತಿ ಬರೀ ಗುಟುಕು ನೀರು ಮಾತ್ರ. ಅಷ್ಟರಿಂದಲೇ ಸರಕಾರ ತೃಪ್ತವಾಗದೆ ಉಳಿದೆಲ್ಲಕ್ಕೂ ಯೋಜನೆಗಳನ್ನು ತಯಾರಿಸಿದಂತೆ ರಂಗಭೂಮಿಯ ರಕ್ಷಣೆ. ಬೆಳವಣಿಗೆಯ ಬಗ್ಗೆಯೂ ಒಂದು ಪಂಚವಾರ್ಷಿಕ ಯೋಜನೆಯನ್ನು ತಯಾರುಮಾಡ ಬೇಕು ಮತ್ತು ಈ ನಾಟಕಕಲೆಯನ್ನು ಉಳಿಸಿಕೊಳ್ಳಬೇಕಾದರೆ ಮೊದಲು ಸರಕಾರದವರು ಪುರಸಭೆಯವರು ಸೇರಿ ಪ್ರತಿ ಊರುಗಳಲ್ಲಿಯೂ ಒಂದೊಂದು ನಾಟಕ ಮಂದಿರವನ್ನು ಕಟ್ಟಿಸಿ ರಂಗಭೂಮಿಗೆ ಆವಶ್ಯಕವಾದ ಸೀನರಿಗಳನ್ನು ತಕ್ಕಮಟ್ಟಿಗಾದರೂ ಒದಗಿಸಿಕೊಡ

ಬೇಕು. ಹಾಗೆ ಮಾಡಿದ್ದೇ ಆದರೆ ಮೂಲೆ ಮೂಲೆಗಳಲ್ಲಿ ಅಡಗಿಕೊಂಡಿರುವ ಅನೇಕ ನೂರು ನಾಟಕಗಳು ಪುನಃ ತಲೆಯೆತ್ತಿ ತಮ್ಮ ಕಲಾನೈಪುಣ್ಯವನ್ನು ಹೆಚ್ಚಿಸಿಕೊಳ್ಳಲು ಅವಕಾಶವಾಗುವುದು. ಸಂಗೀತ, ನೃತ್ಯ, ಯಕ್ಷಗಾನ, ಕೋಲಾಟವಗೈರೆ ಇತರೆ ಲಲಿತ ಕಲೆಗಳನ್ನು ಸಹ ತೋರಿಸಲು ಅವಕಾಶ ದೊರೆತು ಕಲೆಗಳಿಗೆ ಪ್ರೋತ್ಸಾಹ ಕೊಟ್ಟಂತಾಗಿ ಕಲೆಗಳು ಮುಂದುವರಿಯಲು ತುಂಬಾ ಅನುಕೂಲವಾಗುವುದು. ಪ್ರತಿಯೊಂದು ಊರುಗಳಯೂ ಕಳೆದುಳಿದಿರುವ ನಾಟಕ ಸಂಸ್ಥೆಗಳು ಸ್ವತಃ ಥಿಯೇಟರನ್ನು ಹಾಕಿಕೊಂಡು ನಾಟಕಗಳಾಡಬೇಕಾದರೆ ಸಾಧಾರಣವಾಗಿ 2–3 ಸಹಸ್ರ ರೂಪಾಯಿಗಳಾಗುತ್ತವೆ. ಒಂದು ಊರಿನಲ್ಲಿ 1–1½ ತಿಂಗಳು ಆಡಿಕೊಂಡು ಹೋಗುವುದಕ್ಕಾಗಿ ಮೂರು ಸಾವಿರ ರೂಪಾಯಿ ಖರ್ಚು ಮಾಡಿ ಥಿಯೇಟರಿನಲ್ಲಿ ನಾಟಕವಾಡಿದರೆ ಉತ್ಪತ್ತಿ ಚೆನ್ನಾಗಿ ಆದರಂತೂ ಸರಿ, ಇಲ್ಲದೆ ಹೋದರೆ ಥಿಯೇಟರು ಹಾಕಲು ಮಾಡಿದ ಸಾಲ ವಗೈರೆಗಾಗಿ ಡ್ರೆಸ್ ಸೀನರಿಗಳನ್ನು ಅಡವು ಹಾಕಿ ಸಂಸ್ಥೆಗಳು ನಿರ್ನಾಮವಾಗಿ ನಾಟಕ ಸಂಘಗಳು ಕಡಿಮೆಯಾಗುತ್ತ ಬಂದಿರುತ್ತವೆ. ಆದ್ದರಿಂದ ನಾಟಕ ಸಂಘ ಉಳಿಯಲು ಅವಶ್ಯಕವಾಗಿ ಥಿಯೇಟರು ಪ್ರತಿ ಊರುಗಳಲ್ಲಿ ಸದ್ಯಕ್ಕೆ ಸಾಧ್ಯವಿಲ್ಲದಿದ್ದರೂ ಜಿಲ್ಲಾಕ್ಕೆ ಒಂದೊಂದು ನಾಟಕ ಮಂದಿರವಾದರೂ ಖಂಡಿತವಾಗಿ ಬೇಕೇಬೇಕೆಂದು ಕಡ್ಡಾಯವಾಗಿ ಹೇಳುತ್ತೇನೆ. ಈಗ ನಾನು ಹೇಳುವುದು ಹೊಸ ವಿಚಾರವೇನೂ ಅಲ್ಲ. ಮೊದಲು ಪ್ರತಿಯೊಂದು ಊರುಗಳಲ್ಲಿ ನಾಟಕಮಂದಿರಗಳಿದ್ದವು. ಈಗ ಅವುಗಳೆಲ್ಲವೂ ಚಲನಚಿತ್ರದ ಮಂದಿರಗಳಾಗಿ, ನಾಟಕಗಳನ್ನಾಡಲು ಅವಕಾಶವಿಲ್ಲದೆ ನಾಟಕ ಸಂಸ್ಥೆಗಳೇ ಹೇಳಹೆಸರಿಲ್ಲದಂತಾಗಿ ನಾಟಕ ಕಲೆಯೇ ಉಳಿಯಲವಕಾಶವಿಲ್ಲವಾಗಿದೆ. ಅದಕ್ಕಾಗಿ ತಕ್ಕ ಯೋಜನೆ ಮಾಡಬೇಕು. ಥಿಯೇಟರಿಗೆ ವೆಚ್ಚಮಾಡುವ ಹಣ ಉಳಿತಾಯವಾದರೆ ಅವರು ಹೊಸ ಪ್ರಯೋಗಗಳಿಗೆ ಹಣ ಹಾಕಲು ಉತ್ಸಾಹ ಬರುತ್ತದೆ. ಹೊಸ ಹೊಸ ಪ್ರಯೋಗಗಳಿಂದ ಪುನರುಜ್ಜೀವಿತವಾದ ರಂಗಭೂಮಿ ಪ್ರೇಕ್ಷಕರನ್ನು ಹೆಚ್ಚು ಸಂಖ್ಯೆಯಲ್ಲಿ ಸೆಳೆಯುವುದರಲ್ಲಿ ಏನೂ ಸಂದೇಹವಿಲ್ಲ. ಮತ್ತೆ ಜನ ನಾಟಕಗಳನ್ನು ನೋಡುವಂತಾದರೆ ರಂಗಭೂಮಿ ಜನತೆಯ ಶಿಕ್ಷಣದ ಮೂಲ ಪೀಠವೂ ಆಗಬಲ್ಲದು. ರಂಗಭೂಮಿಯ ಪ್ರಭಾವ ಎಷ್ಟು ಎಂಬುದನ್ನು, ಚೀಣಾ, ರಷ್ಯಾಗಳಲ್ಲಾದ ಕ್ರಾಂತಿ ತೋರಿಸಿಕೊಟ್ಟಿದೆ. ಎಂತಲೇ ಕ್ರಾಂತಿ ನಂತರದ ಆ ದೇಶಗಳಲ್ಲಿ ರಂಗಭೂಮಿಗೆ ಇನ್ನಿಲ್ಲದಷ್ಟು ಪ್ರೋತ್ಸಾಹ ದೊರೆಯುತ್ತಿದೆ. ನಮ್ಮ ದೇಶದ ಸರಕಾರವೂ ಆ ದಾರಿಯಲ್ಲಿ ನಡೆಯಬೇಕು. ರಂಗಭೂಮಿಗೆ ಸಂಬಂಧಿಸಿದ ನಿಯೋಗವೊಂದನ್ನು ಆ ದೇಶಗಳಿಗೆ ಕಳುಹಿಸಿ, ಅಲ್ಲಿನ ಏರ್ಪಾಡುಗಳನ್ನು ಅರಿತುಕೊಂಡು ನಮ್ಮ ದೇಶದ ಅಗತ್ಯ ಅನುಕೂಲತೆಗಳಿಗೆ ಸಂಬಂಧಪಟ್ಟಹಾಗೆ ರಂಗಭೂಮಿಯ ಪುನರುಜ್ಜೀವನದ ಬಗ್ಗೆ ಒಂದು ಖಚಿತ ಯೋಜನೆಯನ್ನು ತಯಾರಿಸಿ ಅದನ್ನು ಕಡ್ಡಾಯವಾಗಿ ಕಾರ್ಯರೂಪಕ್ಕೆ ತರಬೇಕು. ಇಷ್ಟಾದಲ್ಲಿ ಮತ್ತೆ ಭಾರತದ ರಂಗಭೂಮಿ ತನ್ನ ಪ್ರಾಚೀನ ಕಾಂತಿಯಿಂದ ಕಂಗೊಳಿಸುವುದರಲ್ಲಿ ಸಂದೇಹವಿಲ್ಲ. ಅಖಂಡ ಕರ್ನಾಟಕದ ನವೋದಯ, ಕನ್ನಡ ರಂಗಭೂಮಿಯ ನವೋದಯವೂ ಆಗುವುದು.

ಇಂಗ್ಲೆಂಡಿನಲ್ಲಿ ಸ್ಕ್ಯಾಟ್ ಫೋರ್ಡ್ ಆನ್-ಎರ್ವ ಹೇಗೆ ರಂಗಭೂಮಿಯ ನಟರ ಯಾತ್ರಾಸ್ಥಳವಾಗಿದೆಯೋ ಅಂತೆಯೇ ನಮ್ಮಲ್ಲೂ ಖ್ಯಾತ ನಟರ ಅಥವಾ ನಾಟಕಕರ್ತರ ಜನ್ಮಸ್ಥಾನವಾದ ಈ ಕರ್ನಾಟಕವು ನಾಟಕಕಾರರ ಯಾತ್ರಾಸ್ಥಳವಾಗಬೇಕು.

ತಿರುವಯ್ಯೂರಿನಲ್ಲಿ ತ್ಯಾಗರಾಜ ಜಯಂತಿ ನಡೆದಂತೆಯೇ, ದೇಶದಲ್ಲಿ ಎಲ್ಲಿಯಾದರೂ ಒಂದು ಕಡೆ ನಾಟಕ ಜಯಂತಿಯೂ ನಡೆಯಬೇಕು. ನಮ್ಮ ಜನ ತಮ್ಮ ಹಿರಿಯ ನಟರ ಹೆಸರನ್ನು ಮರೆಯದಿರಲು ಸರಕಾರ ಒಂದು ಅವಕಾಶ, ಸನ್ನಿವೇಶಗಳನ್ನು ಒದಗಿಸಿಕೊಡಬೇಕು. ರಾಜಕಾರಣಿಗಳ ಹೆಸರನ್ನೇ ಬೀದಿಗಳಿಗಿಟ್ಟು ನಮ್ಮ ಜನ ತೃಪ್ತಿಪಡಬಾರದು. ದೇಶದ ಸಂಸ್ಕೃತಿಯ ನಿರ್ಮಾಣ ಕಾರ್ಯದಲ್ಲಿ ರಾಜಕಾರಣಿಗಳಿಗಿಂತಲೂ ಹೆಚ್ಚಿನ ಕರ್ತವ್ಯವನ್ನು ನಿರ್ವಹಿಸಿದ ಕಲಾವಿದರ ಹೆಸರು ಮನೆ ಮನೆಯ ಮಾತಾಗಬೇಕು. ಉತ್ತಮ ನಟನೆನ್ನಿಸಿಕೊಳ್ಳಬೇಕೆನ್ನುವುದು ಅಮರತ್ವಕ್ಕೆ ಅವಕಾಶ ಎಂಬುವ ಭಾವನೆ ಜನದಲ್ಲಿ ಮೂಡಿ, ಕಲಾವಿದರಿಗೆ ಇದೂ ಒಂದು ಹೊಟ್ಟೆಯ ಪಾಡಿನ ಚಾಕರಿ ಎಂಬ ತಾತ್ಸಾರ ತೊಲಗಿದಾಗ ನಿಜವಾದ ಕಲಾ ವಿಭೂತಿ ಪುರುಷರ ಅವತಾರಕ್ಕೆ ಅನುಕೂಲವಾದ ವಾತಾವರಣ ಏರ್ಪಡುವುದು.

ಸರಕಾರದವರು ವಿವಿಧ ರಂಗಗಳಲ್ಲಿ ಹೆಸರು ಪಡೆದ ಜನಕ್ಕೆ ಪ್ರಶಸ್ತಿ ಕೊಡುವಂತೆಯೇ ರಂಗಭೂಮಿಯ ಉತ್ತಮ ನಾಟಕ, ಉತ್ತಮ ನಟ, ಉತ್ತಮ ಸಂಗೀತಕ್ಕೂ ಪ್ರಶಸ್ತಿಯನ್ನು ಕೊಡುವ ಪದ್ಧತಿಯನ್ನು ಆಚರಣೆಗೆ ತಂದರೆ ಅದರಿಂದ ರಂಗಭೂಮಿಯ ಬೆಳವಣಿಗೆಗೆ ಅಗತ್ಯವಾದ ಕಲೆಗಳು ಬೆಳೆಯಲು ಅನುಕೂಲವಾದ ಮಾನಸಿಕ ವಾತಾವರಣ ಏರ್ಪಡುತ್ತದೆ ಎಂದು ನನ್ನ ಅಭಿಪ್ರಾಯ.

## ನಟರ ಆರ್ಥಿಕ ಭದ್ರತೆಯ ಆವಶ್ಯಕತೆ.

ಇದರೊಂದಿಗೆ ಮತ್ತೊಂದು ಬಹು ಅಗತ್ಯವಾದ, ನಾನು ಪ್ರಸ್ತಾಪಿಸಲೇಬೇಕಾದ ಅಂಶ ಒಂದಿದೆ. ಅದು ರಂಗಭೂಮಿಗೆ ಸಂಬಂಧಪಟ್ಟ ಜನರ ಆರ್ಥಿಕ ಭದ್ರತೆಯ ವಿಷಯ. ಇಂದು ರಂಗಭೂಮಿ ಖಿಲವಾಗಿರುವುದಕ್ಕೆ ಪ್ರತಿಭಾಶಾಲಿಗಳು ರಂಗಭೂಮಿಗೆ ಬರಲು ಹೆದರುತ್ತಿರುವುದಕ್ಕೆ ಬಹು ದೊಡ್ಡ ಕಾರಣ ಆರ್ಥಿಕ ಅಭದ್ರತೆಯ ಭಯ.

ಸರಕಾರದಲ್ಲಿ ಇಪ್ಪತ್ತೈದು ವರ್ಷಗಳ ಸೇವೆ ಸಲ್ಲಿಸಿದ ಮನುಷ್ಯ ತನ್ನ ನಂತರದ ಜೀವನಕ್ಕೆ ಅಷ್ಟು ಭಯಪಡಬೇಕಾಗಿರುವುದಿಲ್ಲ. ಆದರೆ ರಂಗಭೂಮಿಯನ್ನು ನೆಚ್ಚಿದವರಿಗೆ ಮಾತ್ರ ಆ ಭಾಗ್ಯವಿಲ್ಲ. ಬಣ್ಣ ಅಳಿಸಿಕೊಂಡ ಮರುದಿನವೇ ಬದುಕುವುದು ಹೇಗೆ? ಎಂಬ ಭೀತಿ ಮೂಡುತ್ತದೆ. ಈ ಆರ್ಥಿಕ ಅಭದ್ರತೆಯನ್ನು ನಿವಾರಿಸುವುದರಲ್ಲಿ ಕಂಪೆನಿಯ ಮಾಲೀಕರೂ ಅಷ್ಟಿಷ್ಟು ನೆರವು ನೀಡಬಹುದಾದರೂ ಅದರಿಂದಲೇ ಈ ವಿಷಮ ಪರಿಸ್ಥಿತಿ ನಿವಾರಣೆಯಾಗಲಾರದು. ಇದು ಸಂಪೂರ್ಣವಾಗಿ ನಿವಾರಣೆಯಾಗಲು ಸರಕಾರದ ನೆರವೂ ಬೇಕು. ರಂಗಭೂಮಿಯನ್ನು ಅವಲಂಬಿಸಿದ ಜನರಿಗೆ ವಿನಾಯತಿಯ ದರದಲ್ಲಿ ವಿಮೆ ಮಾಡಿಸುವ ಸೌಲಭ್ಯ, ಅವರ ಮಕ್ಕಳಿಗೆ ಉಚಿತ ಶಿಕ್ಷಣ ವ್ಯವಸ್ಥೆ ಇಷ್ಟಾದರೂ ದೊರೆತಲ್ಲಿ ಸರಕಾರ ರಂಗಭೂಮಿಯ ಉದ್ಧಾರಕ್ಕೆ ಬಹು ದೊಡ್ಡ ಸಹಾಯ ನೀಡಿದಂತಾಗುವುದು. ಇದರೊಂದಿಗೆ ವಿಶ್ವವಿದ್ಯಾನಿಲಯಗಳಲ್ಲಿ ಅಭಿನಯ ಕಲೆಯೂ ಒಂದು ಅಭ್ಯಾಸ ವಿಷಯವಾದಲ್ಲಿ ನಾಡಿನ, ಅಭಿನಯ ಕಲೆಯ ಮಟ್ಟ ಉತ್ತಮವಾಗುವುದರಲ್ಲಿ ಯಾವ ಸಂಶಯವೂ ಇಲ್ಲ. ಚಲನಚಿತ್ರಕ್ಕೆ ಸಂಬಂಧಿಸಿದ ಹಾಗೆ ಇಂಥ ಏರ್ಪಾಟನ್ನು ಮಾಡುವುದು ಕೇಂದ್ರ ಸರ್ಕಾರದ ಪರ್ಯಾಲೋಚನೆಯಲ್ಲಿದೆ ಎಂಬುದೂ ನನಗೆ ತಿಳಿದಿದೆ. ಇದರ ಪರಿಶೀಲನೆಗಾಗಿಯೇ ಒಂದು ಸಮಿತಿ ಸಹಾ ನಿರ್ಮಾಣವಾಗಿದೆ.

ಚಲನಚಿತ್ರದ ವಿಷಯದಲ್ಲಿ ತೋರಿಸುತ್ತಿರುವ ಈ ಆಸಕ್ತಿಯನ್ನೇ ಸರ್ಕಾರದವರು ನಾಟಕ ಕಲೆಯ ವಿಷಯದಲ್ಲೂ ತೋರಿಸಬೇಕು.

ನಮ್ಮ ಸರ್ಕಾರದವರ ಜಾಣತನದಿಂದ ಸಂಗೀತ, ನಾಟಕ, ನೃತ್ಯ ಅಕಾಡೆಮಿ ಆರಂಭವಾಗಿ ನಾಟಕ ಸಂಸ್ಥೆಗಳಲ್ಲಿ ಹೊಸ ಚೈತನ್ಯ ತಲೆದೋರಿದೆ. ನಿರಾಶೆಯಿಂದ ಮೂಲೆ ಮೂಲೆಯಲ್ಲಿ ಅಡಗಿದ್ದವರನ್ನು ಈಚೆಗೆ ಬರಮಾಡಿ ಅವರ ಕಲಾ ಪ್ರತಿಭೆಯನ್ನು ಹೊರಗೆಡ ವಲು ಹಲವಾರು ಮಾರ್ಗಗಳನ್ನು ಕಂಡುಹಿಡಿದಿದ್ದಾರೆ. ನಾಟಕ ಸಂಘದವರೆಂದರೆ ಸಮಾಜಬಾಹಿರರು ಎಂಬ ಅಪವಾದವೆಲ್ಲ ಅಳಿಸಿಹೋಗಿ ಕಲಾವಂತರಿಗೆ ಒಂದು ಗೌರವ ತೋರಿಸುತ್ತಿದ್ದಾರೆ? ಜನಸಾಮಾನ್ಯರಲ್ಲಿ ಸದ್ಭಾವನೆಗಳುಂಟಾಗಲು ಪ್ರಚಾರ ಸಾಧನಕ್ಕೆ ನಾಟಕಗಳನ್ನು ಉಪಯೋಗಿಸುತ್ತಿದಾರೆ. ಆಗಾಗ ದೇಶದ ಎಲ್ಲಾ ಭಾಗಗಳಲ್ಲಿಯೂ ನಾಟಕೋತ್ಸವ ನಡೆಸಲು ಉತ್ತೇಜನ ಕೊಡುತ್ತಿದ್ದಾರೆ. ನಾಟಕ ಶಿಕ್ಷಣಭಾಗ ಮಾಡ ಬೇಕೆಂದೂ ಯೋಚಿಸುತ್ತಿದ್ದಾರೆ. ನಾಟಕದ ಪ್ರಗತಿಗೆ ಸಂಶೋಧನೆಗಳನ್ನು ನಡೆಸಬೇಕು. ನಾಟಕ ಶಿಕ್ಷಣ ಸಂಸ್ಥೆಗಳನ್ನು ಏರ್ಪಡಿಸಬೇಕೆನ್ನುವ ಪ್ರಯತ್ನ ನಡೆಯುತ್ತಿದೆ. ಅಂದ ಮೇಲೆ ನಮ್ಮ ರಂಗಭೂಮಿಯು ಅಭಿವೃದ್ಧಿಗೆ ಬರಲು ಶುಭಸೂಚನೆಗಳು ಕಾಣಬರುತ್ತಿವೆ ಯೆಂದು ಊಹಿಸಬಹುದು.

## ವಿಶಾಲ ಕರ್ಣಾಟಕ ರಚನೆಯ ಮುನ್ ಸೂಚನೆ, ರಂಗಭೂಮಿಯ ಶುಭೋದಯ.

ಮತ್ತೊಂದು ಸಂತೋಷದ ಸುದ್ದಿಯೇನೆಂದರೆ, ನಮ್ಮ ದೇಶ ಚಿಕ್ಕದಾಗಿದ್ದು ಈಗ ದೊಡ್ಡದಾಗುತ್ತಿದೆ. ಮೈಸೂರಿನವರೇ ಬೇರೆ, ಉತ್ತರ ಕರ್ನಾಟಕದವರೇ ಬೇರೆ, ದಕ್ಷಿಣ ಕರ್ಣಾಟಕದವರೇ ಬೇರೆ, ಅವರ ನಾಟಕ ಅವರ ಹಾಡಿಕೆ ಇವರಿಗೆ ಹಿಡಿಯುವುದಿಲ್ಲ. ಇವರ ನಾಟಕ ಅವರಿಗೆ ಸರಿಹೋಗುವುದಿಲ್ಲ ಎಂಬ ಭೇದಭಾವ ತೊಲಗಬೇಕು. ಈಗ ಅಖಿಲ ಕರ್ನಾಟಕವೆಲ್ಲಾ ಒಂದೇ ಆಗುವ ಸಮಾಚಾರವಂತೂ ನಮ್ಮೆಲ್ಲರಿಗೂ ತುಂಬಾ ಸಂತೋಷವನ್ನುಂಟುಮಾಡಿರುತ್ತೆ. ಭುವನೇಶ್ವರಿಯ ಕೃಪೆಯಿಂದ ವಿಶಾಲ ಕರ್ನಾಟಕ ಸ್ಥಾಪಿತವಾಗುವ ಅರುಣೋದಯ ಕಾಲದಲ್ಲಿ ನಾವಿದ್ದೇವೆ. ಕರ್ನಾಟಕ ಮಾತೆಯ ಸುಪ್ರ ಭಾತ ಪ್ರಭೆ ನಮಗಾಗಲೇ ಕಾಣುತ್ತಿದೆ. ಜಾಗ್ರತೆಯಾಗಿ ಅಖಿಲ ಕರ್ನಾಟಕ ನಿರ್ಮಾಣ ವಾಗಿ ನಮ್ಮ ಕರ್ನಾಟಕ ರಂಗಭೂಮಿ ತನ್ನ ಪೂರ್ಣ ಪ್ರಭೆಯಿಂದ ಶೋಭಾಯಮಾನ ವಾಗುವುದೆಂದು ಸಂಪೂರ್ಣ ನಂಬಿರುತ್ತೇನೆ. ನಮ್ಮ ರಂಗಭೂಮಿಯ ಸೇವೆಗಾಗಿ ದುಡಿ ಯುತ್ತಿರುವ ವೃತ್ತಿಕಾರರು, ಭೇದವಿಲ್ಲದೆ ದೇವಿಯ ಪೂಜೆಗೆ ಅವರವರ ಭಕ್ತಿಗೆ ತಕ್ಕಂತೆ ಶಕ್ತಿಗೆ ಸಾಧ್ಯವಾಗುವಷ್ಟು ಪುಷ್ಪಗಳನ್ನು ತೆಗೆದುಕೊಂಡು ಹೋಗಿ ಪೂಜೆಮಾಡಿ ಕೃತಾರ್ಥ ರಾಗುತ್ತಿದ್ದಾರೆ.

ಘನ ಸರ್ಕಾರದವರು ಮತ್ತು ಕೇಂದ್ರ ಸರ್ಕಾರದವರೂ ಸಹ ಇತ್ತೀಚೆಗೆ ಯಾವ ದೇಶ, ಯಾವ ಭಾಷೆ ಎನ್ನುವುದನ್ನು ಗಣಿಸದೆ ಕಲೆಯ ಮೇಲಿನ ದೃಷ್ಟಿಯಿಂದ ಉತ್ತಮ ಚಿತ್ರಗಳಿಗೂ ಪ್ರೋತ್ಸಾಹ ಕೊಡುತ್ತಿರುವುದು ತುಂಬಾ ಸಂತೋಷದ ಸಮಾಚಾರವಾ ಗಿರುತ್ತದೆ.

## ರಂಗಭೂಮಿಯ ಅಭ್ಯುದಯದಲ್ಲಿ ಜನತೆಯ ಕರ್ತವ್ಯ

ಜನಗಳು ನಾಟಕದ ವಿಷಯದಲ್ಲಿ ತಾತ್ಸಾರಭಾವನೆಯನ್ನು ತೋರಬಾರದು. ಬರೀ ನೆರಳಿನ ನಿರ್ಜೀವ ಚಿತ್ರಕ್ಕೆ ಪ್ರೋತ್ಸಾಹ ಕೊಡದೆ ಪ್ರಾಚೀನಕಾಲದಿಂದಲೂ ಉಳಿದುಕೊಂಡು ಚಿತ್ರದ ಆಘಾತದಿಂದ ಹಿಂದೆ ಬೀಳುತ್ತಿರುವ ರಂಗಭೂಮಿಯಲ್ಲಿ ಜೀವಂತ ವ್ಯಕ್ತಿಗಳು ತಮ್ಮ ಕಲಾಪ್ರತಿಭೆಯನ್ನು ಸಾಕ್ಷಾತ್ತಾಗಿ ಪ್ರೇಕ್ಷಕರೆದುರಿಗೆ ತೋರಿಸಿ ಅವರನ್ನು ಸಂತೋಷಪಡಿಸಿ ಆ ಸಂತೋಷವನ್ನು ತಿಳಿದು ತಾವೂ ಸಂತೋಷಪಡುವಂತಹ ನಾಟಕ ಕಲೆಗೆ ಪೂರ್ಣಬೆಂಬಲವನ್ನು ನೀಡಬೇಕು.

ಪೂರ್ವದಲ್ಲಿ ಇಂತಹ ಕಲೆಗಳಿಗೆ ರಾಜಾಧಿರಾಜರ ಆಶ್ರಯ, ಬೆಂಬಲ ದೊರೆಯುತ್ತಿತ್ತು. ಈಗ ಪ್ರಜಾಪ್ರಭುತ್ವದ ಕಾಲವಾಗಿರುವುದರಿಂದ ಈ ಕಲೆಗೆ ಪ್ರಜೆಗಳೇ ಆಶ್ರಯವನ್ನು ನೀಡಿ ಈ ಮಹತ್ವದ ಕಲೆಯನ್ನು ಉಳಿಸಬೇಕಾಗಿರುತ್ತದೆ.

## ಪ್ರತಿಯೊಂದು ಪ್ರಾಂತ್ಯದಲ್ಲಿಯೂ ಭಾರತೀಯ ಕಲಾಪರಿಷತ್ತು ಸ್ಥಾಪನೆಯಾಗಬೇಕು.

ನಮ್ಮ ಸಂಸ್ಕೃತಿ ಉಳಿಯಬೇಕಾದರೆ ನಮ್ಮ ನಾಟಕ ಕಲೆ ಉಳಿಯಬೇಕು. ಮತ್ತು ಅನ್ಯ ರಾಷ್ಟ್ರಗಳಂತೆ ನಮ್ಮಲ್ಲಿಯೂ ಬೆಳೆಯಬೇಕು. ಹಿಂದಿನ ಕಾಲದಲ್ಲಿ ದೇವಾಲಯಗಳಲ್ಲಿ ಪೂಜಾಸಮಯದಲ್ಲಿ ನರ್ತನ ಮಾಡುವುದಕ್ಕಾಗಿ ದೇವಾಲಯದಿಂದಲೇ ನಿಯಮಿತರಾದ ನರ್ತಕಿಯರಿರುತ್ತಿದ್ದರು. ಈಗಲೂ ಕೆಲವು ದೇವಸ್ಥಾನಗಳಲ್ಲಿ ನಾಟಕ ಮಂಡಲಿಗಳಿವೆ. ದಕ್ಷಿಣ ಭಾರತದ ಸುಪ್ರಸಿದ್ಧ ಪುಣ್ಯಕ್ಷೇತ್ರವಾದ ಧರ್ಮಸ್ಥಳದಲ್ಲಿ ದಿ|| ಮಂಜಯ್ಯ ಹೆಗ್ಗಡೆಯವರಂತಹ ಆದರ್ಶ ಧರ್ಮದರ್ಶಿಗಳ ನೇತೃತ್ವದಲ್ಲಿ ಇಂದಿಗೂ ಒಂದು ನಾಟಕ ಸಂಸ್ಥೆಯಿದ್ದು ದಕ್ಷಿಣ ಕನ್ನಡ ಪ್ರಾಚೀನ ನಾಟಕಕಲಾ ಪ್ರದರ್ಶನ ಮಾಡುತ್ತಿರುವುದನ್ನು ಇಲ್ಲಿ ಉದಹರಿಸಬಯಸುತ್ತೇನೆ. ಇದರಂತೆ ಇನ್ನೂ ಅನೇಕ ದೇವಾಲಯಗಳಲ್ಲಿ ನಾಟಕ ಮಂಡಲಿಗಳಿವೆ. ಅಲ್ಲಿ ಭಕ್ತರು ತಮ್ಮ ಸ್ವಂತ ಖರ್ಚಿನಿಂದ ಜನರ ಸಂತೋಷಾರ್ಥವಾಗಿ ನಾಟಕಗಳನ್ನು ಆಡಿಸುವ ಏರ್ಪಾಟಿದೆ. ಇವುಗಳನ್ನು ನೋಡಿದರೆ ನಾಟಕವು ನಮ್ಮ ಸಂಸ್ಕೃತಿಯ ಪ್ರತಿಬಿಂಬವೆಂದು ತಿಳಿದುಬರುತ್ತದೆ. ಕಲೆಯು ಅಳಿದರೆ ನಮ್ಮ ಸಂಸ್ಕೃತಿಯೂ ಅಳಿವ ಸಂಭವವಿದೆ.

ಇಂದು ನಾವು ಸ್ವತಂತ್ರರಾಗಿದ್ದೇವೆ. ಆದರೂ ಸ್ವತಂತ್ರ ಮಾನಸಿಕ ಪ್ರವೃತ್ತಿ ಮಾತ್ರ ಉದಿಸಿಲ್ಲ. ಪರದೇಶದ ನಾಗರಿಕತೆ ಮತ್ತು ಪರಸಂಸ್ಕೃತಿಗೆ ಮನಸೋತು ಕೃತಕ ಜೀವನಕ್ಕೆ ದಾಸರಾಗುತ್ತಿದ್ದೇವೆ. ನಮ್ಮ ಕೇಂದ್ರವಾದ ದೆಹಲಿಯಲ್ಲಿ 29 ನಾಟ್ಯ ಶಿಕ್ಷಣ ಮಂದಿರಗಳಿದ್ದರೂ ಅದರಲ್ಲಿ 27 ಪಾಶ್ಚಾತ್ಯ ನಾಟ್ಯ ಶಿಕ್ಷಣ ಮಂದಿರಗಳು. 2 ಮಾತ್ರ ಭಾರತೀಯ ನಾಟ್ಯ ಶಿಕ್ಷಣ ಮಂದಿರಗಳು ಎಂದಮೇಲೆ ನಮಗೆ ನಮ್ಮ ಸಂಸ್ಕೃತಿಯ ಬಗ್ಗೆ ಎಷ್ಟು ಆದರವಿದೆಯೆಂಬುದು ವ್ಯಕ್ತವಾಗುತ್ತದೆ. ಈ ನ್ಯೂನತೆಗೆ ಅನೇಕ ಕಾರಣಗಳಿವೆ. ನಮ್ಮ ಸಂಸ್ಕೃತಿಯಮೇಲೆ ಅಭಿಮಾನ ಜನತೆಗೆ ಬೆಳೆಯಬೇಕು. ಸರ್ಕಾರ ಈ ಬಗ್ಗೆ ಹೆಚ್ಚು ಗಮನ ಕೊಡಬೇಕು. ಪ್ರತಿಯೊಂದು ಪ್ರಾಂತದಲ್ಲಿಯೂ ನಮ್ಮ ಭಾರತೀಯ ಕಲಾ ಪರಿಷತ್ತುಗಳನ್ನು ಸ್ಥಾಪಿಸಿ ಸರ್ಕಾರ ಕಲಾಭಿವೃದ್ಧಿಗೆ ಸುವ್ಯವಸ್ಥಿತವಾದ ಏರ್ಪಾಡು

ಮಾಡಬೇಕು. ಕಲಾಕ್ಷೇತ್ರದಲ್ಲಿ ನುರಿತ ಅನುಭವಿಗಳು ಕಲಾ ಪರಿಷತ್ತಿನ ಅಧಿಕಾರಿಗಳು ಸೂತ್ರ ವಹಿಸಬೇಕು.

## ನಾಟಕ ಕಲಾಭಿವೃದ್ಧಿಗೆ ಕೆಲವು ಸಲಹೆಗಳು

ಕೇಂದ್ರ ಸರ್ಕಾರದ ನಿರ್ದೇಶದಂತೆ ಮೈಸೂರು ಸರ್ಕಾರವೂ ನಾಟಕ ಅಕ್ಯಾಡೆಮಿಯನ್ನು ಪ್ರಾರಂಭಿಸಲು ಯೋಚಿಸಿದ್ದು ಅಭಿನಂದನಾರ್ಹ. ಹಿಂದೆ ಸಂಸ್ಥಾನದಿಂದ ಕೇಂದ್ರ ಪರಿಷತ್ತಿನ ಸದಸ್ಯರಾಗಿದ್ದ ವಿದ್ಯಾಧಿಕಾರಿಗಳು ಒಂದು ವರದಿಯನ್ನು ಒಪ್ಪಿಸಿದ್ದರು. ಅದು ಕೇಂದ್ರದ ಅಭಿಪ್ರಾಯಗಳನ್ನು ಹೊಂದಿಕೊಳ್ಳುವಂತೆ ರಚಿಸಲಾಗಿತ್ತು. ಅದರಲ್ಲಿ ಕಲಾ ಪರಿಷತ್ತಿನ ವಿಷಯದಲ್ಲಿ ಕೇಂದ್ರಕ್ಕೂ ಮತ್ತು ಸಂಸ್ಥಾನ ಸರ್ಕಾರಕ್ಕೂ ಕೆಲವು ಸಲಹೆಗಳನ್ನು ಕೊಟ್ಟಿದೆ.

1. ನಾಟಕ ಮತ್ತು ಲಲಿತ ಕಲೆಗಳ ಮೂಲಕ ಜನತೆಯ ಶಿಕ್ಷಣವಾಗಬೇಕಾಗಿರುವುದರಿಂದ ವಯಸ್ಕರ ಶಿಕ್ಷಣ ಸಮಿತಿಯ ಮೂಲಕ ನಾಟಕಗಳನ್ನಾಡಿಸುವುದು.

2. ರಾಜಕೀಯ, ಆರ್ಥಿಕ, ಸಾಮಾಜಿಕ ವ್ಯವಹಾರ ಬೋಧಕವಾಗುವಂತೆ ಸುಲಭಶೈಲಿಯ ನಾಟಕಗಳನ್ನು ಬರೆಸುವುದು.

3. ಗ್ರಾಮಾಂತರ ಕಲೆಗಳಾದ ಯಕ್ಷಗಾನ, ಕೋಲಾಟ, ಗ್ರಾಮನೃತ್ಯಗಳಿಗೆ ಬೆಂಬಲ ನೀಡುವುದು.

4. ಜಿಲ್ಲೆಗೊಂದು ನಾಟಕ ಮಂಡಳಿಯನ್ನು ಸ್ಥಾಪಿಸುವುದು.

5. ಜಿಲ್ಲೆಗೊಂದು ಸುಸಜ್ಜಿತ ರಂಗಭೂಮಿಯನ್ನು ನಿರ್ಮಿಸುವುದು.

6. 4-5 ನಾಟಕಗಳಿಗಾಗುವಷ್ಟು ರಂಗಸಜ್ಜಿಕೆಗಳನ್ನು ಪ್ರತಿಯೊಂದು ಜಿಲ್ಲೆಯಲ್ಲೂ ತಯಾರಾಗಿಟ್ಟುಕೊಂಡು ಸುಲಭ ದರದಲ್ಲಿ ಬಾಡಿಗೆಗೆ ಒದಗಿಸುವುದು.

7. ಗ್ರಾಮ ಪಂಚಾಯಿತಿಗಳಿಂದ ಹಣದ ಸಹಾಯ ಒದಗಿಸುವುದು.

8. ಕಲಾವಿದರಿಗೆ ವರ್ಷಂಪ್ರತಿ ಬಹುಮಾನಗಳನ್ನು ಕೊಡುವುದು.

ಇಂದಿನ ಪರಿಸ್ಥಿತಿಗೆ ಅನುಗುಣವಾಗಿ ಕೆಲವು ಹೆಚ್ಚಿನ ಮಾರ್ಪಾಡುಗಳು ಅಗತ್ಯವಾಗಿವೆ:

(1) ನಲಂದ, ತಕ್ಷಶಿಲಾ, ವಿದ್ಯಾಲಯಗಳಲ್ಲಿ ಪದವೀಧರನಾಗಬೇಕಾಗಿದ್ದರೆ ಯಾವುದಾದರೂ ಕಲೆಯಲ್ಲಿ ಪರಿಜ್ಞಾನವನ್ನು ಪಡೆಯಲೇಬೇಕೆಂಬ ನಿಯಮವಿತ್ತು. ಆ ನಿಯಮ ಇಂದು ಜಾರಿಗೆ ಬರಬೇಕು.

(2) ಸ್ಥಳೀಯ ಸಂಸ್ಥೆಗಳು ಕಲಾಪ್ರಗತಿಯನ್ನು ತನ್ನ ಕಾರ್ಯಕ್ರಮಗಳಲ್ಲಿ ಸೇರಿಸಿಕೊಂಡು ಸರ್ಕಾರದಿಂದ ಗ್ರಾಂಟು ಪಡೆದು ಕಲಾಕ್ಷೇತ್ರವನ್ನು ವೃದ್ಧಿಗೊಳಿಸಬೇಕು.

(3) ತನ್ನ ಜೀವನದ ಎಲ್ಲಾ ದಾರುಣ ಪರಿಸ್ಥಿತಿಯನ್ನೂ ಮರೆತು ಜನರನ್ನು ಸಂತೋಷಗೊಳಿಸಲು ಶ್ರಮಿಸುವ ಕಲಾವಿದರಿಗೆ ಸಮಾಜದಲ್ಲಿ ಗೌರವ ದೊರೆಯುವಂತೆ ಸರ್ಕಾರವು ನೆರವು ನೀಡಬೇಕು.

(4) ಉತ್ತಮವಾದ ನಾಟಕ ಲೇಖಕರು ಮತ್ತು ಕಲಾಶಿಕ್ಷಕರಿಗೆ ಸನ್ಮಾನಗಳನ್ನಿತ್ತು ಗೌರವಿಸಬೇಕು.

(5) ವರ್ಷಂಪ್ರತಿ ಪ್ರತಿಯೊಂದು ಜಿಲ್ಲೆಯಲ್ಲೂ ಕಲಾ ಸಮ್ಮೇಳನಗಳನ್ನು ನಡೆಸಿ ಕಲಾವಿದರಿಗೆ ಪ್ರೋತ್ಸಾಹ ನೀಡಬೇಕು.

(6) ಗ್ರಾಮಾಂತರದ ಕಲೆಗಳು ನಗರಗಳಲ್ಲಿ ಪ್ರದರ್ಶಿತವಾಗಲು ಸರ್ಕಾರ ಸೂಕ್ತ ಏರ್ಪಾಡು ಮಾಡಬೇಕು.

(7) ಮಕ್ಕಳ ರಂಗಭೂಮಿಗಳು ಪ್ರತಿಯೊಂದು ತಾಲ್ಲೂಕುಗಳಲ್ಲಿಯೂ ಏರ್ಪಡಬೇಕು.

(8) ಪ್ರತಿ ತಿಂಗಳಲ್ಲೂ ಪ್ರತಿಯೊಂದು ಸ್ಕೂಲುಗಳಲ್ಲಿಯೂ ಮಕ್ಕಳಿಗೆ ಕಲಾ ಶಿಕ್ಷಣ ಕೊಟ್ಟು ಸರ್ಕಾರದ ವೆಚ್ಚದಲ್ಲಿ ಪ್ರದರ್ಶನ ನಡೆಸಬೇಕು. ರಷ್ಯಾದಲ್ಲಿ 131 ದೊಡ್ಡ ಮಕ್ಕಳ ರಂಗಮಂಟಪಗಳಿವೆಯೆಂದು ಹೇಳಲಾಗಿದೆ. ಮಕ್ಕಳಿಗೆ ಕಲೆಯ ಮೂಲಕ ಶಿಕ್ಷಣ ಕೊಡುವಂತಾಗಬೇಕು.

## ನಾಟಕ ಕಲೆಯಿಂದಾಗುವ ಪ್ರಯೋಜನಗಳು

ನಾಟಕಕಲೆ ಕೇವಲ ಅಂತರಂಗದ ಸುಖವನ್ನು ಮಾತ್ರ ಒದಗಿಸುವುದಲ್ಲ. ಅದು ಬಹಿರಂಗ ಸುಖಕ್ಕೂ ಸಾಧನವಾಗಿದೆ. ನಾಟಕದ ಅಂಗವಾದ ನೃತ್ಯವು ಮನುಷ್ಯನ ದೈಹಿಕವಾದ ವೇದನೆಯನ್ನು ಪರಿಹರಿಸಿ ಅಂಗರಕ್ಷಣೆ ಮಾಡಿಕೊಡುವ ಸಾಧನವೆಂದು ತಿಳಿದುಬಂದಿದೆ. ನಾಟ್ಯದಲ್ಲಿ ಅಂಗಗಳ ವಿವಿಧ ಭಂಗಿ, ತಾಳ, ಭಾವಗಳ ಸಮ್ಮೇಳನವು ಶರೀರ ಸೌಷ್ಠವಕ್ಕೆ ಹೆಚ್ಚು ಉಪಕಾರಿಯಾಗಿದೆ. ಸಂಗೀತದಿಂದ ಎಷ್ಟೋ ವಿಧವಾದ ರೋಗಗಳು ಗುಣವಾಗುವುವೆಂದು ವಿಜ್ಞಾನಿಗಳು ಹೇಳುತ್ತಿದ್ದಾರೆ. ಆಸ್ಪತ್ರೆಯಲ್ಲಿ ಕಲಾ ಶಾಲೆಯೊಂದಿರಬೇಕೆಂದು ಅಮೆರಿಕಾದ ವೈದ್ಯರೊಬ್ಬರು ಹೇಳಿದ್ದಾರೆ. ,ಪಾರ್ಶ್ವವಾಯುವಿನಿಂದ ನರಳುತ್ತಿದ್ದವನು ಎಂಟು ವಾರಗಳಲ್ಲಿ ಸಂಗೀತ ಶ್ರವಣದಿಂದ ಗುಣಹೊಂದಿದನೆಂದು ಅಮೆರಿಕಾದ ಆಸ್ಪತ್ರೆಯಲ್ಲಿ ಪ್ರಯೋಗ ನಡೆಸಿದ ವೈದ್ಯರೊಬ್ಬರು ತಿಳಿಸಿದ್ದಾರೆ. ಒಂದೊಂದು ವಿಧವಾದ ರೋಗವನ್ನು ಗುಣಪಡಿಸುವುದಕ್ಕೆ ಒಂದೊಂದು ರಾಗ ಉಂಟೆಂದು ಸಂಗೀತ ಶಾಸ್ತ್ರಜ್ಞರು ಅಭಿಪ್ರಾಯಪಟ್ಟಿದ್ದಾರೆ. ಚಿತ್ತಚಾಂಚಲ್ಯವನ್ನು ತಪ್ಪಿಸಿ ಪರಮಾತ್ಮನ ಸ್ಮರಣೆಯಲ್ಲಿ ನಿರತವಾಗಿರುವುದೇ ಯೋಗವೆಂದು ಯೋಗಶಾಸ್ತ್ರಕಾರರು ಹೇಳಿದ್ದಾರೆ. ಈ ಏಕಾಗ್ರತೆಗೆ ನಾಟಕ ಮುಖ್ಯ ಸಾಧನವೆನಿಸಿದೆ.

ಹರಿಶ್ಚಂದ್ರ ನಾಟಕವನ್ನು ನೋಡಿ ಮಹಾತ್ಮಾ ಗಾಂಧೀಜಿಯವರು ಸತ್ಯಸಂಧರಾಗುವ ಸಂಕಲ್ಪ ಮಾಡಿದರು. ಷೇಕ್ಸ್‌ಪಿಯರ್ ಕವಿಯ ಹ್ಯಾಮ್ಲೆಟ್ ನಾಟಕದಲ್ಲಿ ಬರುವ ಒಂದು ದೃಶ್ಯ ತನ್ನ ತಾಯಿಯ ಅಪಚಾರವನ್ನು ಪ್ರತಿಬಿಂಬಿಸಿ ಆಕೆಯ ಮನಸ್ಸಿನಲ್ಲಿ ಪರಿಣಾಮವನ್ನುಂಟುಮಾಡುತ್ತದೆ. ಹೀಗೆ ದೈಹಿಕ ಧಾರ್ಮಿಕ ಸಾಮಾಜಿಕ ಕ್ಷೇತ್ರಗಳಲ್ಲಿ ನಾಟಕವು ಅಪಾರ ಪರಿಣಾಮವನ್ನುಂಟುಮಾಡುವುದಾಗಿದೆ. ಹಾಗೆಯೇ ರಾಜಕೀಯದಲ್ಲಿಯೂ ನಾಟಕವು ಅಪಾರ ಪರಿಣಾಮವನ್ನುಂಟುಮಾಡುವುದಾಗಿದೆಯೆಂಬುದು ಸಿದ್ಧವಾಗಿಯೇ ಇದೆ. ಆದುದರಿಂದಲೇ ಪ್ರಸಿದ್ಧ ನಾಟಕ ಕರ್ತರಾಗಿದ್ದ ಬರ್ನಾರ್ಡ್‌ಷಾರವರು "ನಾಟಕ ರಂಗವು ಅರಿವಿನ ಕಾರ್ಖಾನೆಯಾಗಬೇಕು. ದೃಢತೆಯ ಸಾಧನವಾಗಬೇಕು. ಸದ್ಗುಣ ಪ್ರಚೋದಕವಾಗಬೇಕು. ನಿರಾಶೆ ಮತ್ತು ಸೋಮಾರಿತನದ ನಿವಾರಣೆಗೆ ಮದ್ದಾಗಬೇಕು. ಆತ್ಮ ವಿಕಾಸದ ದೇವಾಲಯವಾಗಬೇಕು." ಎಂದಿದ್ದಾರೆ ಇಷ್ಟು ಉದಾತ್ತ ಸಾಧನೆಗಳಿಗೆ ನಾಟಕ ಕಲೆ ನೆರವಾಗಿದೆ.

*

ಇನ್ನು ಸ್ವತಂತ್ರ ರಾಷ್ಟ್ರದಲ್ಲಿ ಬಾಳುವ ನಮ್ಮ ಜನತೆಯ ನೈತಿಕ ಮಟ್ಟ ಹೆಚ್ಚ ಬೇಕು. ನೀತಿಯ ನೆಲೆಗಟ್ಟಿನ ಮೇಲೆ ಶಾಂತಿಯ ಚೌಕಿನಲ್ಲಿ ಸಮತಾವಾದಿ ಸಮಾಜ ರಚನೆಯಾಗಬೇಕು. ಇದೇ ಪ್ರಜಾಪ್ರಭುತ್ವದ ಗುರಿ. ಈ ಮಹತ್ಕಾರ್ಯ ಸಿದ್ಧಿಯ ಸಾಧನೆಯಲ್ಲಿ ನಾಟಕ ಕಲೆ ಅತ್ಯಂತ ಸಹಕಾರಿ. "ರಾಷ್ಟ್ರೀಯ ಕಲಾ ಪರಿಷತ್ತು ರಾಷ್ಟ್ರದ ಹೃದಯ" ಎಂದು ಬರ್ನಾರ್ಡ್ ಷಾ ಹೇಳಿರುವುದನ್ನು ನಾವು ನೆನಪಿನಲ್ಲಿಡಬೇಕು.

## ಉಪಸಂಹಾರ

ಒಟ್ಟಿನಲ್ಲಿ ಸ್ವಾತಂತ್ರ್ಯ ಬಂದಮೇಲೆ ಜನರಲ್ಲಿ ಜ್ಞಾನೋದಯವಾಗುತ್ತಲಿದೆ. ಮೊದಲಿಗಿಂತಲೂ ಹೆಚ್ಚಿಗೆ ಕಲಾಭಿರುಚಿ ವ್ಯಕ್ತವಾಗುತ್ತಲಿದೆ. ನಾಟಕ ನೋಡುವ ಆಸಕ್ತಿ ಇತ್ತೀಚೆಗೆ ಕೊಂಚ ಉತ್ತಮವಾಗುತ್ತ ಬಂದಿರುತ್ತದೆ ಎಂಬುದಕ್ಕೆ ಮೊನ್ನೆ ಬೆಂಗಳೂರಿನಲ್ಲಿ ನಾವು ನಡೆಸಿದ 125ನೆಯ ಜನಭರಿತ **"ದಶಾವತಾರ"** ನಾಟಕವೇ ಸಾಕ್ಷಿಯಾಗಿರುತ್ತದೆ. ನಾಟಕ ಸಂಘಗಳವರಿಗೂ ಹೊಸಹೊಸದಾದ ಸರಿಯಾದ ನಾಟಕಗಳು ದೊರೆಯುತ್ತಿಲ್ಲ. ಆದುದರಿಂದ ಈಗಿನ ಕಾಲಕ್ಕೆ ಅನುಸರಿಸಿ ಸಾಮಾಜಿಕ, ಚಾರಿತ್ರಕ, ಪೌರಾಣಿಕ ನಾಟಕಗಳು ರಚನೆಯಾಗಬೇಕು. ಒಳ್ಳೆಯ ನಾಟಕ ಬರೆದ ಸಾಹಿತಿಗಳಿಗೆ ಬಹುಮಾನ, ಪ್ರೋತ್ಸಾಹ ಕೊಡುವ ಪ್ರಯತ್ನ ನಡೆಯಬೇಕು. ಸಾಹಿತ್ಯ ಪರಿಷತ್ತು ಒಂದೇ ಈ ಕಾರ್ಯ ಮಾಡಬೇಕೆಂಬ ನಿಯಮವಿಲ್ಲ. ಇತರ ಸಂಸ್ಥೆಗಳು ಈ ರೀತಿ ವ್ಯವಸ್ಥೆ ಮಾಡಬಹುದು. ಮಾಡುವವರಿಗೆ ಸಕಲರೂ ನೆರವು ನೀಡಬೇಕು. ಅಂತೂ ಕಾಲಕ್ಕೆ ತಕ್ಕಂತೆ ಹೊಸನಾಟಕವು ಹೊರಗೆ ಬರಬೇಕು. ಹಾಗಾದಾಗ ಮಾತ್ರ ನಮ್ಮ ಪ್ರಾಚೀನ ಸಂಸ್ಕೃತಿಯ ಅಭಿಮಾನ ಸಫಲವಾಗುತ್ತದೆ. ಇಲ್ಲವಾದಲ್ಲಿ ನಮ್ಮ ಸಂಸ್ಕೃತಿಯ ಹೆಮ್ಮೆ "ಸಮುದ್ರದ ನೆಂಟಸ್ತನ, ಉಪ್ಪಿಗೆ ಬಡತನ" ಎಂಬಂತಾಗುತ್ತದೆ. ಹಾಗಾಗದಂತೆ ಕರ್ನಾಟಕದ ಸಂಸ್ಕೃತಿಯ ರಕ್ಷಣೆಯ ಭಾರವನ್ನು ಹೊತ್ತಿರುವ ಕನ್ನಡ ಸಾಹಿತ್ಯ ಪರಿಷತ್ತು ತೀವ್ರ ಎಚ್ಚರಿಕೆ ವಹಿಸಬೇಕು. ಈ ಕಾರ್ಯಕ್ಕೆ ಅಗತ್ಯವಾದ ಸೂಚನೆಗಳನ್ನು ಒಳಗೊಂಡ ಗೊತ್ತುವಳಿಗಳನ್ನು ಮಾಡಿ, ಅವನ್ನು ರಕ್ಷಣಾ ಕೇಂದ್ರ ಮತ್ತು ಪ್ರಾದೇಶಿಕ ಸರಕಾರಗಳ ಗಮನಕ್ಕೆ ತಂದು ಅವು ಈ ಗೊತ್ತುವಳಿಗಳನ್ನು ಕಾರ್ಯರೂಪಕ್ಕೆ ತರುವಂತೆ ಒತ್ತಾಯಮಾಡಬೇಕು. ಈ ಕಾರ್ಯದಲ್ಲಿ ನಾನು ನನ್ನಿಂದ ಆಗಬಹುದಾದಷ್ಟು ಕೆಲಸವನ್ನು ಮಾಡುತ್ತೇನೆಂದು ಭರವಸೆ ಕೊಡುತ್ತೇನೆ. ವೈಯಕ್ತಿಕ ಪ್ರಯತ್ನ, ಸಾಂಘಿಕ ಉದ್ಯಮ, ಸರಕಾರದ ಪ್ರೋತ್ಸಾಹ ಈ ತ್ರಿವೇಣಿಸಂಗಮವಾಗಿ ಇಂದು ಗಳಿತವಾಗುತ್ತಿರುವ ಕರ್ನಾಟಕ ಕಲೆ ವಿಶ್ವಸಂಸ್ಕೃತಿಗೇ ಅಲಂಕಾರವಾಗುವಂತೆ ಬೆಳೆಯಲೆಂದು ಬಯಸುತ್ತೇನೆ.

ಜಾಗ್ರತ ಜನತೆಯ ಉತ್ಸಾಹಪೂರ್ಣ ಪ್ರೋತ್ಸಾಹದಿಂದ ಕನ್ನಡ ರಂಗಲಕ್ಷ್ಮಿ ಸರ್ವಾಂಗಸುಂದರಿಯಾಗಿ ನಾಡಿಗೆ ಚೈತನ್ಯದಾಯಿಯಾಗಿ ಬೆಳಗಲಿ ಎಂದು ಹಾರೈಸುತ್ತೇನೆ.

**"ಉತ್ತಿಷ್ಠತ, ಜಾಗ್ರತ, ಪ್ರಾಪ್ಯವರಾನ್ ನಿಬೋಧತ !"** ಎಂಬ ಉಪನಿಷತ್ ವಾಣಿ ಕಲಾರಂಗದ ಅಭ್ಯುದಯಕ್ಕೂ ಹಾದಿ ತೋರಲಿ.

**ಚಿರಂ ಅಭಿವರ್ಧತಾಂ ಕಲಾತ್ಮಕ ಶ್ರೀಃ !**

# 38ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ರಾಯಚೂರು

## ನಾಟಕ ಗೋಷ್ಠಿಯಲ್ಲಿ ಓದಿದ ಶ್ರೀ ಆರ್. ಗುರುರಾಜರಾಯರ ಭಾಷಣ

26-12-1955

### ನಾಟಕ ನಿರ್ಮಾಣ ವಿಧಾನ

### (TECHNIQUE OF PLAY PRODUCTION)

### ಇಂದಿನ ಕನ್ನಡ ನಾಟಕದ ದುಃಸ್ಥಿತಿ

"ಇಂದು ಕನ್ನಡ ಸಾಹಿತ್ಯ ನಾನಾ ಮುಖವಾಗಿ ಬೆಳೆಯುತ್ತಿದೆ; ಎಲ್ಲಾ ಕ್ಷೇತ್ರಗಳಲ್ಲಿಯೂ ಪ್ರಗತಿ ಸಾಧಿಸುತ್ತಿದೆ. ಆದರೆ ನಾಟಕ ಮಾತ್ರ ಹಿಂದುಳಿದಿದೆ. ಇಂದಿನ ಕನ್ನಡ ರಂಗಭೂಮಿಯ ಸ್ಥಿತಿ ಶೋಚನೀಯವಾಗಿದೆ."—ಇದು ಎಲ್ಲ ಕನ್ನಡಾಭಿಮಾನಿಗಳ ಕೂಗು. ನಾವೀಗ ಕನ್ನಡ ನಾಟಕದ ವಿಚಾರವಾಗಿ ಮಾಡುವ ಕಟುವಾದ ವಿಮರ್ಶೆ ನ್ಯಾಯವೇನೋ ಸರಿ. ಆದರೆ ಅದರ ದುರ್ದಶೆಯನ್ನು ನೋಡಿ ಪರಿತಪಿಸುತ್ತೇವೆಯೇ ಹೊರತು, ಇದಕ್ಕೆ ಕಾರಣವೇನು, ಕನ್ನಡ ನಾಟಕದ ಪ್ರಗತಿಗೆ ಅಡ್ಡಿಯಾಗಿರುವ ತೊಂದರೆಗಳನ್ನು ಹೇಗೆ ನಿವಾರಿಸುವುದು? ಅದರ ಪ್ರಗತಿಗೆ ಸಾಧಕವಾಗುವ ಪ್ರಯತ್ನಗಳನ್ನು ಮಾಡುವುದು ಹೇಗೆ— ಈ ವಿಷಯವನ್ನು ಕುರಿತು ನಾವು ಯೋಚಿಸಿಲ್ಲ. ನಾಟಕ ಸಾಹಿತ್ಯ ಬೆಳೆದು ಸರ್ವಾಂಗಸುಂದರವಾಗಬೇಕಾದರೆ, ಜೀವಂತ ಕನ್ನಡ ರಂಗಭೂಮಿ ಅವಶ್ಯಕ. ಇಂತಹ ರಂಗಭೂಮಿಯು ನಿರ್ಮಾಣವಾಗಬೇಕಾದರೆ ಉತ್ತಮ ನಾಟಕಗಳು ಹೆಚ್ಚು ಹೆಚ್ಚಾಗಿ ಬರಬೇಕು. ಎಂದರೆ "ಹುಚ್ಚು ಬಿಟ್ಟ ಹೊರತು ಮದುವೆಯಾಗುವುದಿಲ್ಲ; ಮದುವೆಯಾದ ಹೊರತು ಹುಚ್ಚು ಬಿಡುವುದಿಲ್ಲ". ನಾವು ಈ ವಿಷಮಚಕ್ರ (Vicious Circle) ದಲ್ಲಿ ಸಿಕ್ಕಿ ಸುತ್ತುತ್ತಿದ್ದೇವೆ. ಈಗ ಬರೆದಿರುವ ನಾಟಕಗಳಲ್ಲಿ, 'ಸಾಹಿತ್ಯ'ವೆನಿಸಿದ ನಾಟಕಗಳು ಸಾಮಾನ್ಯವಾಗಿ ರಂಗದ ಮೇಲೆ ಪ್ರದರ್ಶನಕ್ಕೆ ತಕ್ಕವಾಗಿಲ್ಲ. ರಂಗಭೂಮಿಯ ಮೇಲೆ ಯಶಸ್ವಿಯಾಗಿ ಪ್ರದರ್ಶಿತವಾದ ಅನೇಕ ನಾಟಕಗಳಿಗೆ 'ಸಾಹಿತ್ಯ'ವೆನಿಸಿಕೊಳ್ಳುವ ಸತ್ವವಿಲ್ಲ. ಏಕೆಂದರೆ 'ಸಾಹಿತಿ' ನಾಟಕಕಾರರು ರಂಗಭೂಮಿಯ ಸಂಪರ್ಕವನ್ನೇ ಇಟ್ಟುಕೊಂಡಿಲ್ಲ. ನಾಟಕ ಪ್ರದರ್ಶನದ ಸಮಸ್ಯೆಗಳನ್ನಾಗಲೀ, ತಾವು ಬರೆದ ನಾಟಕಗಳನ್ನು ರಂಗಭೂಮಿಯ ಮೇಲೆ ಪ್ರದರ್ಶಿಸಿದರೆ ಅವುಗಳಿಂದ ಸಭಿಕರ ಮೇಲೆ ಆಗುವ ಪ್ರಭಾವವನ್ನಾಗಲಿ ಕುರಿತು ಅವರು ಯೋಚಿಸುವುದಿಲ್ಲ. ಅವರು ತಮ್ಮ ನಾಟಕಗಳನ್ನು ಓದುಗರಿಗಾಗಿಯೇ ಬರೆಯುತ್ತಾರೆ. ಇಂತಹ 'closet plays' ರೂಪದಲ್ಲಿ ನಾಟಕದ ಜಾತಿಗೆ ಸೇರಿದುದಾದರೂ ನಿಜವಾದ ನಾಟಕಗಳೆನ್ನಿಸಿಕೊಳ್ಳುವುದಿಲ್ಲ. ರಂಗಭೂಮಿಗಾಗಿ ಬರೆಯುವ ನಾಟಕಕಾರರು ತಮ್ಮ ಪೋಷಕರ ಅಭಿರುಚಿಯ ಮಟ್ಟವನ್ನು ಮೀರುವ ಭೀತಿಯಿಂದ 'ಸಾಹಿತ್ಯ'ದ ಛಾಯೆಯನ್ನು ಕೂಡ ತಮ್ಮ ನಾಟಕಗಳಲ್ಲಿ ಸುಳಿಯಗೊಡುವುದಿಲ್ಲ. ಕನ್ನಡ ನಾಟಕದ ಉದ್ಧಾರವಾಗಬೇಕಾದರೆ ಸಾಹಿತ್ಯ, ರಂಗಭೂಮಿ ಇವುಗಳಿಗೆ ಈಗ ಇರುವ ಅಂತರ ಹೋಗಬೇಕು. ಶ್ರೇಷ್ಠ ಸಾಹಿತ್ಯವೆನಿಸಿದ ನಾಟಕಗಳು ಜನಪ್ರಿಯವಾಗಬೇಕು. ಹಾಗಾಗಬೇಕಾದರೆ ಸಾಹಿತಿಗಳು ರಂಗಭೂಮಿಯ ಸಂಪರ್ಕವನ್ನು ಸಂಪೂರ್ಣವಾಗಿ ಹೊಂದಿರಬೇಕು.

ಪ್ರದರ್ಶನಕ್ಕೆ ಯೋಗ್ಯವಾದ ನಾಟಕಗಳನ್ನು ಬರೆಯಬೇಕು. ಹಾಗೆಯೇ ಇಂತಹ ಉತ್ತಮ ನಾಟಕಗಳಿಗೆ ಕಲಾಕೃತಿಯನ್ನು ರಂಗಭೂಮಿಯ ಮೇಲೆ ಕೊಡಬಲ್ಲ ಸುಸಂಸ್ಕೃತರೂ, ಸುಶಿಕ್ಷಿತರೂ ಆದ ಕಲಾವಿದರು ಬೇಕು. ಎಲ್ಲಕ್ಕಿಂತ ಹೆಚ್ಚಾಗಿ, ಸಾಹಿತಿಯ ಕೃತಿ, ಕಲಾವಿದರ ಕೌಶಲ ಇವುಗಳ ಸಂಯೋಜನೆಯಿಂದ ಉದ್ಭವಿಸುವ ಸೌಂದರ್ಯವನ್ನು ಅನುಭವಿಸುವ ಯೋಗ್ಯತೆಯುಳ್ಳ ಸಭಿಕರು ಬೇಕು. ಈ ಕನಸು ನನಸಾಗಬೇಕಾದರೆ ಕನ್ನಡ ರಂಗಭೂಮಿಯ ನಿರ್ಮಾಣ ಹೊಸದಾಗಿ ಆಗಬೇಕು; ಅದನ್ನು ಮಾಡಬಲ್ಲ ನಾಟಕ ಸಾಹಿತ್ಯದ ರಚನೆ ಆಗಬೇಕು.

## ಕನ್ನಡ ರಂಗಭೂಮಿಯ ಹಿಂದಿನ ವೈಭವ ಮತ್ತು ಈಗಿನ ದುಃಸ್ಥಿತಿ

ಹೀಗೆಂದ ಮಾತ್ರಕ್ಕೆ ಕನ್ನಡ ರಂಗಭೂಮಿಯನ್ನು ನಾನು ಅಲ್ಲಗಳೆಯುತ್ತಿದ್ದೇನೆಂದು ತಾವು ಭಾವಿಸಬಾರದು. ಹಿಂದಿನ ಕನ್ನಡ ನಟರ ಕಲಾಕೌಶಲದ ಕಥೆಗಳನ್ನು ನಾನು ಕೇಳಿದ್ದೇನೆ. ದಿ|| ವರದಾಚಾರ್ಯರ, ರಾಘವಾಚಾರ್ಯರ ಮತ್ತು ಕೆಲವು ಇತರ ನಟಶ್ರೇಷ್ಠರ ಕಲಾಪ್ರೌಢಿಮೆಯು ಇಂದು ಮನೆಮಾತಾಗಿದೆ. ಅವರು ಪೋಷಿಸಿ ಬೆಳಸಿದ ಕಲೆಯನ್ನು ಉಳಿಸಲು ಈಗಲೂ ಕೆಲವು ಉತ್ಸಾಹೀ ಕಲಾವಿದರು ಸರ್ವಪ್ರಯತ್ನ ಮಾಡುತ್ತಿದ್ದಾರೆ. ಚಲನಚಿತ್ರಗಳ ಆಘಾತದಿಂದ ನಶಿಸಿಹೋಗುತ್ತಿರುವ ಕನ್ನಡ ರಂಗಭೂಮಿಯನ್ನು ಉಳಿಸಲು ಸಾಹಸದಿಂದ ಅನೇಕರು ಹೋರಾಡುತ್ತಿದ್ದಾರೆ. ಅದಕ್ಕಾಗಿ ಕಲಾಭಿಮಾನಿಗಳೆಲ್ಲರೂ ಅವರಿಗೆ ಕೃತಜ್ಞರಾಗಿರಬೇಕು.

ಆದರೆ ಈಗಿನ ಪರಿಸ್ಥಿತಿಯಲ್ಲಿ ನಾಟಕಕಲೆಯನ್ನು ವೃತ್ತಿಯನ್ನಾಗಿಟ್ಟುಕೊಂಡಿರುವ ಕಲಾವಿದರ ಸ್ಥಿತಿ ವಿಷಾದವಾಗಿದೆ. ಜನತೆಯ ಮನರಂಜನೆಯ ಕಾರ್ಯವನ್ನು ಚಲನಚಿತ್ರಗಳು ವಹಿಸಿಕೊಂಡು, ಜನತೆಯಲ್ಲಿ ನಾಟಕಾಭಿಮಾನವನ್ನು ಸಂಪೂರ್ಣವಾಗಿ ನಾಶನ ಮಾಡಿದೆ. ಇತ್ತೀಚಿನ 'ಕಂಪೆನಿ'ಗಳ ಪರಿಶೋಚನೀಯ ಸ್ಥಿತಿ ಇದನ್ನು ನಮಗೆ ಎತ್ತಿ ತೋರಿಸುತ್ತದೆ. ಕನ್ನಡ ರಂಗಭೂಮಿಯನ್ನು ಉಳಿಸಲು ಪ್ರಯತ್ನಿಸುತ್ತಿರುವ ಕಲಾವಿದರೂ ಸಹ ಚಲನಚಿತ್ರಗಳ ಪ್ರಭಾವದಿಂದ ಜನತೆಯನ್ನು ಬಿಡಿಸಿ ನಾಟಕಗಳ ಕಡೆ ಒಲಿಸಿಕೊಳ್ಳಲು ಚಲನಚಿತ್ರಗಳೊಂದಿಗೆ 'ಪೈಪೋಟಿ' ನಡಸುತ್ತಿದ್ದಾರೆ. ಇದರಿಂದ ಅಳಿಯುತ್ತಿರುವ ನಾಟಕದ ಕಂಪೆನಿ (Commercial Theatre)ಗೆ ಸದ್ಯ ಉಸಿರು ಕೂಡಿಕೊಂಡರೂ, ಅದನ್ನು ಉಳಿಸುವುದು ಸಾಧ್ಯವೆಂದು ತೋರುವುದಿಲ್ಲ.

ಈ ಪರಿಸ್ಥಿತಿಯನ್ನು ಗಮನಿಸಿದರೆ, ನನಗೆ ತೋರುವುದೇನೆಂದರೆ, ನಮ್ಮ ಈಗಿನ ಸನ್ನಿವೇಶದಲ್ಲಿ ಕನ್ನಡ ರಂಗಭೂಮಿಯ ಚರಿತ್ರೆಯಲ್ಲಿ 'ಕಂಪೆನಿ'ಗಳ ಯುಗ ಮುಗಿಯಿತು. ನಾಟಕವನ್ನು ವೃತ್ತಿಯನ್ನಾಗಿ ಉಳಿಸಿಕೊಳ್ಳಲು ಇನ್ನು ಸಾಧ್ಯವಿಲ್ಲ. ಕನ್ನಡ ರಂಗಭೂಮಿಯ ಭವಿಷ್ಯ ಇಂದು ಕಲಾವಿಲಾಸಿ (Amateurs) ಗಳ ಕೈಯಲ್ಲಿದೆ. ನಾಟಕಕಲೆ ಜನಪ್ರಿಯವಾಗಿ, ಅದಕ್ಕೆ ಜನತೆಯ ಗೌರವ ವಿಶ್ವಾಸಗಳು ಸಲ್ಲಬೇಕಾದರೆ, ಆ ಕೆಲಸವನ್ನು ಕಲಾವಿಲಾಸಿಗಳು ಸಾಧಿಸಬೇಕು. ಹೀಗೆ ಕನ್ನಡ ರಂಗಭೂಮಿಯ ಪುನರುದ್ಧಾರವಾದ ಮೇಲೆ, ನಾಟಕವು ಪುನಃ ಒಂದು ವೃತ್ತಿಯಾಗಬಹುದು; ನಟರಿಗೆ ಗೌರವ ಸನ್ಮಾನಗಳು ದೊರಕಬಹುದು.

## ಇಂದಿನ ಕಲಾವಿಲಾಸಿ ಸಂಸ್ಥೆ (Amateur Associations) ಗಳು

ಇತ್ತೀಚೆಗೆ ಕನ್ನಡ ನಾಡಿನಲ್ಲಿ ಅನೇಕ ಅಮೆಚೂರ್ ನಾಟಕ ಸಂಸ್ಥೆಗಳು

ನಾಟಕದ ಪುನರುದ್ಧಾರಕ್ಕಾಗಿ ಶ್ರಮಿಸುತ್ತಿವೆ. ಈಗಾಗಲೆ ರಂಗಭೂಮಿಗಾಗಿ ಬರೆಯುತ್ತಿರುವ ನಾಟಕಕಾರರ ಹಲವು ಕೃತಿಗಳನ್ನು ಯಶಸ್ವಿಯಾಗಿ ಪ್ರದರ್ಶಿಸಿ ಜನರ ಮನ್ನಣೆಯನ್ನು ಪಡೆದಿವೆ. ಕೆಲವು ಪ್ರತಿಭಾವಂತ ನಟನಟಿಯರು ಈ ಪ್ರಯತ್ನದ ಫಲವಾಗಿ ಬೆಳಕಿಗೆ ಬಂದಿದ್ದಾರೆ. ಆದರೆ ಈ "ನವರಂಗ ನಿರ್ಮಾಣ" (New Theatre Movement)ದ ಕಾರ್ಯವು ಸಾಕಷ್ಟು ಪ್ರಗತಿಯನ್ನು ಸಾಧಿಸಿದೆಯೆಂದು ಹೇಳಲಾಗುವುದಿಲ್ಲ. ಈ ಪ್ರಯತ್ನದ ಬೆಳವಣಿಗೆಗೆ, ಯಶಸ್ಸಿಗೆ ಮುಖ್ಯವಾಗಿ ಕೆಲವು ಅಡಚಣೆಗಳಿವೆ. ಉತ್ತಮ ನಾಟಕಗಳ ಅಭಾವ; ಪ್ರಗತಿದಾಯಕವಾಗಿ ಕೆಲಸ ಮಾಡಲು ಬೇಕಾದ ಸಾಧನಗಳಿಲ್ಲದಿರುವುದು; ಸುಶಿಕ್ಷಿತ ನಟನಟಿಯರ ಕೊರತೆ, ಕೊನೆಯದಾಗಿ, ನಾಟಕ ನಿರ್ಮಾಣದಲ್ಲಿ ವ್ಯವಸ್ಥೆಯಿಲ್ಲದಿರುವುದು. ಮೊದಲನೆಯ ಅಡಚಣೆಯನ್ನು ನಿವಾರಿಸುವುದು ಸಾಹಿತಿಗಳ ಕೆಲಸ. ಜನತೆಯ ಮನರಂಜನೆಯನ್ನು ದೃಷ್ಟಿಯಲ್ಲಿಟ್ಟುಕೊಂಡು, ನಾಟಕದ ಸೃಷ್ಟಿಯನ್ನು ಅವರು ಮಾಡಬೇಕು. ಸುಸಜ್ಜಿತ ರಂಗಮಂಟಪ ನಿರ್ಮಾಣ ಬಹಳ ಖರ್ಚಿನ ಕೆಲಸ. ಆ ಭಾರವನ್ನು ಯಾವ ಸಂಸ್ಥೆಯೂ ಹೊರಲಾರದು. ಈ ಕಾರ್ಯವನ್ನು ಕಲಾಭಿವೃದ್ಧಿಯು ಜನತೆಯ ಪ್ರಗತಿಗೆ ಮುಖ್ಯ ಸಾಧನವೆಂದು ಸಾರುತ್ತಿರುವ ನಮ್ಮ ಪ್ರಜಾಸರ್ಕಾರ ಮಾಡಬೇಕು. ಕಲಾಕ್ಷೇತ್ರಗಳಾದ ದೊಡ್ಡದೊಡ್ಡ ನಗರಗಳಲ್ಲಿ, ಕ್ರಮೇಣ ದೇಶದ ಎಲ್ಲಾ ಭಾಗಗಳಲ್ಲಿ ಸುಸಜ್ಜಿತ ರಂಗಮಂಟಪಗಳ ನಿರ್ಮಾಣವಾಗಿ, ಕಲಾಸಂಸ್ಥೆಗಳ ಉಪಯೋಗಕ್ಕೆ ಸಿದ್ಧವಾಗಬೇಕು. ಇನ್ನು ಸುಶಿಕ್ಷಿತ ನಟ ನಟಿಯರ ಅಭಾವದ ಪ್ರಶ್ನೆ. ಈಗ ನಾಟಕಾಭಿಮಾನಿಗಳ ಸಂಖ್ಯೆಯೇನೋ ಹೆಚ್ಚುತ್ತಿದೆ. ಉತ್ಸಾಹೀ ಅಮೆಚೂರ್ ನಟನಟಿಯರು ನಾಟಕಗಳಲ್ಲಿ ಭಾಗವಹಿಸಲು ಮುಂದೆ ಬರುತ್ತಿದ್ದಾರೆ. ಅವರಲ್ಲಿ ಕೆಲವರಿಗೆ ಪ್ರತಿಭೆಯೂ ಇದೆ. ಆದರೂ ತಮ್ಮ ಪ್ರತಿಭೆಗೆ, ಉತ್ಸಾಹಕ್ಕೆ ತಕ್ಕ ಪ್ರತಿಫಲ ದೊರೆಯುತ್ತಿಲ್ಲ. ಕಾರಣ, ಅಭಿನಯ ಕಲೆಯಲ್ಲಿ ಸರಿಯಾದ ಶಿಕ್ಷಣವಿಲ್ಲದಿರುವುದು. ಸಂಗೀತ, ನೃತ್ಯಕಲೆಗಳಂತೆ, ಅಭಿನಯವೂ ಒಂದು ಕಲೆ; ಈ ಕಲೆಯನ್ನು ವಶಮಾಡಿಕೊಳ್ಳಬೇಕಾದರೆ, ಇತರ ಕಲಾವಿದರು ಹೇಗೆ ಅನೇಕ ವರ್ಷಗಳ ಕಾಲ ಶ್ರಮಿಸಿ, ಸುಶಿಕ್ಷಿತರಾಗುತ್ತಾರೆಯೋ ಹಾಗೆಯೇ ಉತ್ತಮ ಶಿಕ್ಷಣದಿಂದ ನಮ್ಮ ಪ್ರತಿಭೆಯನ್ನು ಹದ ಮಾಡಬೇಕೆಂಬ ಅರಿವು ಕೂಡ ನಮ್ಮ ನಟರಿಗೆ ಇಲ್ಲ. ಅವರಲ್ಲಿ ಅನೇಕರು ಸಮಯ ಸ್ಫೂರ್ತಿಯನ್ನೇ ನಂಬಿ ರಂಗಕ್ಕೆ ಸಾಗುತ್ತಾರೆ. ಅದರಿಂದಲೇ ಅವರ ಅಭಿನಯದಲ್ಲಿ ಏರಿಳಿತಗಳೂ, ದೋಷಗಳೂ ಕಾಣುತ್ತವೆ. ಪ್ರತಿಭೆಯಿಲ್ಲದ ನಟ ಎಂದಿಗೂ ಉತ್ತಮ ಕಲಾವಿದನಾಗಲಾರ, ನಿಜ; ಆದರೆ ಎಂತಹ ಪ್ರತಿಭಾವಂತನಾದರೂ ಶಿಕ್ಷಣವಿಲ್ಲದ ನಟ ತನ್ನ ದೈವದತ್ತವಾದ ಶಕ್ತಿಯ ಪೂರ್ಣ ಪ್ರಯೋಜನ ಪಡೆಯಲಾರ. ಇಂತಹ ಶಿಕ್ಷಣವನ್ನು ಕೊಡುವ ಸಂಸ್ಥೆಗಳು ನಮ್ಮ ದೇಶದಲ್ಲಿಲ್ಲ. ಇತ್ತೀಚೆಗೆ ಅಭಿನಯ ಕಲೆಯನ್ನು ಬೋಧಿಸುವ ಶಿಕ್ಷಣ ಶಾಲೆಗಳನ್ನು ಸ್ಥಾಪಿಸುವ ಯೋಜನೆಯನ್ನು ಭಾರತ ಸರ್ಕಾರವು ತಯಾರಿಸುತ್ತಿದೆ. ಒಂದೆರಡು ವಿಶ್ವವಿದ್ಯಾನಿಲಯಗಳೂ ಸಹ ಅಭಿನಯ ಕಲೆಯನ್ನು ಬೋಧಿಸುವ ಯೋಜನೆಯನ್ನು ಸಿದ್ಧಮಾಡುತ್ತಿವೆ. ಇಂತಹ ಶಿಕ್ಷಣಕೇಂದ್ರಗಳು ಕರ್ನಾಟಕದಲ್ಲಿ ಸ್ಥಾಪಿತವಾಗಿ, ನಮ್ಮ ಉತ್ಸಾಹೀ ನಟ ನಟಿಯರನ್ನು ಆಕರ್ಷಿಸಿ, ಅವರ ಕಲೆಗೆ ಮೆರಗು ಕೊಡುವಂತಾಗಬೇಕು.

ಕೊನೆಯದಾಗಿ, ನಾಟಕನಿರ್ಮಾಣ, (Prodution)ದ ವ್ಯವಸ್ಥೆ. ಇದೇ ನನ್ನ

ಭಾಷಣವಾದ ವಸ್ತು. ನಾಟಕಕಾರನ ಕೃಪೆಯನ್ನು ರಂಗಭೂಮಿಯಮೇಲೆ ಉತ್ತಮ ವಾಗಿ ಪ್ರದರ್ಶಿಸಲು ಬೇಕಾದ ಸಾಧನ, ಸಲಕರಣಗಳೇನು, ಈ ಕಾರ್ಯವನ್ನು ಯಶಸ್ವಿ ಯಾಗಿ ಮಾಡುವ ಹೊಣೆಗಾರಿಕೆ ಯಾವುದು, ಅದನ್ನು ಯಾವ ರೀತಿ ಸಾಧಿಸಬೇಕು, ಇವೇ ಮುಂತಾದ ಪ್ರಶ್ನೆಗಳಿಗೆ ನನಗೆ ಸಾಧುವೆಂದು ತೋರಿದ ಉತ್ತರಗಳನ್ನು ಕೊಡುವುದೇ ಇದರ ಉದ್ದೇಶ. ನಾಟಕ ನಿರ್ಮಾಣದ ಈ ಆದರ್ಶ ಚಿತ್ರವನ್ನು ನಾನು ರಚಿಸುವಾಗ, ಈ ಕಾರ್ಯಕ್ಕೆ ಬೇಕಾದ ಸಾಧನ, ಸಲಕರಣೆಗಳು ನಮ್ಮಲ್ಲಿವೆಯೆಂದು ಭಾವಿಸಿಕೊಂಡು ಮಾತನಾಡುತ್ತೇನೆ.

ನಾಟಕ ನಿರ್ಮಾಣದಲ್ಲಿ ನಿರ್ಮಾತೃ (Producer) ವಿನ ಸ್ಥಾನ ನಾಟಕಕಾರನು ತನ್ನ ಕೃತಿಯಲ್ಲಿ ತಾನು ಕಂಡ ಜೀವನದ ಒಂದು ದಿವ್ಯ ದರ್ಶನಕ್ಕೆ ರೂಪವನ್ನು ಕೊಡು ತ್ತಾನೆ. ಅವನ ದರ್ಶನವನ್ನು ಸಹೃದಯರಾದ ಸಭಿಕರಮುಂದೆ ಪರಿಣಾಮಕಾರಿಯಾಗಿ ಚಿತ್ರಿಸುವುದೇ ನಾಟಕ ನಿರ್ಮಾತೃವಿನ ಕೆಲಸ. ಕವಿಯು ಬರೆದ ನಾಟಕ ಅವನ ದರ್ಶನ ಅಸ್ಥಿಪಂಜರ ಮಾತ್ರ. ಈ ಎಲುಬಿನ ಗೂಡಿಗೆ ರಕ್ತಮಾಂಸಗಳನ್ನು ತುಂಬಿ ಪುಷ್ಟಿಯಾದ ಸುಂದರಾಕೃತಿಯನ್ನು ಸೃಷ್ಟಿಸುವ ಕಲೆ ನಿರ್ಮಾತೃವಿನಲ್ಲಿರಬೇಕು. ಈ ಕೆಲಸವನ್ನು ಯಶಸ್ವಿಯಾಗಿ ಮಾಡಬೇಕಾದರೆ ಕವಿಸಹಜವಾದ ಕಲ್ಪನೆ ಅವನಲ್ಲಿರಬೇಕು. ತನ್ನ ಮನಸ್ಸಿನ ಚಿತ್ರವನ್ನು ರಂಗಮಂಟಪದ ಸಾಧನ ಸಲಕರಣೆಗಳ, ನಟನಟಿಯರ ಸಹಾಯ ದಿಂದ ಸಭಿಕರ ಮುಂದಿಡಬೇಕು. ಎಂದರೆ ನಾವು ರಂಗದಮೇಲೆ ನೋಡುವ ಜೀವನದ ದೃಶ್ಯ ನಾಟಕಕಾರನ ಕೃತಿಯಿಂದ ಪ್ರಚೋದಿತವಾದ ನಿರ್ಮಾತೃವಿನ ಕೃತಿ. ಹೀಗೆಂದ ಮೇಲೆ ನಾಟಕ ನಿರ್ಮಾಣದಲ್ಲಿ ನಿರ್ಮಾತೃವಿನ ಪ್ರಾಮುಖ್ಯತೆಯನ್ನು ಕುರಿತು ಹೆಚ್ಚಾಗಿ ಹೇಳಬೇಕಾದ್ದಿಲ್ಲ. ಪಾಶ್ಚಾತ್ಯ ದೇಶಗಳಲ್ಲಿ ನಾಟಕ ನಿರ್ಮಾತೃವಿಗೆ ನಾಟಕಕಲೆಯಲ್ಲಿ ಇರುವ ಗೌರವ ಸನ್ಮಾನಗಳನ್ನು ನೋಡಿದರೆ ಈ ಅಂಶವು ನಮಗೆ ಚೆನ್ನಾಗಿ ಗೊತ್ತಾಗು ತ್ತದೆ. ನಮ್ಮಲ್ಲಿ ನಾಟಕ ನಿರ್ಮಾತೃವಿಗೆ ಈ ಸ್ಥಾನವಿಲ್ಲ.

ನಿರ್ಮಾತೃವು ತನ್ನ ಕನಸನ್ನು ನನಸಾಗಿ ಮಾಡಲು ಉಪಯೋಗಿಸುವ ಮುಖ್ಯ ಸಾಧನೆಗಳೆಂದರೆ: ನಟರು; ರಂಗಮಂಟಪದ ವ್ಯವಸ್ಥೆ (Setting Decorations, Furniture ಇತ್ಯಾದಿ), ದೀಪಗಳ ವ್ಯವಸ್ಥೆ; ಹಿನ್ನೆಲೆಯ effects ಇತ್ಯಾದಿ. ಈ ಸಾಧನಗಳನ್ನು ನಿರ್ಮಾತೃವು ಹೇಗೆ ತನ್ನ ಕಾರ್ಯಸಾಧನೆಗೆ ಉಪಯೋಗಿಸಬೇಕೆಂಬ ವಿಷಯವಾಗಿ ಕೆಲವು ಸಲಹೆಗಳನ್ನು ಮಾಡಬಯಸುತ್ತೇನೆ.

## ನಟರ ಶಿಕ್ಷಣ

ಪ್ರದರ್ಶಿಸುವ ನಾಟಕದ ಪಾತ್ರಗಳ ಅಭಿನಯಕ್ಕೆ ನಟರನ್ನು ಆರಿಸುವಾಗ, ನಿರ್ಮಾತೃ ತಾನು ಕಲ್ಪಿಸಿರುವ ಆ ಪಾತ್ರಗಳ ಸ್ವರೂಪವನ್ನು ಆದಷ್ಟು ಹೋಲುವ ನಟರನ್ನು ಹುಡುಕಬೇಕು. ಆಕಾರ, ಸ್ವಭಾವ, ನಡೆ, ನುಡಿ ಇವುಗಳನ್ನು ಪರಿಶೀಲಿಸಿ, ತನ್ನ ಕಲ್ಪನೆಯ ಪಾತ್ರಕ್ಕೆ ರೂಪಕೊಡುವ ನಟರು ಸಿಕ್ಕಿದರೆ ಅವನ ಕೆಲಸವು ಯಶಸ್ವಿ ಯಾಗುವ ಸಂಭವ ಹೆಚ್ಚು—ಹೀಗೆ ನಟರ ಚುನಾವಣೆಯಾದಮೇಲೆ, ಆ ನಟರಿಗೆ ಅವರ ಪಾತ್ರಗಳ ಸ್ವರೂಪದ ಪರಿಚಯವನ್ನು ಮಾಡಿಕೊಡಬೇಕು. ತನ್ನ ಕಲ್ಪನೆಯ ವ್ಯಕ್ತಿಗಳು ರಂಗದಮೇಲೆ ಅವತರಿಸಬೇಕಾದರೆ, ಆ ಪಾತ್ರಗಳನ್ನು ವಹಿಸುವ ನಟರ ಸಹಾನುಭೂತಿ,

ಸಹಾಯ ಬಹಳ ಮುಖ್ಯವೆಂಬುದನ್ನು ನಿರ್ಮಾತೃ ಮರೆಯಬಾರದು. ತನ್ನ ಕಲ್ಪನೆಯ ಚಿತ್ರವನ್ನು ಪ್ರತಿಬಿಂಬಿಸಲು ನಟನು ಎಷ್ಟು ಪ್ರಯತ್ನಪಟ್ಟರೂ, ಅವನ ಸ್ವಭಾವ, ಕಲ್ಪನೆಗಳು ನಿರ್ಮಾತೃವಿನ ಚಿತ್ರವನ್ನು ಸ್ವಲ್ಪವಾದರೂ ಮಾರ್ಪಡಿಸುತ್ತವೆ—ಆದುದರಿಂದ ನಿರ್ಮಾತೃ ತನ್ನ ಅಭಿಪ್ರಾಯಗಳನ್ನು ನಟನೊಡನೆ ಚರ್ಚೆಮಾಡಿ, ಅವನ ಅಭಿಪ್ರಾಯಗಳನ್ನೂ ಪರಿಶೀಲಿಸಿ, ತನ್ನ ಕಲ್ಪನೆಯ ಚಿತ್ರವನ್ನು ತಿದ್ದಿಕೊಳ್ಳಬೇಕು.

ಈ ಸಂದರ್ಭದಲ್ಲಿ ನಿರ್ಮಾತೃವಿಗೂ ನಟನಿಗೂ ಇರಬೇಕಾದ ಸಂಬಂಧದ ವಿಷಯದಲ್ಲಿ ಚರ್ಚಾರ್ಹವಾದ ಒಂದು ಅಂಶವನ್ನು ಪರಿಶೀಲಿಸುವುದು ಅಗತ್ಯ. ಕೆಲವು ನಿರ್ಮಾತೃಗಳು ನಟರಿಗೆ ಅವರ ಪಾತ್ರಗಳ ನಿರೂಪಣೆಯಲ್ಲಿ ಯಾವ ಸ್ವಾತಂತ್ರ್ಯವನ್ನೂ ಕೊಡುವುದಿಲ್ಲ. ಬರಿಯ ಯಂತ್ರಗಳಂತೆ ತಾವು ಹೇಳುದುದನ್ನು ಚಾ-ಚೂ ತಪ್ಪದೆ ನಟರು ನಡೆಯಬೇಕು. ನಿಲುವು, ನಡೆ, ನುಡಿ, ಹಾವಭಾವಗಳು, ಮುಖಭಂಗಿ ಎಲ್ಲದರಲ್ಲೂ ನಟರಿಗೆ 'ಕವಾಯಿತು' ಮಾಡಿಸುತ್ತಾರೆ. ಇದು ನಿರ್ಮಾತೃವಿನ ದೃಷ್ಟಿಯಿಂದ ಸರಿಯೆಂದು ತೋರಬಹುದು. ತನ್ನ ಕಲ್ಪನೆಯ ಚಿತ್ರವನ್ನು ಅವನು ಸ್ವಲ್ಪವೂ ಮಾರ್ಪಡಿಸದಂತೆ ತೋರಿಸಲು ಪ್ರಯತ್ನಿಸುತ್ತಾನೆ. ಆದರೆ ಇದು ಸಾಧ್ಯವೂ ಅಲ್ಲ; ಸಾಧ್ಯವಾದರೂ ಸಾಧುವಲ್ಲ. ಏಕೆಂದರೆ ನಿರ್ಮಾತೃವಿನಂತೆಯೇ ನಟನೂ ಕಲಾವಿದ. ಅವನ ಕಲ್ಪನೆಗೂ ಪಾತ್ರನಿರೂಪಣೆಯಲ್ಲಿ ಅವಕಾಶವಿರಬೇಕು. ಇಲ್ಲದಿದ್ದರೆ ಅವನು ನಿರ್ಮಾತೃವಿನ ಕೈಗೊಂಬೆಯಾಗಿ, ಅವನ ಅಭಿನಯ ನಿರ್ಜೀವವಾಗುತ್ತದೆ. ಹೀಗೆಂದಮಾತ್ರಕ್ಕೇ, ನಟನು ಸಂಪೂರ್ಣ ಸ್ವತಂತ್ರನಾಗಲಾರ. ನಿರ್ಮಾತೃವಿನ ಕಲ್ಪನೆಯ ಚಿತ್ರದ ಸ್ವರೂಪನ್ನು ಅವನು ಬದಲಾಯಿಸಲಾಗದು. ತನ್ನ ಪ್ರಭಾವದಿಂದ ಅದಕ್ಕೆ ಮೆರಗುಕೊಟ್ಟು ಭವ್ಯಚಿತ್ರ ನಿರ್ಮಾಣಮಾಡುವ ಸ್ವಾತಂತ್ರ್ಯ ಅವನಿಗಿದೆ ಅಷ್ಟೆ.

## ನಾಟಕದ ಸಂಭಾಷಣೆ (Dialogue)

ನಾಟಕದ ಸಂಭಾಷಣೆಯನ್ನು ಅಭ್ಯಾಸ ಮಾಡುವ ರೀತಿಯಲ್ಲಿ ನಮ್ಮಲ್ಲಿ ಈಗ ಕಾಣಬರುವ ದೋಷಗಳನ್ನು ಕುರಿತು ಒಂದೆರಡು ಮಾತುಗಳನ್ನು ಹೇಳ ಬಯಸುತ್ತೇನೆ. ಸಾಮಾನ್ಯವಾಗಿ ಸಂಭಾಷಣೆಯನ್ನು ಅಭ್ಯಾಸಮಾಡುವಾಗ ತಾವು ಮಾತನಾಡುವ 'ಪಂಕ್ತಿ'ಗೆ ಮಾತ್ರ ಗಮನಕೊಟ್ಟು, ಇತರರ ಪಂಕ್ತಿಗಳ ಪರಿವೆಯೇ ಇಲ್ಲದಂತಿರುತ್ತದೆ. ಹೀಗೆ ಮಾಡುವುದರಿಂದ ಸಂಭಾಷಣೆಯ ಸತ್ವವೇ ನಾಶವಾಗುತ್ತದೆ. ನಮ್ಮ ರಂಗಭೂಮಿಯಮೇಲೆ ಈ ದೋಷದಿಂದ ಅಭಿನಯಕ್ಕಾಗುವ ಅನಾಹುತವನ್ನು ನಾವು ಅನೇಕ ಬಾರಿ ನೋಡಿದ್ದೇವೆ. ಒಬ್ಬ ನಟನು ಮಾತಾಡುತ್ತಿರುವಾಗ ಇತರ ನಟರು ಬೊಂಬೆಗಳಂತೆ ನಿಂತಿರುತ್ತಾರೆ. ಆಡುತ್ತಿರುವ ಮಾತುಗಳನ್ನು ಅವರು ಕೇಳುತ್ತಿರುವರೆಂಬ ಭಾವನೆಯೇ ಸಭಿಕರಿಗೆ ಬರುವುದಿಲ್ಲ. ಆ ಮಾತುಗಳಿಗೆ ಪ್ರತಿಕ್ರಿಯೆಯು ಅವರ ಮುಖಗಳಲ್ಲಾಗಲೀ, ಹಾವಭಾವಗಳಲ್ಲಾಗಲೀ ಸ್ವಲ್ಪವೂ ಕಾಣುವುದಿಲ್ಲ. ತಾವು ಮಾತನಾಡುವ ಸಮಯ ಬಂದಾಗ 'ಜೀವಂತ'ರಾಗುತ್ತಾರೆ. ಇಂತಹ ಅಭಿನಯ ತೀರಾ ಅಸ್ವಾಭಾವಿಕ. ಈ ದೋಷವು ಹೋಗಬೇಕಾದರೆ ಪ್ರತಿಯೊಬ್ಬ ನಟನಿಗೂ ನಾಟಕದ ಸಂಭಾಷಣೆಯ ಪೂರ್ಣ ಪರಿಚಯವಿರಬೇಕು. ಅಭ್ಯಾಸ ಕಾಲದಲ್ಲಿ ಬರಿಯ ಸಂಭಾಷಣೆಯನ್ನು ಕಲಿಯುವ ಪದ್ಧತಿ

ಯನ್ನು ಬಿಟ್ಟು ತನ್ನ ಪಾತ್ರದ ಹೃದಯವನ್ನು ಹೊಕ್ಕು ಪ್ರತಿಯೊಂದು ಸನ್ನಿವೇಶದಲ್ಲಿಯೂ ಆ ಪಾತ್ರದ ಪ್ರತಿಕ್ರಿಯೆಯನ್ನು ಗ್ರಹಿಸಿ, ಅಭಿನಯಿಸುವ ಶಕ್ತಿಯನ್ನು ಗಳಿಸಬೇಕು.

ಇನ್ನು ನಟನು ಕಲಿಯಬೇಕಾದ ಭಾಷಣ ಕಲೆಯ (the art of speaking) ವಿಷಯವಾಗಿ ವಿಶದವಾಗಿ ಹೇಳಲು ಇಲ್ಲಿ ಅವಕಾಶವಿಲ್ಲದಿದ್ದರೂ, ಕೆಲವು ಮುಖ್ಯ ಅಂಶ ಗಳನ್ನು ಸ್ಥೂಲವಾಗಿ ಪ್ರಸ್ತಾಪಿಸಬಹುದು. ನಟನಿಗೆ ಇರಬೇಕಾದ 'ಕಂಠಶ್ರೀ' ದೈವ ದತ್ತವಾದುದು. ಆದರೆ ಎಂತಹ ಕಂಠವಿದ್ದರೂ ಅದನ್ನು ರಂಗದಮೇಲೆ ಸರಿಯಾಗಿ ಉಪಯೋಗಿಸುವುದಕ್ಕೆ ಅವನು ತಕ್ಕ ಶಿಕ್ಷಣಪಡೆಯಬೇಕು—ದೊಡ್ಡ ರಂಗಮಂದಿರಗಳಲ್ಲಿ ನಮ್ಮ ಅಮೆಚೂರ್ ನಟರು ಪಡುವ ಪಾಡನ್ನು ನೋಡಿದರೆ ಈ ಶಿಕ್ಷಣದ ಆವಶ್ಯಕತೆ ಚೆನ್ನಾಗಿ ಅರಿವಾಗುತ್ತದೆ. ಗಟ್ಟಿಯಾಗಿ ಕೂಗಿದರೆ ಮಾತ್ರ ತಮ್ಮ ಮಾತುಗಳು ಎಲ್ಲರಿಗೂ ಕೇಳುತ್ತವೆಯೆಂಬ ಭಾವನೆ ಅನೇಕ ನಟರಿಗಿದೆ. ಹೀಗೆ ಮಾಡುವುದರಿಂದ ಅವರ ಅಭಿನಯ ಎಷ್ಟು ಕೆಡುತ್ತದೆಯೆಂಬುದು ನೋಡಿ, ಕೇಳಿ ಅನುಭವಿಸಿದವರಿಗೇ ಗೊತ್ತು. ಈ ಸದ್ದಿನ ಆಡಂಬರದಲ್ಲಿ ಆಡಿದ ಮಾತಿನ ಅರ್ಥ, ಗಾಂಭೀರ್ಯಗಳು ನಾಶವಾಗುತ್ತವೆ. ಸಂಗೀತಗಾರನು ತನ್ನ ಕಂಠವನ್ನು ಪಳಗಿಸಿ ಹದಮಾಡುವಂತೆ ನಟನೂ ತನ್ನ ಕಂಠವನ್ನು ಪಳಗಿಸಬೇಕು. ತನ್ನ ಉಚ್ಚಾರಣೆಯನ್ನು ಉತ್ತಮಪಡಿಸಿ ಆಡಿದ ಪ್ರತಿಯೊಂದು ಮಾತೂ ರಂಗಮಂದಿರದ ಎಲ್ಲ ಮೂಲೆಗಳಲ್ಲೂ ಸ್ಪಷ್ಟವಾಗಿ ಕೇಳುವ ಹಾಗೆ ಮಾತನಾಡುವ ಶಕ್ತಿಯನ್ನು ಗಳಿಸಬೇಕು. ಸನ್ನಿವೇಶ, ಮಾತಿನ ಹಿಂದಿನ ಭಾವಗಳಿಗೆ ತಕ್ಕಂತೆ ಧ್ವನಿ ಏರಬೇಕು, ಕುಗ್ಗಬೇಕು.

ಈ ಸಂದರ್ಭದಲ್ಲಿ ನಮ್ಮ ಅಮೆಚೂರ್ ನಾಟಕ ಪ್ರದರ್ಶನಗಳಲ್ಲಿ ಧ್ವನಿವರ್ಧಕ ಯಂತ್ರ (Micro-phone) ಗಳನ್ನು ಉಪಯೋಗಿಸುವ ಪದ್ಧತಿಯ ವಿಚಾರವಾಗಿ ಒಂದು ಮಾತು ಹೇಳಬಯಸುತ್ತೇನೆ. ಆಧುನಿಕ ವಿಜ್ಞಾನ ರಂಗಮಂಟಪಗಳ ಭವ್ಯನಿರ್ಮಾಣಕ್ಕೆ ಬೇಕಾದ ಅನೇಕ ಸಲಕರಣೆಗಳನ್ನು ಕೊಟ್ಟಿದೆ. ಅವುಗಳ ಜೊತೆಗೆ ಅಭಿನಯ ಪರಮ ಶತ್ರುವಾದ ಈ ಧ್ವನಿವರ್ಧಕ ಯಂತ್ರವನ್ನೂ ಕೊಟ್ಟಿದೆ. ಕೊಟ್ಟಿದೆ. ಕಲೆಯ ಈ ಯಂತ್ರದಿಂದಾಗುವ ಅನಾಹುತವನ್ನು ಹೆಚ್ಚು ವಿವರಿಸಬೇಕಾದ ಆವಶ್ಯಕತೆಯಿಲ್ಲ. ಮನುಷ್ಯನ ಕಂಠದಲ್ಲಿರುವ ಸೌಂದರ್ಯವನ್ನು ಸಂಪೂರ್ಣವಾಗಿ ನಾಶಮಾಡಬಲ್ಲ ಶಕ್ತಿ ಈ ಯಂತ್ರಕ್ಕಿದೆ—ಸಂಗೀತಗಾರರೂ, ನಟರೂ ಇದನ್ನು ಉಪಯೋಗಿಸುವುದರಿಂದ ತಮ್ಮ ಕಲೆಯ ಸ್ವರೂಪವನ್ನೇ ನಾಶಮಾಡುತ್ತಾರೆ. ಈ ಧ್ವನಿವರ್ಧಕ ಯಂತ್ರದ ಉಪಯೋಗದ ಆವಶ್ಯಕತೆಯಿಲ್ಲದಂತೆ ಮಾಡಬೇಕಾದರೆ ನಾಟಕ ಮಂದಿರಗಳು ಚಿಕ್ಕದಾಗಿರಬೇಕು, ಅವುಗಳ 'accoustics' ಚೆನ್ನಾಗಿರಬೇಕು; ಎಲ್ಲದಕ್ಕಿಂತ ಹೆಚ್ಚಾಗಿ ತಮ್ಮ ನಟರು ಕಂಠವನ್ನು ಸರಿಯಾಗಿ ಉಪಯೋಗಿಸಬೇಕು.

ಎರಡನೆಯದಾಗಿ, ಸಂಭಾಷಣೆಯ ಮಾತುಗಳನ್ನಾಡುವ ರೀತಿ. ಮಾತಿನ ವೇಗ, ಸ್ಪಷ್ಟ ಉಚ್ಚಾರಣೆ, ವಾಕ್ಯಗಳಲ್ಲಿ ಮುಖ್ಯವಾದ ಪದಗಳನ್ನು ಒತ್ತಿ ಹೇಳುವುದು, ಮಾತು ಗಳ ಅರ್ಥ, ಭಾವಪ್ರಕಾಶವಾಗುವಂತೆ ಆವಶ್ಯಕವಾದ ಕಡೆಗಳಲ್ಲಿ 'ವಿರಾಮ' (pause) ಕೊಡುವುದು, ಇವೇ ಮುಂತಾದ ಭಾಷಣ ಕಲೆಯ ಮುಖ್ಯ ಅಂಶಗಳಿಗೆ ನಟನು ಗಮನ ಕೊಡಬೇಕು. ನಾಟಕದ ಸಂಭಾಷಣೆಯಲ್ಲಿ ಪಾತ್ರಗಳು ಆಡಿದ ಮಾತುಗಳು, ಉಚ್ಚರಿ ಸಿದ ಪದಗಳ ಬಾಹ್ಯಾರ್ಥವಲ್ಲದೆ, ಸನ್ನಿವೇಶಕ್ಕನುಸಾರವಾಗಿ ಆಯಾ ಪಾತ್ರಗಳ ಭಾವನೆ

ಗಳನ್ನೂ, ಮನೋವ್ಯಾಪಾರಗಳನ್ನೂ ಸೂಚಿಸುತ್ತವೆ— ಇದನ್ನೇ ಸುಪ್ರಸಿದ್ಧ ನಾಟಕ ನಿರ್ಮಾತೃ Stanislavsky "Sub-text" ಎಂದು ವರ್ಣಿಸಿದ್ದಾನೆ. ಈ "Sub-text" ಸಭಿಕರಿಗೂ ಪೂರ್ಣವಾಗಿ ಮನದಟ್ಟಾಗಬೇಕಾದರೆ, ನಟರ ಮುಖಚರ್ಯೆ, ಹಾವ ಭಾವಗಳು, ಚಲನವಲನಗಳು, ಅವರ ಧ್ವನಿ, ಮಾತನಾಡುವ ರೀತಿ ಇವುಗಳ ಮೂಲಕ ಮಾತ್ರ ಸಾಧ್ಯ.

ರಂಗದಮೇಲೆ ನಟರ ಚಲನವಲನಗಳು, ಹಾವ ಭಾವಗಳು ಇತ್ಯಾದಿ (Movement, 'Action', Gestures etc.) ಅಭಿನಯಕ್ಕೆ ಸಂಬಂಧಿಸಿದ ಈ ವಿಷಯದಲ್ಲಿ ಹೆಚ್ಚು ಹೇಳುವುದು ಅನವಶ್ಯಕ. ನಟನು ತಾನು ಅಭಿನಯಿಸುವ ಪಾತ್ರವನ್ನು ತನ್ನ ಕಲ್ಪನೆಯ ಸಹಾಯದಿಂದ ನಿರ್ಮಿಸಿ, ರಂಗದಮೇಲೆ ಆ ಕಲ್ಪನೆಯ ವ್ಯಕ್ತಿಯಲ್ಲಿ ತನ್ನ ವ್ಯಕ್ತಿತ್ವವನ್ನು ಮುಳುಗಿಸಿ ಅಭಿನಯಿಸಬೇಕು. ಪಾತ್ರದ ಪ್ರಭಾವವನ್ನು, ಸನ್ನಿವೇಶವನ್ನೂ ಅರಿತು ತನ್ನನ್ನೇ ಮರೆತು ಅಭಿನಯಿಸಿದರೆ ಅವನ ಅಭಿನಯ ಸಹಜವಾಗಿರುತ್ತದೆ. ಆದರೆ ಈ ಶಕ್ತಿಯು ಎಲ್ಲ ನಟರಿಗೂ ಇರುವುದಿಲ್ಲ. ರಂಗದಮೇಲೆ ನಟನಿಗೆ, "ನಾನು ನಟ, ಇಂತಹ ಪಾತ್ರವನ್ನುವಹಿಸುತ್ತಿದ್ದೇನೆ. ಈಗ ನಾನು ಹೀಗೆ ನಿಲ್ಲಬೇಕು, ಹೀಗೆ ಚಲಿಸಬೇಕು, ನನ್ನ ಕೈಗಳನ್ನು ಹೀಗೆ ಚಲಿಸಬೇಕು" ಎಂಬ ಯೋಚನೆ ಬಂದರೆ, ನಟನು ಮಾಡುವುದೆಲ್ಲಾ ತಪ್ಪಾಗುತ್ತದೆ ಅಥವಾ ಕೃತಕವಾಗುತ್ತದೆ. ಇಂತಹ ಸಮಯದಲ್ಲಿ ನಿರ್ಮಾತೃ ನಟನಿಗಿಲ್ಲದ ಕಲ್ಪನೆಯನ್ನು ತಾನು ಅವನಿಗೆ ಕೊಟ್ಟು, ಸ್ವಾಭಾವಿಕವಾದ ನಡೆ, ನುಡಿ, ಓಡಾಟ ಇತ್ಯಾದಿಗಳನ್ನು ಅಭ್ಯಾಸ ಮಾಡಿಸಬೇಕು.

ಇದುವರೆಗೆ ಅಭಿನಯ ಕಲೆಯನ್ನು ಅಭ್ಯಾಸ ಮಾಡಲು ಏನು ಮಾಡಬೇಕೆಂದು ಹೇಳಿದುದಾಯಿತು. ಈಗ ಅವನು ಏನು ಮಾಡಬಾರದೆಂಬ ವಿಷಯವಾಗಿ ಸ್ವಲ್ಪ ಹೇಳಬೇಕೆನಿಸುತ್ತದೆ. ನಾಟಕ, ಚಲನಚಿತ್ರಗಳಲ್ಲಿ ನಟರ ಅಭಿನಯವನ್ನು ನೋಡಿದಾಗ ಸಾಮಾನ್ಯವಾಗಿ ಕಾಣುವ ದೋಷವೆಂದರೆ ಕೆಲವು ಭಾವಗಳನ್ನು ಪ್ರದರ್ಶಿಸುವಾಗ ಎಲ್ಲಾ ನಟರೂ ಕೆಲವು ಸಾಂಪ್ರದಾಯಿಕ ವಿಧಾನಗಳನ್ನು ಉಪಯೋಗಿಸುತ್ತಾರೆ. ಇವನ್ನೇ Stanislavsky "acting cliches" ಎಂದು ಕರೆದಿದ್ದಾನೆ. ಉದಾಹರಣೆಗೆ: ಮನಸ್ಸಿನ ಉದ್ವೇಗವನ್ನು ಸೂಚಿಸಲು ಎದೆಯ ಮೇಲೆ ಕೈ ಇಟ್ಟುಕೊಳ್ಳುವುದು; ಕೋಪ ಪ್ರದರ್ಶಿಸುವಾಗ ತುಟಿ ಕಚ್ಚಿಕೊಳ್ಳುವುದು, ಮುಷ್ಟಿ ಬಿಗಿ ಹಿಡಿಯುವುದು; ದುಃಖ ಪ್ರದರ್ಶಿಸುವಾಗ ಎದೆ ಹೊಡೆದುಕೊಳ್ಳುವುದು, ಅಥವಾ ದುಃಖ ಇನ್ನೂ ಪ್ರಬಲವಾದರೆ ತಲೆ ಚಚ್ಚಿಕೊಳ್ಳುವುದು, ತಲೆಕೂದಲನ್ನು ಕೀಳುವುದು; ಯೋಚನಾಪರವಶನಾದಾಗ ಶತಪಥ ತಿರುಗುವುದು ಇತ್ಯಾದಿ ಎಂದರೆ ಈ ವಿಧಾನಗಳು ಆಯಾ ಭಾವಗಳನ್ನು ಸೂಚಿಸುವುದಿಲ್ಲವೆಂದಲ್ಲ. ಆದರೆ ಎಲ್ಲರೂ, ಎಲ್ಲಾ ಕಾಲದಲ್ಲಿಯೂ ತಮ್ಮ ಭಾವಗಳನ್ನು ಒಂದೇ ರೀತಿಯಲ್ಲಿ ಪ್ರಕಟಿಸುವುದಿಲ್ಲ. ಅವರವರ ಸ್ವಭಾವದ ಪ್ರಕಾರ ವಿವಿಧ ರೀತಿಯಲ್ಲಿ ತಮ್ಮ ಭಾವಗಳನ್ನು ವ್ಯಕ್ತಪಡಿಸುತ್ತಾರೆ. ಈ ವಿಧಾನಗಳು ಸಾಂಪ್ರದಾಯಿಕವಾಗಿಹೋಗಿರುವುದರಿಂದ ಶಕ್ತಿಹೀನವಾಗಿವೆ; ಇವುಗಳನ್ನು ಉಪಯೋಗಿಸುವುದರಿಂದ ಅಭಿನಯವು ಕೃತಕವಾಗಿ, ಸತ್ವಹೀನವಾಗುತ್ತದೆ. ಈ ವಿಧಾನಗಳನ್ನು ನಟರು ಉಪಯೋಗಿಸದಿರುವುದು ಕ್ಷೇಮ.

ಇನ್ನು ರಂಗದ ಮೇಲೆ ಓಡಾಟ, ನಮ್ಮ ನಾಟಕಗಳಲ್ಲಿಯೂ, ಚಲನ ಚಿತ್ರಗಳಲ್ಲಿಯೂ ನನಗೆ ಬಹಳ ಹಾಸ್ಯಾಸ್ಪದವಾಗಿ ತೋರುವ ವಿಷಯವೇನೆಂದರೆ, ನಟರ ಅರ್ಥ

ರಹಿತ ಓಡಾಟ. ಈ ವೈಪರೀತ್ಯದ ದೃಷ್ಟಾಂತವನ್ನು ಕೊಡಬಹುದು. ಪ್ರಣಯಿಗಳ ಸಮಾಗಮವನ್ನು ತೋರಿಸುವ ದೃಶ್ಯಗಳಲ್ಲಿ, ಪ್ರೇಯಸಿಯು ತನ್ನ ಆನಂದವನ್ನು ವ್ಯಕ್ತಪಡಿಸಬೇಕಾದರೆ, ಮರದಿಂದ ಲತೆಗೆ, ಲತೆಯಿಂದ ಮರಕ್ಕೆ ಹಾರುತ್ತಿರಬೇಕು. ಪ್ರಿಯನು ಅವಳನ್ನು ಅಟ್ಟಿಸಿಕೊಂಡು ಓಡಬೇಕು. ಕೆಲವು ಪ್ರಣಯಿಗಳು ತಮ್ಮ ಆನಂದವನ್ನು ಹೇಗೆ ವ್ಯಕ್ತಪಡಿಸುವರೋ ಏನೋ! ಆದರೆ ನಾಟಕದ ಪ್ರಣಯಿಗಳೆಲ್ಲರೂ ಹೀಗೆಯೇ ಮಾಡಬೇಕೆ. ಹೀಗೆಯೇ ಅರ್ಥಹೀನ ಓಡಾಟದ ಇತರ ನಿದರ್ಶನಗಳನ್ನೂ ಕೊಡಬಹುದು. ಇನ್ನೊಂದು ದೋಷವೆಂದರೆ, ನಟರು ನಿಂತಲ್ಲಿ ಕೂತಲ್ಲಿ ಬೇರೂರಿಬಿಡುವುದು. ರಂಗದ ಮೇಲೆ ನಟನು ಯಾವ ಕ್ರಿಯೆಯನ್ನು ಮಾಡಿದರೂ ಅದಕ್ಕೆ ಅರ್ಥವಿರಬೇಕು, ಔಚಿತ್ಯ ವಿರಬೇಕು. ಅವನು ಓಡಾಡಿದರೆ, ನಿಂತರೆ, ಕೂತರೆ, ಎಲ್ಲದಕ್ಕೂ ಒಂದು ಕಾರಣ ವಿರಬೇಕು.

## ರಂಗದಮೇಲೆ ನಟರ ಸಂಯೋಜನೆ (Grouping)

ನಾಟಕದ ಪ್ರತಿಯೊಂದು ದೃಶ್ಯವೂ ಕಥೆಯ ಒಂದು ಸನ್ನಿವೇಶವನ್ನು ಚಿತ್ರಿಸುತ್ತದೆ. ಆ ಸನ್ನಿವೇಶದಲ್ಲಿ ಪಾತ್ರಗಳ ಕ್ರಿಯೆ, ಪ್ರತಿಕ್ರಿಯೆಗಳನ್ನು ಸೂಚಿಸುವ ವಿಧಾನಗಳಲ್ಲಿ ರಂಗದಮೇಲೆ ನಟರನ್ನು ಸಂಯೋಜಿಸುವ (Grouping) ವಿಧಾನ ಬಹಳ ಮುಖ್ಯವಾದುದು. ನಾನು ನೋಡಿದ ಮಟ್ಟಿಗೆ ಅಮೇಚೂರ್ ನಾಟಕಗಳಲ್ಲಿ ನಿರ್ಮಾತೃಗಳು ಈ ಅಂಶಕ್ಕೆ ಹೆಚ್ಚು ಗಮನ ಕೊಟ್ಟಂತೆ ಕಾಣುವುದಿಲ್ಲ. ರಂಗದಮೇಲೆ ಸಭಿಕರ ದೃಷ್ಟಿಯಲ್ಲಿ ಕೆಲವು ಸ್ಥಾನಗಳು ಮುಖ್ಯವಾಗಿರುತ್ತವೆ. ನಿರ್ಮಾತೃ ಈ ಅಂಶವನ್ನು ಮನಸ್ಸಿನಲ್ಲಿಟ್ಟುಕೊಂಡು ಆಯಾ ದೃಶ್ಯಗಳಲ್ಲಿ ಸನ್ನಿವೇಶಗಳನ್ನರಿತು, ಪ್ರಮುಖ ಪಾತ್ರ ವಹಿಸುವ ನಟರು ಆ ಸ್ಥಾನಗಳಲ್ಲಿರುವಂತೆ ಮಾಡಬೇಕು. ಇತರ ನಟರು ಅವರವರ ಪ್ರಾಮುಖ್ಯತೆಗೆ ತಕ್ಕಂತೆ ಅವರ ಸುತ್ತಲೂ 'Group' ಆಗಿರಬೇಕು. ಸನ್ನಿವೇಶ ಬದಲಾಯಿಸಿದಂತೆ, ಈ ಸಂವಿಧಾನವೂ ಬದಲಾಯಿಸಬೇಕು. ಆದರೆ ಈ ಬದಲಾವಣೆಗಳು ಸ್ವಾಭಾವಿಕವಾಗಿ ಆಗಬೇಕು. ಇದು ಬಹಳ ಕ್ಲಿಷ್ಟ ಸಮಸ್ಯೆ. ಇದನ್ನು ಸರಿಯಾಗಿ ನಿರ್ವಹಿಸಿದ ಹೊರತು ನಾಟಕ ಯಶಸ್ವಿಯಾಗುವುದಿಲ್ಲ.

ನಿರ್ಮಾತೃ ತನ್ನ ಕೆಲಸವನ್ನು ಯಶಸ್ವಿಯಾಗಿ ನಿರ್ವಹಿಸಬೇಕಾರೆ, ನಟರು ಅವನೊಡನೆ ಎಲ್ಲಾ ವಿಧದಲ್ಲಿಯೂ ಸಂಪೂರ್ಣವಾಗಿ ಸಹಕರಿಸಬೇಕಾದ ಆವಶ್ಯಕತೆಯನ್ನು ಅಮೆಚೂರ್ ರಂಗಭೂಮಿಯ ಅನುಭವವುಳ್ಳವರೆಲ್ಲರೂ ತಿಳಿದಿದ್ದಾರೆ. ಅಭಿನಯ ಕಲೆಯು ಇತರ ಲಲಿತ ಕಲೆಗಳಂತೆಯೇ ಬಹಳ ಅಭ್ಯಾಸದಿಂದಲೇ ಕೈವಶವಾಗಬಲ್ಲದು. ಈ ಅಭ್ಯಾಸ ವಿಲ್ಲದಿರುವುದೇ ನಮ್ಮ ನಾಟಕಗಳ ದೊಡ್ಡ ಕೊರತೆಯಾಗಿದೆ.

## ವೇಷಧಾರಣೆ (Make-up)

ನಟರಿಗೆ ಸಂಬಂಧಪಟ್ಟಂತೆ ಇನ್ನೊಂದು ಮುಖ್ಯ ಅಂಶವೆಂದರೆ ಅವರ ವೇಷ ಧಾರಣೆ (make-up) ಈ ವಿಚಾರದಲ್ಲಿ ನಾವು ಎಷ್ಟು ಹಿಂದುಳಿದಿದ್ದೇವೆಂಬುದನ್ನು ನಮ್ಮ ನಾಟಕಗಳನ್ನು ನೋಡಿದವರೆಲ್ಲರೂ ಬಲ್ಲರು. ನಿರ್ಮಾತೃವು ನಾಟಕದ ಪಾತ್ರಗಳಿಗೆ ರಂಗದಮೇಲೆ ರೂಪಕೊಡುವ ಪ್ರಯತ್ನದಲ್ಲಿ ವರ್ಣಪರಿಷ್ಕಾರ 'make-up' ಒಂದು

ಮುಖ್ಯವಾದ ಅಂಗ. ಪಾತ್ರವನ್ನು ವಹಿಸುವ ನಟನು ತನ್ನ ಕಲ್ಪನೆಯು ಚಿತ್ರಿಸಿದ ವ್ಯಕ್ತಿಯಾಗಿ, ಮಾರ್ಪಾಡಾಗಬೇಕಾದರೆ ಆ ಚಿತ್ರವನ್ನು ನಿರ್ಮಿಸಬಲ್ಲ ಶಿಲ್ಪಿಯೂ ಆಗಬೇಕು. ಪಾಶ್ಚಾತ್ಯ ದೇಶಗಳಲ್ಲಿ ಪ್ರವೀಣರಾದ ಕಲಾವಿದರು ನಟರ ಈ ಕಾರ್ಯಕ್ಕೆ ನೆರವಾಗುತ್ತಾರೆ. ಆದರೆ ನಟರೇ ಈ ಕಾರ್ಯವನ್ನು ನಿರ್ವಹಿಸುವ ಶಕ್ತಿಯನ್ನು ಗಳಿಸಿದರೆ ಉತ್ತಮ.

'Make up' ವಿಷಯ ಪ್ರಸ್ತಾಪಿಸುವಾಗ ನಟರು ಉಪಯೋಗಿಸಬೇಕಾದ ಉಡಿಗೆ ತೊಡಿಗೆಗಳ ವಿಚಾರವಾಗಿ ಒಂದು ಮಾತನ್ನು ಹೇಳಬೇಕಾಗಿದೆ. ನಮ್ಮ ಈಗಿನ ಜೀವನವನ್ನು ಚಿತ್ರಿಸುವ ಸಾಮಾಜಿಕ ನಾಟಕಗಳನ್ನಾಡುವಾಗ ಈ ಸಮಸ್ಯೆ ಅಷ್ಟು ಕಠಿನವಾಗುವುದಿಲ್ಲ. ಆದರೆ ಐತಿಹಾಸಿಕ, ಪೌರಾಣಿಕ ನಾಟಕಗಳನ್ನಾಡುವಾಗ ಈ ವಿಷಯದಲ್ಲಿ ನಾವು ಬಹಳ ಜಾಗರೂಕರಾಗಿರಬೇಕು. ನಾಟಕದ ಕಥೆಯ ಕಾಲದೇಶಗಳನ್ನರಿತು ಅವುಗಳಿಗನುಸಾರವಾಗಿ ನಟರ ವೇಷಭೂಷಣಗಳನ್ನು ಸಿದ್ಧಪಡಿಸಬೇಕು.

## ರಂಗಭೂಮಿಯ ಸಜ್ಜಿಕೆ (Setting)

ಇದುವರೆಗೆ ನಾಟಕ ಪ್ರಯೋಗಕ್ಕೆ ಅತಿ ಮುಖ್ಯವಾದ ನಟರನ್ನು ಕುರಿತು ಚರ್ಚಿಸಿದ್ದಾಯಿತು. ನಿರ್ಮಾತೃವಿನ ಕಲಾಸೃಷ್ಟಿಗೆ ಅನುವಾಗುವ ಇತರ ಅಂಶಗಳನ್ನು ಸ್ಥೂಲವಾಗಿ ವಿಚಾರಮಾಡೋಣ. ನಿರ್ಮಾತೃ ಹೇಗೆ ತನ್ನ ಕಲ್ಪನೆಯ ಸಹಾಯದಿಂದ ನಾಟಕದ ಪಾತ್ರಗಳನ್ನು ನಿರ್ಮಿಸುತ್ತಾನೆಯೋ ಹಾಗೆಯೇ ಈ ಪಾತ್ರಗಳು ಜೀವಿಸುವ ಪ್ರಪಂಚದ ಚಿತ್ರವನ್ನು ಕಲ್ಪಿಸಿಕೊಂಡು, ಆ ಚಿತ್ರವನ್ನು ರಂಗದಮೇಲೆ ನಿರ್ಮಿಸಬೇಕು. ಸದ್ಯ ಅದನ್ನು ನಾವು ಮಾಡುವ ರೀತಿ ಹಾಸ್ಯಾಸ್ಪದವಾಗಿದೆ. ಯಾವ ನಾಟಕವೇ ಆಗಲಿ, ನಮ್ಮ ರಂಗಮಂಟಪಗಳಲ್ಲಿರುವ 'ಪರದೆ' ಗಳನ್ನೇ ಉಪಯೋಗಿಸಬೇಕು. ಕಾಡಿನ ಪರದೆ, ದರ್ಬಾರ್ ಪರದೆ, ಬೀದಿಯ ಪರದೆ, ಉದ್ಯಾನದ ಪರದೆ, ಹೀಗೆ ಕಾಲದೇಶಗಳ ವಿವೇಚನೆಯಿಲ್ಲದೆ, ಎಲ್ಲ ಸನ್ನಿವೇಶಗಳಲ್ಲಿಯೂ ಅದೇ ಪರದೆಗಳೇ ನಾಟಕದ ಕಥೆಯ ಆವರಣವನ್ನೂ ಸೂಚಿಸಬೇಕು ಇಲ್ಲವೇ ಚಿತ್ರಗಳಿಲ್ಲದ ಬಣ್ಣದ ಪರದೆಗಳನ್ನೋ, 'Flats' ನ್ನೋ ಉಪಯೋಗಿಸುತ್ತೇವೆ. ನಾಟಕವು ಪೂರ್ಣವಾಗಿ ಯಶಸ್ವಿಯಾಗಬೇಕಾದರೆ ನಾವು ದೃಶ್ಯಗಳ ಹಿನ್ನೆಲೆಯ ನಿರ್ಮಾಣಕ್ಕೆ ಹೆಚ್ಚಾಗಿ ಗಮನ ಕೊಡಬೇಕು. ಕಾಲವ್ಯಯವಾಗದಂತೆ ದೃಶ್ಯಗಳ ಜೋಡಣೆಯಾಗಬೇಕಾದರೆ ಆಧುನಿಕ ರೀತಿಯಲ್ಲಿ ರಂಗಮಂಟಪದ ವ್ಯವಸ್ಥೆಯಾಗಬೇಕು. 'Revolving Stage' ಮುಂತಾದ ಯಾಂತ್ರಿಕ ಸಾಧನಗಳು ಇರಬೇಕು. ಪ್ರತಿಯೊಂದು ನಾಟಕಕ್ಕೂ ಅದಕ್ಕೆ ಬೇಕಾದ ಹಿನ್ನೆಲೆಯ ನಿರ್ಮಾಣವನ್ನು ಮಾಡಬೇಕು. ಇವುಗಳ ಸಹಾಯದಿಂದ ನಿರ್ಮಾತೃ ತನ್ನ ಕಲ್ಪನೆಯ ಚಿತ್ರವನ್ನು ರಂಗದಮೇಲೆ ನಿರ್ಮಿಸಬೇಕು. ಇದು ಸಾಧ್ಯವಾಗಬೇಕಾದರೆ ಬಹಳ ಖರ್ಚು, ಶ್ರಮ ನಿಜ. ಆದರೆ ಇದು ಆದ ಹೊರತು ನಾಟಕ ಪ್ರದರ್ಶನ ಯಶಸ್ವಿಯಾಗಲಾರದು.

## ರಂಗಮಂಟಪದ ದೀಪಗಳ ವ್ಯವಸ್ಥೆ (Lighting)

ಈ ವಿಷಯಕ್ಕೆ ಸಂಬಂಧಿಸಿದಂತೆ ರಂಗಮಂಟಪದ ದೀಪಗಳ ವ್ಯವಸ್ಥೆಯ ವಿಷಯವಾಗಿ ಒಂದೆರಡು ಮಾತು ಅವಶ್ಯಕ. ಚಲನ ಚಿತ್ರಗಳ ಪ್ರಭಾವದಿಂದ ನಾಟಕಗಳಲ್ಲಿಯೂ ದೀಪಗಳ ವ್ಯವಸ್ಥೆಯಲ್ಲಿ ಪ್ರಗತಿಯು ತಕ್ಕಮಟ್ಟಿಗೆ ಕಾಣಬರುತ್ತಿದೆ. ಮೊದಲಿ

ನಂತೆ ದೀಪಗಳನ್ನು ರಂಗದ ಸುತ್ತಲೂ ಜೋಡಿಸಿ ಒಂದೇ ಸಮನಾಗಿ ರಂಗವನ್ನು ಬೆಳಗಿಸುವ ಮಾರ್ಗವನ್ನು ಬಿಟ್ಟು ಪ್ರತಿಯೊಂದು ದೃಶ್ಯದಲ್ಲಿಯೂ ಸನ್ನಿವೇಶಕ್ಕೆ ತಕ್ಕಂತೆ ಬೆಳಕು ನೆರಳುಗಳನ್ನು ನಿರ್ಮಿಸಲು 'Flood' ಮತ್ತು 'Spot' ದೀಪಗಳನ್ನು ಉಪಯೋಗಿಸುವ ಅಭ್ಯಾಸ ನಮ್ಮಲ್ಲಿ ಬರುತ್ತಿದೆ. ಇದು ನಾಟಕ ಕಲೆಯ ಪ್ರಗತಿಗೆ ಶುಭಸೂಚನೆ. ಆದರೆ ಈ ಸಾಧನವನ್ನು ಈಗ ಉಪಯೋಗಿಸುತ್ತಿರುವ ರೀತಿಯಲ್ಲಿ ಚಮತ್ಕಾರ ಕಾಣುತ್ತಿದೆಯೇ ಹೊರತು ಕಲಾಕೌಶಲವು ಕಾಣುತ್ತಿಲ್ಲ. 'Trick lighting'ಗೆ ನಮ್ಮ ಚಲನ ಚಿತ್ರ ನಿರ್ಮಾತೃಗಳೂ, ಅವರನ್ನನುಸರಿಸುತ್ತಿರುವ ನಾಟಕ ನಿರ್ಮಾತೃಗಳೂ ಮನಸೋತಿದ್ದಾರೆ. ಪ್ರತಿಭಾವಂತನಾದ ನಿರ್ಮಾತೃವಿಗೆ ದೀಪಗಳು ಬಹಳ ಮುಖ್ಯವಾದ ಸಾಧನ. ಅವುಗಳ ಸಹಾಯದಿಂದ ತಾನು ನಿರ್ಮಿಸಿದ ಮಾಯಾ ಪ್ರಪಂಚಕ್ಕೆ ನೈಜತೆಯನ್ನು ಕೊಡಲು ಬಹಳ ಸಹಾಯವಾಗುತ್ತದೆ. ಅಷ್ಟೇ ಅಲ್ಲ ವಿವಿಧ ಸನ್ನಿವೇಶಗಳ, ದೃಶ್ಯಗಳ ವಾತಾವರಣ (atmosphere) ವನ್ನೂ ದೀಪಗಳ ಸಹಾಯದಿಂದ ಸೂಚಿಸಬಹುದು. ಈ ವಿಷಯದಲ್ಲಿ ಪಾಶ್ಚಾತ್ಯ ದೇಶಗಳು ಸಾಧಿಸಿರುವ ಪ್ರಗತಿಯನ್ನು ನೋಡಿದರೆ, ಈ ದಾರಿಯಲ್ಲಿ ನಾವು ಮೊದಲ ಹೆಜ್ಜೆಯನ್ನು ಮಾತ್ರ ಇಟ್ಟಿದ್ದೇವೆಂದು ಹೇಳಬಹುದು. ಕಲಿಯಬೇಕಾದ ವಿಷಯಗಳೂ ಮಾಡಬೇಕಾದ ಕೆಲಸ, ಬೇಕಾದಷ್ಟಿವೆ.

ಈ ಯಂತ್ರಯುಗವು ನಾಟಕಕಲೆಗೆ ವಿದ್ಯುದ್ದೀಪಗಳನ್ನಲ್ಲದೆ ಇನ್ನೂ ಅನೇಕ ಸಾಧನಗಳನ್ನು ಒದಗಿಸಿದೆ. ಗುಡುಗು, ಮಿಂಚು, ಮಳೆ, ಗಾಳಿ, ಬಿಸಿಲು, ಬೆಳದಿಂಗಳು, ಹಿನ್ನೆಲೆ ನಾನಾ ಶಬ್ದಗಳು, ಇವೇ ಮುಂತಾದ ಹಿನ್ನೆಲೆಯ effectsನ್ನು ನಿರ್ಮಿಸುವ ಅನೇಕ ಉತ್ತಮ ಸಾಧನಗಳನ್ನು ಸೂಕ್ತವಾಗಿ ಉಪಯೋಗಿಸಿಕೊಳ್ಳಲು ನಿರ್ಮಾತೃವಿಗೆ ಅವಕಾಶವಿದೆ. ಇವೆಲ್ಲದರಿಂದ ನಮ್ಮ ನಾಟಕ ಪ್ರದರ್ಶನ ಬೆಳೆದು ಬೆಳಗಲಿ ಎಂದು ನನ್ನ ಹಾರೈಕೆ.

ಹೀಗೆ ನಾಟಕ ನಿರ್ಮಾಣಕ್ಕೆ ಬೇಕಾದ ಸಲಕರಣೆಗಳನ್ನೆಲ್ಲಾ ಉಪಯೋಗಿಸಿಕೊಂಡು ನಿರ್ಮಾತೃ ತನ್ನ ಕಲ್ಪನೆಯ ಚಿತ್ರವನ್ನು ರಂಗದಮೇಲೆ ಯಶಸ್ವಿಯಾಗಿ ನಿರ್ಮಿಸಬೇಕಾದರೆ ಬಹಳ ಶ್ರಮಪಡಬೇಕು. ನಾಟಕ ನಿರ್ಮಾಣ ಕಾರ್ಯದ ಎಲ್ಲಾ ವಿಷಯಗಳನ್ನೂ ಎಚ್ಚರಿಕೆಯಿಂದ ಮೊದಲೇ ಯೋಚಿಸಿ ತನ್ನ ಯೋಜನೆಯನ್ನು ಸಿದ್ಧಮಾಡಬೇಕು. ನಾಟಕದ ವಸ್ತು, ಪಾತ್ರಗಳ ರೂಪರೇಖೆಗಳು, ಸಂಭಾಷಣೆಯನ್ನು ಮಾತನಾಡುವ ರೀತಿ, ರಂಗದಮೇಲೆ ನಟರ ಅಭಿನಯ, ಚಲನವಲನಗಳು, ಸಂಯೋಜನೆ ಈ ಎಲ್ಲ ಅಂಶಗಳನ್ನೂ ಮೊದಲೇ ನಿರ್ಧರಿಸಿ ನಟರಿಗೆ ಸೂಕ್ತ ಶಿಕ್ಷಣ ಕೊಡಬೇಕು. ಈ ಕಾರ್ಯವನ್ನು ನಿರ್ಮಾತೃ ಕೆಲವುವೇಳೆ 'ನಿರ್ದೇಶಕ'ನಿಗೆ ವಹಿಸುತ್ತಾನೆ. ರಂಗಮಂಟಪದ ಸಜ್ಜಿಕೆಯ ಒಂದು ಯೋಜನೆಯನ್ನು ತಯಾರಿಸಬೇಕು. ಹಾಗೆಯೇ ದೀಪಗಳ ವ್ಯವಸ್ಥೆ, ನಟರ ಉಡಿಗೆ ತೊಡಿಗೆಗಳು, ಹಿನ್ನೆಲೆಯ 'effects' ಇವುಗಳನ್ನೆಲ್ಲಾ ವ್ಯವಸ್ಥೆ ಮಾಡಿ ಯೋಜನೆಗಳನ್ನು ಸಿದ್ಧಮಾಡಬೇಕು. ಇವುಗಳ ಪ್ರಯೋಗದ ಜವಾಬ್ದಾರಿಯನ್ನು ನಿರ್ಮಾತೃ 'Stage Manager' ಗೆ ವಹಿಸಬೇಕು. ನಿರ್ಮಾತೃವಿನ ಕೆಲಸ ನಾಟಕದ ಕನಸಿನ ಚಿತ್ರವನ್ನು ತಯಾರಿಸುವುದು; 'Stage Manager'ನ ಕೆಲಸ ಆ ಕೆಲಸವನ್ನು ರಂಗದಮೇಲೆ ನನಸಾಗಿ ಮಾಡುವುದು. ಇವರಿಬ್ಬರ ಶ್ರಮದ ಸಾಧನೆಯೇ ಸಭಿಕರು ರಂಗದಮೇಲೆ ನೋಡುವ ನಾಟಕ.

---



# 38ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ರಾಯಚೂರು

## ನಾಟಕ ಗೋಷ್ಠಿಯಲ್ಲಿ ಶ್ರೀ ಎಂ. ಎಸ್. ಚೌಡಪ್ಪನವರ ಭಾಷಣ

26-12-1955

### ನಮ್ಮ ರಂಗಭೂಮಿ

ನಮ್ಮ ರಂಗಸ್ಥಳ ಅಥವಾ ರಂಗಭೂಮಿಯೆಂದೊಡನೆಯೇ, ಅದು ಪ್ರಾಚೀನವಾದುದೆಂದೂ, ಮರಾಠಿ, ತೆಲುಗು, ತಮಿಳು ರಂಗಭೂಮಿಗಳ ನವನಿರ್ಮಾಣಕ್ಕೆ ಪ್ರೇರಕವೆಂದೂ ಹೇಳುವುದು ಸಾಮಾನ್ಯ ರೂಢಿಯಾಗಿದೆ. ನಮ್ಮ ರಂಗಭೂಮಿಯನ್ನು ಕುರಿತ ಭಾಷಣಗಳಲ್ಲಿ ಈ ಅಂಶವನ್ನು ವಿಸ್ತರಿಸಿ ಹೇಳುವುದೂ ಪದ್ಧತಿಯಾಗಿದೆ. ಆದರೆ ನಾನು ಈಗ ಈ ಇತಿಹಾಸಾಂಶಗಳ ಚರ್ಚೆ ವಿಮರ್ಶೆಗಳಿಗೆ ತೊಡಗುವುದಿಲ್ಲ. ಕಾರಣ – ನಾನು ವಿಸ್ತರಿಸಲಿರುವ ವಿಚಾರಗಳಿಗೆ ಅವುಗಳ ವಿವರಣೆ ಅಷ್ಟಾಗಿ ಅವಶ್ಯಕವಿಲ್ಲ.

ರಂಗಭೂಮಿ – ಅದೊಂದು ಸಾಂಕೇತಿಕ ಪದ, ರಂಗಭೂಮಿಯೆಂಬ ಮಾತಿನ ಅರ್ಥ ನಟರು ಆಡುವ ಅಟ್ಟಣೆ ಅಥವಾ ಆ ಅಟ್ಟಣೆಯನ್ನೊಳಗೊಂಡ ನಾಟಕ ಗೃಹ ಎಂದು ಭಾವಿಸಿದರೆ ತಪ್ಪು. ಅದರ ಅರ್ಥವ್ಯಾಪ್ತಿ ಇನ್ನೂ ವಿಸ್ತಾರವಾದದ್ದು; – ನಾಟಕ, ನಾಟಕಕಾರ, ನಟನಟಿಯರು, ಪ್ರಯೋಕ್ತೃ, ಸಂಗೀತ ವಾದ್ಯಗಾರರು, ಪ್ರಸಾಧನ ಪಟುಗಳು, ಆಹಾರ್ಯಕ, ಕೊನೆಯದಾಗಿ ಆದರೆ ಬಹು ಮುಖ್ಯವಾಗಿ ಸಹೃದಯರಾದ ಪ್ರೇಕ್ಷಕರು – ಈ ಎಲ್ಲ ಅಂಶಗಳ ಸಂಕೇತ 'ರಂಗಭೂಮಿ' ಎಂಬ ಮಾತು. ಈ ಅಂಶಗಳಲ್ಲಿ ಯಾವುದಕ್ಕೆ ಕೊರತೆಯಿದ್ದರೂ ಅಷ್ಟರಮಟ್ಟಿಗೆ 'ರಂಗಭೂಮಿ' ಊನವಾಗುತ್ತದೆ. ಈ ಮಾತನ್ನು ನೆನಪಿನಲ್ಲಿಟ್ಟುಕೊಂಡು – ಸುಪುಷ್ಟವಾದ, ಸರ್ವಾಂಗಸುಂದರವಾದ ರಂಗಭೂಮಿ ನಮ್ಮಲ್ಲಿದೆಯೆ? ಇಲ್ಲದಿದ್ದರೆ ಏಕೆ ಇಲ್ಲವಾಯಿತು? ಅಂಥ ರಂಗಭೂಮಿಯನ್ನು ನಾವು ಕೈಗೂಡಿಸಿಕೊಳ್ಳುವುದು ಸಾಧ್ಯವೆ? ಸಾಧ್ಯವಾದರೆ ಆ ಬಗ್ಗೆ ನಾವು ಅತ್ಯವಶ್ಯವಾಗಿ ಕೈಗೊಳ್ಳಬೇಕಾದ ಕಾರ್ಯಕ್ರಮಗಳು ಯಾವುವು? ಆ ಕಾರ್ಯಕ್ರಮಗಳನ್ನು ಯಶಸ್ವಿಯಾಗಿ ಮುಂದೊತ್ತಲು ನಮಗಿರುವ ಸಾಧನಸಂಪತ್ತಿ ಎಂಥದು? ಆ ಸಾಧನಸಂಪತ್ತಿ ಸಾಕೆ? ಸಾಲದಿದ್ದರೆ ಕೊರತೆಯನ್ನು ಪೂರೈಸಿಕೊಳ್ಳಲು ಸಾಧ್ಯವೆ? ಸಾಧ್ಯವಾದರೆ ಅದಕ್ಕೇನು ಮಾಡಬೇಕು . . . . ಈ ಅಂಶಗಳನ್ನು ಕುರಿತು ನನಗೆ ತಿಳಿದಿರುವ ನಾಲ್ಕು ಮಾತು ಹೇಳಿ, ರಂಗಭೂಮಿಯ ಹಿತಚಿಂತಕರೂ, ಅಭಿಮಾನಿಗಳೂ ಆದ ನೀವು ಈ ಅಂಶಗಳಿಗೆ ಮನಸ್ಸು ಕೊಟ್ಟು ಖಚಿತಾಭಿಪ್ರಾಯಗಳನ್ನು ಮೂಡಿಸಿಕೊಂಡು, ಕನ್ನಡ ರಂಗಭೂಮಿಯ ಪುನರುಜ್ಜೀವನಕ್ಕೆ ನೆರವಾಗಬೇಕೆಂದು ಕೇಳಿಕೊಳ್ಳುವುದೇ ನನ್ನ ಉದ್ದೇಶವಾಗಿದೆ.

ಸರ್ವಾಂಗಸುಂದರವಾದ ಸುಪುಷ್ಟವಾದ ರಂಗಭೂಮಿ – ಇಂದು ನಮ್ಮಲ್ಲಿಲ್ಲ – ಎಂದೊಡನೆಯೇ ನಮ್ಮ ರಂಗಭೂಮಿಯ ವೀರ ಅಭಿಮಾನಿಗಳು ಗುಬ್ಬಿ ವೀರಣ್ಣನವರ ಕಂಪೆನಿ, ಸುಬ್ಬಯ್ಯನಾಯ್ಡು ಅವರ ಕಂಪೆನಿ, ಏಣಿಗಿ ಬಾಳಪ್ಪನರ ಕಂಪೆನಿ ಮುಂತಾಗಿ ಕೆಲವು ದೊಡ್ಡ ಹೆಸರುಗಳನ್ನು ನಮ್ಮ ಮುಖದಮೇಲೆಸೆಯಬಹುದು. ಈ ಸಂಸ್ಥೆಗಳ

ಮತ್ತು ಅವು ಮಾಡುತ್ತಿರುವ ರಂಗಭೂಮಿಯ ಸೇವೆಯ ವಿಚಾರವಾಗಿ ನನಗೂ ಅಭಿಮಾನ ವಿದೆ; ಗೌರವವಿದೆ. ಆದರೆ, ಇವು ಸೂತ್ರಕ್ಕೆ ಅಪವಾದಗಳೇ ಹೊರತು ನಿದರ್ಶನ ಗಳಲ್ಲ. ಯಾವುದೇ ಒಂದು ಪ್ರದೇಶದಲ್ಲಿ ನಾಲ್ಕಾರು ದೊಡ್ಡ ನಾಟಕ ಕಂಪೆನಿಗಳು ತಮ್ಮ ಸಾಹಸದಿಂದ ಬಾಳಿ ಬದುಕುತ್ತಿರುವುವೆಂಬ ಒಂದು ಕಾರಣದಿಂದ ನಮ್ಮಲ್ಲಿ ಸುಪುಷ್ಟವಾದ ರಂಗಭೂಮಿಯಿದೆಯೆಂದು ಹೇಳಲು ಸಾಧ್ಯವಿಲ್ಲ.

ರಂಗಭೂಮಿ ಪುಷ್ಟವಾಗಿರಬೇಕಾದರೆ ಅದರ ತಾಯಿಬೇರು ಜನತೆಯಲ್ಲಿ ಬಲ ವಾಗಿಯೂ ವಿಸ್ತಾರವಾಗಿಯೂ ಆಳವಾಗಿ ಹಬ್ಬಿರಬೇಕು. ಜನತೆಗೂ ಅದಕ್ಕೂ ಇರುವ ಪರಸ್ಪರ ಹಿಡಿತ ಬಲಗುಂದಬಾರದು. ಇಂಥ ಪರಿಸ್ಥಿತಿಯಿದ್ದಾಗ ಮಾತ್ರ ರಾಷ್ಟ್ರದಲ್ಲಿ ರಂಗಭೂಮಿ ಪ್ರಬಲವಾಗಿರುತ್ತದೆ; ರಾಷ್ಟ್ರಜೀವನದ ಒಂದು ಅವಿಭಜ್ಯ ಅಂಗವಾಗುತ್ತದೆ. ಹಾಗಲ್ಲದೆ ಇದ್ದರೆ ರಂಗಭೂಮಿಯ ಬಾಳು ಕ್ಷಯರೋಗಿಯ ಸ್ಥಿತಿಯಂತೆ; ಕುಟ್ಟೆ ಹತ್ತಿದ್ದ ಬೊಂಬಿನಂತೆ. ಹಣತೆಯಲ್ಲಿ ಎಣ್ಣೆಯಿಲ್ಲದೆ ಎಣ್ಣೆಯಲ್ಲಿ ನೆನದ ಬತ್ತಿಯ ಆಧಾರದಮೇಲೆ ಉರಿಯುತ್ತಿರುವ ದೀಪದಂತೆ. ಆದ್ದರಿಂದ ಜನತೆಯ ಹೃದಯದಲ್ಲಿ ತನ್ನ ಹಿಡಿತವನ್ನು ಕಳೆದುಕೊಂಡಿರುವ ರಂಗಭೂಮಿಯನ್ನು ಸಚೇತನ ರಂಗಭೂಮಿಯೆಂದು ಭಾವಿಸುವುದು ಕ್ಷಯರೋಗಿಯನ್ನು ಯೋಧನೆಂದು, ಕುಟ್ಟು ಹಿಡಿದ ಬೊಂಬನ್ನು ಗಟ್ಟಿಯಾದ ತೊಲೆ ಯೆಂದು ಬರಿಹಣತೆಯ ದೀಪವನ್ನು ಜಾಜ್ವಲ್ಯಮಾನವಾದ ನಂದಾದೀಪವೆಂದು ಭಾವಿಸಿ ದಂತೆಯೇ ಸರಿ. ಅದು ಅಷ್ಟೇ ಅಪ್ರಯೋಜಕ, ನಿರಾಶಾಜನಕ.

ಆದ್ದರಿಂದ ನಮ್ಮ ರಂಗಭೂಮಿ ಪರಿಪುಷ್ಟವಾಗಿ ಬೆಳೆದು ಬಾಳಬೇಕಾದರೆ, ಅದು ಜನತೆಯೊಡನೆ ಒಂದಾಗಬೇಕು. ಹಾಗಾಗುವುದು ಹೇಗೆ ?

ಈ ಸಂಬಂಧವಾದ ಆಲೋಚನೆಯನ್ನು ಮುಂದುವರಿಸುವ ಮೊದಲು ನಮ್ಮ ದೃಷ್ಟಿಯನ್ನು ಸ್ವಲ್ಪಮಟ್ಟಿಗೆ ಇತಿಹಾಸದ ಕಡೆಗೆ ತಿರುಗಿಸುವುದು ಒಳ್ಳೆಯದು. ಏಕೆಂದರೆ ಯಾವ ಹಳೆಯ ಕಟ್ಟಡವನ್ನೇ ಆಗಲಿ ಪುನರುದ್ಧಾರ ಮಾಡಲು ಕೈಹಾಕುವ ಮೊದಲು ಅದರ ತಳಹದಿಯ ವಿನ್ಯಾಸ, ಬಲಗಳನ್ನು ಅರ್ಥಮಾಡಿಕೊಂಡು ಮುಂದುವರೆಯುವುದು ಹಿತಕರ ಹಾಗೂ ಲಾಭಕರ. ಈ ಇತಿಹಾಸ ಜ್ಞಾನವಿಲ್ಲದೆ, ಸಮಕಾಲೀನ ಪ್ರಭಾವಗಳಿಂದ ಪ್ರಚೋದಿತವಾಗಿ ದುಡುಕಿ ಮುನ್ನುಗ್ಗುವುದರಲ್ಲಿ ಲಾಭಕ್ಕಿಂತ ನಷ್ಟವೇ ಹೆಚ್ಚಾಗುವ ಸಂಭವವುಂಟು. ಇಂಥ ಪರಂಪರಾಜ್ಞಾನಶೂನ್ಯವಾದ ಸುಧಾರಣಾ ಪ್ರಯತ್ನಗಳು ಉದ್ದಿಷ್ಟ ಫಲವನ್ನು ಕೊಡದೆಹೋಗಿರುವುದಕ್ಕೆ ಕೆಲವಾರು ಉದಾಹರಣೆಗಳನ್ನು ಕೊಡ ಬಹುದು. ಆ ಮಾತು ಇರಲಿ.

ಭಾರತವರ್ಷದ ರಂಗಭೂಮಿಯ ಇತಿಹಾಸವನ್ನು ನೋಡಿದರೆ ಒಂದು ಅಂಶ ಸ್ಪಷ್ಟವಾಗುತ್ತದೆ. ಅದೇನೆಂದರೆ ನಮ್ಮ ರಂಗಭೂಮಿ–ಎರಡು ಮುಖವುಳ್ಳದ್ದು; ವಿರುದ್ಧ ಮುಖಗಳಲ್ಲ. ಪರಸ್ಪರ ಪೂರಕವಾದರೂ ವಿಶಿಷ್ಟ ಲಕ್ಷಣಗಳನ್ನುಳ್ಳ ಎರಡು ಮುಖವುಳ್ಳದ್ದು; ನಾಣ್ಯದ ಎರಡು ಮುಖಗಳಂತೆ–ಒಂದು ರಾಷ್ಟ್ರೀಯತೆಯನ್ನು ಇನ್ನೊಂದು ಮೌಲ್ಯವನ್ನು ತೋರತಕ್ಕದ್ದು. ಭಾರತವರ್ಷದ ರಂಗಭೂಮಿಯ ಎರಡು ಮುಖಗಳಾದರೂ ಅಷ್ಟೇ. ಒಂದು ಸಂಸ್ಕೃತಿ, ಪರಂಪರೆಗಳನ್ನು ತೋರುವ ಮುಖ; ಇನ್ನೊಂದು ಅದನ್ನು ಶಾಸ್ತ್ರದ ಎರಕಕ್ಕೆ ಹಾಕಿ, ನಾಗರಿಕತೆಯ ಮೆರುಗು ಉಜ್ಜಿ ಅದಕ್ಕೆ ಕಲೆಯ ಬೆಲೆಕಟ್ಟಲು ಸಹಾಯಕವಾಗಿರುವಂತೆ ಸಿದ್ಧಪಡಿಸಿರುವ ಮುಖ; ಒಂದು ಗ್ರಾಮೀಣ

ರಂಗಭೂಮಿ; ಇನ್ನೊಂದು ನಗರ ರಂಗಭೂಮಿ. ಇನ್ನು ಸುಲಭವಾದ ಮಾತುಗಳಲ್ಲಿ ಹೇಳುವುದಾದರೆ, ಒಂದು ಹಳ್ಳಿಗರ ರಂಗಭೂಮಿ, ಇನ್ನೊಂದು ಪಟ್ಟಣಿಗರ ರಂಗಭೂಮಿ. ನಮ್ಮ ನಾಡು ಹಳ್ಳಿಗಳ ನಾಡಾದ್ದರಿಂದ ಒಂದು ಜನತಾ ರಂಗಭೂಮಿ; ಇನ್ನೊಂದು ಪಂಡಿತ ರಂಗಭೂಮಿ. ಒಂದು ಜನರ ಪೋಷಣೆಯಿಂದ ಅವರ ರಕ್ತದ ರಕ್ತವಾಗಿ, ಖಂಡದ ಖಂಡವಾಗಿ ಮೂಳೆಯ ಮೂಳೆಯಾಗಿ ಅವರ ಕೈಕೂಸಾಗಿ ಬೆಳೆದಿದ್ದು; ಇನ್ನೊಂದು ರಾಜರ ಪೋಷಣೆಯಲ್ಲಿ, ಪಂಡಿತರ ಶಿಕ್ಷಣದಲ್ಲಿ ಕ್ರಮಬದ್ಧವಾಗಿ ಫೈಲ್ವಾನನಂತೆ ಬೆಳೆದದ್ದು.

ಸಾಮಾನ್ಯವಾಗಿ 'ರಂಗಭೂಮಿ' ಎಂದೊಡನೆಯೇ ನಮ್ಮ ಮನಸ್ಸು ಈ ಫೈಲ್ವಾನನ್ನು ಗುರುತಿಸುತ್ತದೆ. ಅವನ ಭವ್ಯವಾದ ಆಕಾರ, ಶಕ್ತಿ, ಸಾಧನೆಗಳನ್ನು ನಮ್ಮ ಮನಸ್ಸನ್ನು ಆಕರ್ಷಿಸುತ್ತವೆ. ಈ ಆಕರ್ಷಣೆಯ, ಮೋಹದ ಸುಳಿಯಲ್ಲಿ ಸಿಕ್ಕಿದ ನಮ್ಮ ಮನಸ್ಸು ಈ ದೊಡ್ಡ ಫೈಲ್ವಾನ್ ತನ್ನ ಗರಡಿ ಸಾಧನೆಗೆ ಮುಂಚೆ, ಸಣ್ಣ ಮಗುವಾಗಿದ್ದನೆಂಬುದನ್ನೂ ರಾಜಪೋಷಣೆಯನ್ನು ಗಳಿಸಿಕೊಳ್ಳುವ ಮೊದಲು ಜನತೆಯ ಕೈಕೂಸಾಗಿ ಬೆಳೆದನೆಂಬುದನ್ನೂ ಅವನ ವಿಶಿಷ್ಟ ಶಕ್ತಿಗಳು ಅಂಕುರವಾದದ್ದು ಆ ಕಾಲದಲ್ಲಿಯೇ ಎಂಬುದನ್ನೂ ಮರೆತುಬಿಡುತ್ತದೆ. ಈ ಮರವೆಯನ್ನು ಬಲಪಡಿಸುವುದಕ್ಕೆ ಪೋಷಕವಾದ ಕಾರಣಗಳು ಹಲವಾರು ಇರಬಹುದು. ಆದರೆ ಅವುಗಳ ವಿವೇಚನೆ ಅಪ್ರಕೃತ.

ಅಂತು ಈ ಮರವೆ, ಈ ಮನೋವೃತ್ತಿ ನಮ್ಮ ರಂಗಭೂಮಿಯ ಬಾಳಿಗೆ ಮುಳಿವಾಯಿತೆಂಬುದು ನಾವು ಗಮನಿಸಬೇಕಾಗಿರುವ ಮುಖ್ಯಅಂಶ. ಬೇರು ತಂಪಾಗಿದ್ದರೆ, ಗಿಡಸೊಂಪಾಗಿ ಬೆಳೆಯುತ್ತದೆಂಬುದನ್ನು ನಾವು ಮರೆತು, ಬೇರು ಒಣಗಲು ಬಿಟ್ಟಿದ್ದೇವೆ. ಅದರಿಂದಾಗಿ ಗಿಡ ಒಣಗುತ್ತಿರಲು ಹಲುಬುತ್ತೇವೆ. ಬೇರು ಸೊರಗಿ ಒರಗುತ್ತಿರುವ ಮರಕ್ಕೆ ಊರುಕೋಲಿನ, ಕವೆಗಡ್ಡಿಯ ನೆರವನ್ನೊದಗಿಸಿ ಸಾಯುತ್ತಿರುವ ಮರ ಹೊಸದಾಗಿ ಕೊನರೊಡೆದು, ಕೊನೆಹಾಯ್ದು, ಹೂತು, ಫಲಿಸಬೇಕೆಂದು ಆಶಿಸುತ್ತಿದ್ದೇವೆ. ನಮ್ಮ ಈ ಆಸೆ ಸದಾಶಯದ ಪ್ರತೀಕವಿರಬಹುದು. ಆದರೆ ಅದು ಸಿದ್ಧಿಯಲ್ಲಿ ಪರಿಣಮಿಸದು.

ಈ ಮಾತನ್ನು ನಾನು ಹೇಳುವಾಗ ನನ್ನ ಮನಸ್ಸಿನ ಹಿಂಬದಿಯಲ್ಲಿ ಯಾವ ಪ್ರಯತ್ನದ ಯಾವ ಸಂಸ್ಥೆಯ ಕಾರ್ಯಕಲಾಪಗಳ ವಿವರ ಮೇಲೆದ್ದು ಬರುತ್ತಿದೆಯೆಂಬುದನ್ನು ನಿಮ್ಮಲ್ಲಿ ಕೆಲವರಾದರೂ ಗುರುತಿಸಬಲ್ಲಿರಿ.—ನಿಜ. ಅದೇ ಸಂಗೀತ ನಾಟಕ ಅಕ್ಯಾಡಮಿಯ ವ್ಯವಹಾರ.

ನಮ್ಮ ರಾಷ್ಟ್ರ ಪರಕೀಯರ ದಾಸ್ಯದಲ್ಲಿದ್ದವರೆಗೆ ನಮ್ಮ ಕಲಾಸಂಸ್ಕೃತಿಗಳ ಸಂಗೋಪನ ಅವರ ಆಸಕ್ತಿಯ ವಿಚಾರವಾಗಿರಲಿಲ್ಲ. ನಮ್ಮ ನಾಡಿಗೆ ಸ್ವಾತಂತ್ರ್ಯ ದೊರೆತ ಮೇಲೆ ಈ ದೃಷ್ಟಿ ಬದಲಾಯಿಸಿದೆಯೆಂಬುದೂ ನಿಜ. ಇಂದು ಆಡಳಿತದಲ್ಲಿರುವ ನಮ್ಮ ಸರ್ಕಾರ ಈ ವಿಚಾರದಲ್ಲಿ ಹೆಚ್ಚು ಆಸಕ್ತಿವಹಿಸಿ ನಮ್ಮ ನಾಡಿನ ಕಲೆ, ಸಾಹಿತ್ಯ ಸಾಂಸ್ಕೃತಿಕ ಸಾಧನೆಗಳನ್ನು ಉಳಿಸಿಕೊಳ್ಳಲೂ ಬೆಳಸಿಕೊಳ್ಳಲೂ ಪ್ರಯತ್ನಿಸುತ್ತಿದೆ. ಕೇಂದ್ರ ಸರ್ಕಾರದ ಪ್ರೇರಣೆ ಪೋಷಣೆಗಳಿಂದ ರೂಪುಗೊಂಡಿರುವ ಸಾಹಿತ್ಯ ಅಕ್ಯಾಡಮಿ, ಸಂಗೀತ ನಾಟಕ ಅಕ್ಯಾಡಮಿ ಇವು ಅಂಥ ಪ್ರಯತ್ನದ ಫಲಗಳು. ಈ ಸಂಸ್ಥೆಗಳನ್ನು ಸ್ಥಾಪಿಸಿ, ಜನರ ದೃಷ್ಟಿ ಸಾಹಿತ್ಯ, ಸಂಗೀತ, ನಾಟ್ಯ, ನಾಟಕ ಕಲೆಗಳ ಕಡೆಗೆ ಹರಿಯುವಂತೆ ಮಾಡಿದ್ದಕ್ಕಾಗಿ ಕೇಂದ್ರ ಸರ್ಕಾರದವರೂ ಅವರ ಕಾರ್ಯನೀತಿಯನ್ನನುಸರಿಸಿ ಅಂಥದೇ ಸಂಸ್ಥೆ

ಗಳನ್ನು ವಿವಿಧ ಸಂಸ್ಥಾನಗಳಲ್ಲಿ ಸ್ಥಾಪಿಸಿದ ಸಂಸ್ಥಾನ ಸರ್ಕಾರಗಳವರೂ ಅಭಿನಂದನೀಯರು.

ಆದರೆ ನಾನು ಈ ಮೊದಲೇ ಹೇಳಿದಂತೆ ಸದಾಶಯ ಬೇರೆ ಕಾರ್ಯಸಾಧನೆಗೆ ಬೇಕಾದ ವ್ಯವಸ್ಥೆ, ಕಾರ್ಯತಂತ್ರ, ನೈಪುಣ್ಯಗಳು ಬೇರೆ. ಸದಾಶಯವೊಂದರಿಂದಲೇ ಈ ಜಗತ್ತಿನಲ್ಲಿ ಕಾರ್ಯಸಾಧನೆಯಾಗುವುದಾಗಿದ್ದರೆ ಈ ಜಗತ್ತೇ ಸ್ವರ್ಗವಾಗುತ್ತಿತ್ತು ! ಆದ್ದರಿಂದ ಸದಾಶಯಗಳಿಗೆ ಅವಕ್ಕೆ ಸಲ್ಲಬೇಕಾದ ಗೌರವವನ್ನು ಕೊಟ್ಟು ದೂರ ಕೂರಿಸಿ— ನಾವು ನಡುಕಟ್ಟಿ ಕಾರ್ಯರಂಗಕ್ಕಿಳಿದು ಸ್ಪಷ್ಟವಾದ ಕಾರ್ಯಕ್ರಮವನ್ನು ರೂಪಿಸಿಕೊಂಡು, ಆ ಕಾರ್ಯಕ್ರಮವನ್ನು ವ್ಯವಸ್ಥಿತವಾದ ರೀತಿಯಲ್ಲಿ ಸಾಧಿಸುವ ಪ್ರಯತ್ನ ಮಾಡಬೇಕು.

ಈ ಪ್ರಯತ್ನದ ಹೊಣೆಗಾರಿಕೆ ಸರ್ಕಾರದ ಮೇಲೆ ಮಾತ್ರವಲ್ಲ— ಸಾರ್ವಜನಿಕರ ಮೇಲೂ ಸಮಪ್ರಮಾಣದಲ್ಲಿದೆ. ಏಕೆಂದರೆ, ಈ ಕೆಲಸ ಸರ್ಕಾರದ್ದೆಂಬ ತಪ್ಪು ಭಾವನೆ ಸಾರ್ವಜನಿಕರಲ್ಲೂ, ಈ ಕೆಲಸಕ್ಕಾಗಿ ನಾವೊಂದು ಸಂಸ್ಥೆ ಸ್ಥಾಪಿಸಿದ್ದಾಯಿತು. ಅಲ್ಲಿಗೆ ಆ ವಿಚಾರದಲ್ಲಿ ನಮ್ಮ ಜವಾಬ್ದಾರಿ ಮುಗಿದಂತಾಯಿತು ಎಂಬ ಉಪೇಕ್ಷಾ ಭಾವನೆ ಸರ್ಕಾರಿ ಆಡಳಿತಕ್ಕೆ ಸಂಬಂಧಿಸಿದವರಲ್ಲೂ ಕಂಡುಬರುತ್ತಿದೆ. ಇದು ಕಾರ್ಯಸಾಧನೆಗೆ ತಕ್ಕ ವಾತಾವರಣವಲ್ಲ ಎಂಬುದನ್ನು ಒಪ್ಪಿಕೊಳ್ಳಲೇ ಬೇಕು. ಈ ಅಹಿತ ವಾತಾವರಣವನ್ನು ಮೊದಲು ಹೋಗಲಾಡಿಸತಕ್ಕದ್ದು ಅತ್ಯಾವಶ್ಯಕ. ಈ ಕಾರ್ಯವನ್ನು ಸಾಧಿಸಲು ಇಂಥ ಸಂಸ್ಥೆಗಳಲ್ಲಿ ಸರ್ಕಾರದ ಕೈವಾಡವನ್ನು ತಪ್ಪಿಸಿ, ಅವುಗಳ ವ್ಯವಹಾರವನ್ನು ದಕ್ಷರಾದ ಸಾರ್ವಜನಿಕರಿಗೆ ಒಪ್ಪಿಸುವುದು ಉತ್ತಮಮಾರ್ಗವೆನಿಸುತ್ತದೆ ನನಗೆ. ಈ ವ್ಯವಸ್ಥೆಯಲ್ಲಿ ಲೋಪದೋಷಗಳಿಲ್ಲವೆಂದಲ್ಲ. ಆದರೂ ಒಟ್ಟಿನಲ್ಲಿ ಇದು ಉತ್ತಮ ಪಕ್ಷ. ಈ ವಿಚಾರವನ್ನು ಅಷ್ಟಕ್ಕೇ ಬಿಟ್ಟು ಅದಕ್ಕಿಂತಲೂ ಮುಖ್ಯವಾದ ಇನ್ನೊಂದು ಅಂಶದ ಕಡೆಗೆ ನಮ್ಮ ಗಮನವನ್ನು ಕೊಡುವುದು ಉಚಿತ. ಅದೇನೆಂದರೆ— ಇಂದಿನ ಸ್ಥಿತಿಯಲ್ಲಿ ನಮ್ಮ ರಂಗಭೂಮಿಯ ಪುನರುಜ್ಜೀವನವಾಗಬೇಕಾದರೆ— ಈ ಕಾರ್ಯಕ್ಕೆಂದೇ ಸ್ಥಾಪಿತವಾಗಿರುವ ಸಂಸ್ಥೆ— ಕರ್ಣಾಟಕಕ್ಕೆ ಸಂಬಂಧಿಸಿದಂತೆ— ರೂಪುಗೊಳ್ಳಲಿರುವ ಕರ್ಣಾಟಕಕ್ಕೆ ಸಂಬಂಧಿಸಿದಂತೆ ಅನ್ನಿ— ಪ್ರಕೃತ ಮೈಸೂರು ಸಂಗೀತ ನಾಟಕ ಅಕ್ಯಾಡಮಿ ಈಗ ಮಾಡುತ್ತಿರುವಂತೆ ಆಗೊಂದು ಈಗೊಂದು 'ನಾಟಕೋತ್ಸವ' ನಡೆಸಿದರೆ ಸಾಕೆ! ಆ ನಾಟಕೋತ್ಸವದ ವೈಖರಿಯೋ – ನಮಗೆ ಶ್ರಮ ನಿಮಗೆ ದುರ್ಭೋಜನ ಎನ್ನುವ ವರ್ಗಕ್ಕೆ ಸೇರಿದ್ದು. ಸ್ವಾರ್ಥ ಸಂಕುಚಿತ ಭಾವನೆಗಳಿಂದ ದೂರವಾದದ್ದೇನೂ ಅಲ್ಲ. ಇಂಥ ಕಾರ್ಯಕ್ರಮದಿಂದ ಒಟ್ಟಿನಲ್ಲಿ ನಮ್ಮ ರಂಗಭೂಮಿಗೆ ಆಗುವ ಲಾಭವಾದರೂ ಏನು? ಇನ್ನೊಂದು ಪ್ರಶ್ನೆ— ಈ ಸಂಸ್ಥೆ ನಾಟಕ ಕಲೆಯ ಹಿತಸಾಧನೆಗೆಂದು ಸೂಕ್ತವಾದ ಕಾರ್ಯಕ್ರಮವನ್ನೇನಾದರೂ ಯೋಚಿಸಿದೆಯೇ? ಅದರ ಘಟನಾವಳಿಯಲ್ಲಿರುವ ಮಹಾವಾಕ್ಯಗಳನ್ನು ಕಾರ್ಯರೂಪಕ್ಕೆ ತರುವ ಬಗ್ಗೆ ಸ್ವಲ್ಪ ಆಳವಾಗಿ ಆಲೋಚನೆ ಮಾಡಿದೆಯೆ?— ನನಗೇನೋ ಸಂದೇಹ.

ನಮ್ಮ ರಂಗಭೂಮಿಯ ಪುನರುಜ್ಜೀವನವಾಗಬೇಕಾದರೆ – ಅದಕ್ಕೆ ತಕ್ಕ ಕಾರ್ಯಕ್ರಮವಾವುದು? – ಈ ವಿಚಾರವಾಗಿ ನಿಜವಾದ ಭಿನ್ನಾಭಿಪ್ರಾಯಗಳಿರಲು ಸಾಧ್ಯ. ಅದನ್ನು ನೆನಪಿನಲ್ಲಿಟ್ಟುಕೊಂಡು ನನಗೆ ಸೂಕ್ತವೆಂದು ತೋರಿದ ಕಾರ್ಯಕ್ರಮವನ್ನು ಸ್ಥೂಲವಾಗಿ ಸೂಚಿಸುತ್ತೇನೆ: ಈ ವಿಚಾರವನ್ನು ಗೋಷ್ಠಿಯ ಅಧ್ಯಕ್ಷರೂ, ನಾಟಕಶಾಲೆಯಲ್ಲಿ

ನುರಿತವರೂ ನಾಟಕಪ್ರಯೋಗ ಚತುರರೂ ಅನುಭವಿಗಳೂ ಆದ ನಾಟಕರತ್ನ ಶ್ರೀ ಜಿ. ಹೆಚ್. ವೀರಣ್ಣನವರು ಈಗಾಗಲೇ ಪ್ರಸ್ತಾಪಿಸಿದ್ದಾರೆ.

ನಾನು ಈ ಮೊದಲೇ ಸೂಚಿಸಿದಂತೆ, ಈ ಪುನರುಜ್ಜೀವನ ಕಾರ್ಯವನ್ನು ತಳಹದಿಯ ಮಟ್ಟದಿಂದ ಆರಂಭಿಸಬೇಕು. ಅಂದರೆ ನಮ್ಮ ನಾಡಿನ ತಳಹದಿಯಾದ ಹಳ್ಳಿಗಳಿಂದ ಆರಂಭಿಸಬೇಕು. ಈಗ್ಗೆ ನಲವತ್ತು ಐವತ್ತು ವರ್ಷಗಳ ಹಿಂದೆ ಒಂದೊಂದು ಹಳ್ಳಿಯಲ್ಲಿಯೂ ಬಯಲಾಟದ ಗುಂಪುಗಳಿದ್ದವು. ಭಾಗವತರಿದ್ದರು. ಈಗ ಭಾಗವತರು ವಿರಳರಾಗುತ್ತಿದ್ದಾರೆ. ಬಯಲಾಟದ ಕಲೆ ನಶಿಸಿಹೋಗುತ್ತಿದೆ. ಅದು ನಶಿಸಿಹೋಗದಂತೆ ಉಳಿಸಿಕೊಳ್ಳಬೇಕು. ಈ ಹಳ್ಳಿಯ ನಾಟಕ ಮಂಡಲಿಗಳು ನಮ್ಮ ರಾಷ್ಟ್ರೀಯ ರಂಗಭೂಮಿಯ ತಳಹದಿಯಾಗಬೇಕು.

ಹೀಗಾದಲ್ಲಿ ಇಡೀ ನಾಡಿನಲ್ಲಿ "ರಂಗಮತಿತ್ವ" ಬೆಳೆಯುತ್ತದೆ. ನಾಟಕ ಕಲೆಯ ಬಗ್ಗೆ ವಿಶಾಲ ಜನತೆಯಲ್ಲಿ ತೀವ್ರವಾದ ಆಸಕ್ತಿ ಮೂಡುತ್ತದೆ. ರಂಗಭೂಮಿಯ ಮುಖ್ಯ ಅಂಶಗಳಲ್ಲಿ ಎರಡಾದ, ಪ್ರೇಕ್ಷಕ ಸಂಪತ್ತಿ, ನವಸಂಪತ್ತಿಗಳು ಬೆಳೆಯಲು ಸಾಧನವಾಗುತ್ತದೆ. ಆನುಷಂಗಿಕವಾಗಿ ನಾಟಕಕಾರ, ಪ್ರಯೋಕ್ತೃ, ವಾದ್ಯಗಾರ ಗಾಯಕರ ಉದಯಕ್ಕೂ ಪ್ರೇರಕವಾಗುತ್ತದೆ.

ಪಟ್ಟಣದ ವಾತಾವರಣದಲ್ಲಿ ಬೆಳೆದ ಕೆಲವರಿಗೆ ಈ ಸೂಚನೆ ಹಾಸ್ಯಾಸ್ಪದವಾಗಿಯೂ ಬರಡಾಗಿಯೂ ಕಾಣಬಹುದು. ಆದರೆ ಅವರಲ್ಲನೇಕರ ಅಭಿಮಾನಕ್ಕೆ ಆಸ್ಪದವಾದ ಗುಬ್ಬಿಪಂಪೆನಿ ಕುಮಾರರಾಮನ ಕಥೆ, ಚೋರಕಥೆಗಳನ್ನಾಡುತ್ತಿದ್ದ ಬಯಲಾಟದ ಸಂಘವಾಗಿಯೇ ತಲೆಯೆತ್ತಿ ಸಂತತ ಪ್ರಯತ್ನ ಪ್ರೋತ್ಸಾಹಗಳಿಂದ ಬೆಳೆಯಿತೆಂಬ ಐತಿಹಾಸಿಕ ಸಂಗತಿ, ಈ ವಿವರವನ್ನು ಶ್ರೀ ಗುಬ್ಬಿ ವೀರಣ್ಣನವರು ತಮ್ಮ ಭಾಷಣದಲ್ಲಿ ನುಡಿದಿದ್ದಾರೆ. ಆ ಸಂಸ್ಥೆಯ ಅನೇಕ ಮಂದಿ ನಟನಟಿಯರು ಹಳ್ಳಿನಾಡಿನ ಕಡೆಯಿಂದ ಬಂದವರೆಂಬ ಸುದ್ದಿ. ನನ್ನ ಸಲಹೆ ಟೊಳ್ಳಲ್ಲ ಬರಡಲ್ಲವೆಂಬ ಸಮಾಧಾನವನ್ನು ತರುತ್ತದೆಂದು ನಂಬಿದ್ದೇನೆ.

ನನ್ನ ಮೊದಲ ಸೂಚನೆಯನ್ನು ಒಪ್ಪಿದರೆ, ಅದನ್ನು ಕಾರ್ಯಗತಮಾಡುವ ಸಮಸ್ಯೆ ಏಳುತ್ತದೆ. ಇದೇನು ದೊಡ್ಡ ಸಮಸ್ಯೆಯಲ್ಲ. ಅಲ್ಪ ವೆಚ್ಚದಿಂದ ಈ ಕಾರ್ಯವನ್ನು ಸಾಧಿಸಬಹುದು. ಕ್ರಮಕ್ರಮವಾಗಿ ನಾಲ್ಕು ಐದು ವರ್ಷಗಳಲ್ಲಿ ಮಾಡಿ ಮುಗಿಸಬಹುದು. ಈ ಕಾರ್ಯಕ್ರಮ ಇಷ್ಟೆ. ಯಕ್ಷಗಾನ ಹಾಗೂ ಪೌರಾಣಿಕ ನಾಟಕಗಳ ಪ್ರಯೋಗಕ್ಕೆ ಅನುಕೂಲಿಸುವಂಥ ಉಡುಗೆ ಉಪಕರಣಗಳ ಒಂದು ಸಂಕಲನವನ್ನು ಸುಮಾರು ಐವತ್ತು ಹಳ್ಳಿಗಳ ಉಪಯೋಗಕ್ಕೆಂದು ಒಂದು ಕೇಂದ್ರಸ್ಥಾನದಲ್ಲಿಡುವುದು. ನಾಟಕಗಳನ್ನಾಗಲೀ ಯಕ್ಷಗಾನವನ್ನಾಗಲೀ ಪ್ರದರ್ಶಿಸ ಬಯಸುವ ಹಳ್ಳಿಗರ ಸಂಸ್ಥೆಗಳಿಗೆ ಗುಂಪುಗಳಿಗೆ ಅವನ್ನು ಶುಲ್ಕವಿಲ್ಲದೆ ಅಥವಾ ತೀರಾ ಅಲ್ಪಶುಲ್ಕಕ್ಕೆ ಬಾಡಿಗೆಗೆ ಕೊಡುವುದು. ಒಂದು ನಿಯತವಾದ ಮಟ್ಟಕ್ಕೆ ಕೆಳಗಿಳಿಯದಂತೆ, ಒಂದು ಗೊತ್ತಾದ ಸಂಖ್ಯೆಗಿಂತ ಹೆಚ್ಚು ಸಂಖ್ಯೆಯ ನಾಟಕಗಳನ್ನಾಗಲೀ :ಯಕ್ಷಗಾನಗಳನ್ನಾಗಲೀ ಪ್ರಯೋಗಿಸಿದ ಭಾಗವತರುಗಳಿಗೆ, ನಾಟಕ ಪ್ರಯೋಕ್ತೃಗಳಿಗೆ ಏನಾದರೊಂದು ಸಂಭಾವನೆಯನ್ನೇರ್ಪಡಿಸುವುದು. ಈ ಪ್ರಯೋಗಗಳನ್ನು ಉತ್ತಮಗೊಳಿಸಲು ಸೂಕ್ತವಾದ ಸಲಹೆಗಳನ್ನು ಕೊಡಲು ಭಾಗವತರುಗಳಿಗೆ ಮತ್ತು ನಾಟಕ ಪ್ರಯೋಕ್ತೃಗಳಿಗೆ ಅಲ್ಪಾವಧಿ ಶಿಕ್ಷಣಕೊಡಲು ಏರ್ಪಾಡು ಮಾಡುವುದು

ಹಳ್ಳಿಗರು ಶ್ರಮದಾನ ಮಾಡಲು ಒಪ್ಪುವ ಸ್ಥಳಗಳಲ್ಲಿ – ಹಳ್ಳಿಯ ಬಯಲಿನಲ್ಲಿ – ಒಂದು ರಂಗಪೀಠ ಅದಕ್ಕೆ ಸೇರಿದಂತೆ ಒಂದು ಪ್ರಸಾಧನಗೃಹ ಅಭ್ಯಾಸ ಮಂದಿರಗಳನ್ನು ಕಟ್ಟಿಕೊಳ್ಳಲು ಸಾಮಾನುಗಳನ್ನು ಒದಗಿಸುವುದು.

ಪ್ರಾಥಮಿಕವಾಗಿ ಇದಿಷ್ಟು ಕಾರ್ಯಕ್ರಮವನ್ನು ಕೈಗೊಳ್ಳುವುದರಿಂದ ನಮ್ಮ ನಾಡಿನಲ್ಲಿ "ರಂಗಮತಿತ್ವ" ನಮ್ಮ ನಿರೀಕ್ಷಣೆಗಿಂತ ಮೀರಿ ಬೆಳೆದು ನಿಲ್ಲುವುದೆಂದು ನಾನು ನಂಬಿದ್ದೇನೆ – ಇದೇನೂ ಊಹೆಯಲ್ಲ. ದಕ್ಷ ಉದಾಹರಣೆಗಳ ಆಧಾರದಮೇಲೆ ದೃಢವಾದ ನಂಬಿಕೆಯನ್ನು ರೂಢಿಸಿಕೊಂಡಿದ್ದೇನೆ. ನಮ್ಮ ನೆರೆನಾಡಾದ ಚೀಣಾಕ್ಕೆ ಸ್ವಾತಂತ್ರ್ಯ ಬಂದಮೇಲೆ ಅವರು ತಮ್ಮ ರಂಗಕಲಾ ಪುನರುಜ್ಜೀವನವನ್ನು ಸುಳಿಯಿಂದ ಆರಂಭಿಸಿದರೇ ಬುಡದಿಂದ ಆರಂಭಿಸಿದರೆಂಬುದನ್ನೂ ಅವರ ಪ್ರಯತ್ನ ಉತ್ತಮ ಫಲಗಳನ್ನು ಕೊಟ್ಟದೆಯೆಂಬುದನ್ನೂ ಈ ಸಂದರ್ಭದಲ್ಲಿ ನೆನಪಿಗೆ ತಂದುಕೊಳ್ಳಬಹುದಾಗಿದೆ.

ಇನ್ನು ಪಟ್ಟಣಗಳ ಮಾತು: ಅಲ್ಲಿನ ಪ್ರಧಾನ ಅವಶ್ಯಕತೆಯೆಂದರೆ, ಕೈಸುಡದಷ್ಟು ಬಾಡಿಗೆಯಲ್ಲಿ ಸುಸಜ್ಜಿತವಾದ ರಂಗಮಂಟಪ. ಈ ಒಂದು ಅನುಕೂಲತೆ ಪೂರ್ಣ ಪ್ರಮಾಣದಲ್ಲಿ ದೊರೆತರೆ, ಇಂದಿನ ಸ್ಥಿತಿಯಲ್ಲಿ ನಮ್ಮ ಅನೇಕ ಪಟ್ಟಣಗಳಲ್ಲಿ ಹಲವಾರು ನಾಟಕ ಸಂಸ್ಥೆಗಳು ರಂಗಭೂಮಿಯಮೇಲೆ ಬರುವವೆಂಬ ನಂಬಿಕೆ ನನಗಿದೆ. ಬೆಂಗಳೂರಿನಂಥ ನಗರದಲ್ಲಿ ನಾಟ್ಯವಿಲಾಸಿಗಳ ಆರ್ಥಿಕ ಮಿತಿಗೆ ಅಳವಡುವಂಥ ಉತ್ತಮ ರಂಗಮಂದಿರ ಇಲ್ಲವೆಂಬುದೇ, ಈ ಸಮಸ್ಸೆಗೆ ನಿದರ್ಶನವಾಗಿದೆ.

ಈ ಸಂದರ್ಭದಲ್ಲಿ, ಈ ಸಮಸ್ಯೆಯ ಪರಿಹಾರಕ್ಕಾಗಿ ಕನ್ನಡ ಸಾಹಿತ್ಯ ಪರಿಷತ್ತು ಕೈಲಾದಮಟ್ಟಿಗೆ ಪ್ರಯತ್ನಪಟ್ಟು ಪರಿಷತ್ತಿನಲ್ಲಿ ಒಂದು ಸಣ್ಣ ರಂಗಮಂದಿರವನ್ನು ಸಜ್ಜುಗೊಳಿಸಿರುವುದು ತುಂಬಾ ಸಂತೋಷದ ಸಂಗತಿ. ಇದರಿಂದ ಬೆಂಗಳೂರಿನ ದಕ್ಷಿಣ ಪ್ರದೇಶದಲ್ಲಿ ಸಣ್ಣ ರಂಗಮಂದಿರವೊಂದರ ಕೊರತೆಯಿದ್ದಿದ್ದು ಬಹುಮಟ್ಟಿಗೆ ನಿವಾರಿಸಲ್ಪಟ್ಟಿತು. ಇದಕ್ಕಾಗಿ ನಾಟಕ ಕಲಾಭಿಮಾನಿಗಳೆಲ್ಲರೂ ಪರಿಷತ್ತಿಗೆ ಋಣಿಗಳು. ಇದಲ್ಲದೆ ಪರಿಷತ್ತು ನಾಟಕ ಪ್ರಯೋಗವನ್ನು ಪ್ರೇರಿಸುತ್ತಿರುವುದು ಇನ್ನೊಂದು ಸಂತೋಷದ ವಿಚಾರ. ನಾಟಕ ಕಲೆಯಲ್ಲಿ ಆಸಕ್ತರಾದ ಸಂಸ್ಥೆಗಳವರೂ ವ್ಯಕ್ತಿಗಳು ಪರಿಷತ್ತಿನ ಮಾದರಿಯನ್ನನುಸರಿಸಿ ರಂಗಮಂದಿರಗಳ ಕೊರತೆಯನ್ನು ಆದಷ್ಟುಮಟ್ಟಿಗೆ ಪರಿಹರಿಸುವುದು – ಆ ಸಂಸ್ಥೆ, ವ್ಯಕ್ತಿಗಳಿಂದ ನಾಟಕಕಲೆಯ ಪುನರುಜ್ಜೀವನಕ್ಕಾಗಿ ದೊರೆಯಬಹುದಾದ ಅತ್ಯಮೌಲ್ಯ ಸೇವೆಯಾಗಿದೆ.

# 38ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ರಾಯಚೂರು




## ನಾಟಕ ಗೋಷ್ಠಿಯಲ್ಲಿ ಶ್ರೀ ಎನ್ಕೆ. ಕುಲಕರ್ಣಿ ಅವರ ಭಾಷಣ

### 25-12-1955

ಸಾಹಿತ್ಯ ಸಮ್ಮೇಳನಾಧ್ಯಕ್ಷರೆ, ನಾಟಕಗೋಷ್ಠಿಯ ಅಧ್ಯಕ್ಷರೆ, ಸೋದರ-ಸೋದರಿಯರೆ,

ಮೂವತ್ತೆಂಟನೆಯ ಸಾಹಿತ್ಯ ಸಮ್ಮೇಳನದ ಅಂಗವಾಗಿ ಈ ಹೊತ್ತು ನಡೆಯುತ್ತಿರುವ ನಾಟಕಗೋಷ್ಠಿಯಲ್ಲಿ **ವಿಚಾರಪ್ರಧಾನವಾದ ನಾಟಕಗಳ** ವಿಷಯವಾಗಿ ನಾಲ್ಕು ಮಾತು ಹೇಳುವುದಕ್ಕೆ ನನಗೆ ಅವಕಾಶ ಕಲ್ಪಿಸಿಕೊಟ್ಟದಕ್ಕಾಗಿ ರಾಯಚೂರಿನ ಸ್ವಾಗತ ಸಮಿತಿಯವರಿಗೆ ನಾನು ಆಭಾರಿಯಾಗಿದ್ದೇನೆ.

ವರುವರುಷವೂ ಸಾಹಿತ್ಯ ಸಮ್ಮೇಳನಗಳಾದಷ್ಟು ನಾಟಕಗೋಷ್ಠಿಗಳೂ—ಹೆಚ್ಚು ಕಡಿಮೆ—ಆಗಿವೆ. ಆದರೆ ಈ ಸಲದ ನಾಟಕಗೋಷ್ಠಿ ಅನೇಕ ರೀತಿಯಲ್ಲಿ ವೈಶಿಷ್ಟ್ಯಪೂರ್ಣವಾಗಿದೆ ಎಂದು ನಾನು ತಿಳಿಯುತ್ತೇನೆ. ಈ ಸಲದ ಸಮ್ಮೇಳನಾಧ್ಯಕ್ಷರಾದ ಶ್ರೀ ಆದ್ಯ ರಂಗಾಚಾರ್ಯರು ಶ್ರೀರಂಗರೆಂದು ಲೋಕಪ್ರಿಯರಾದ ನಾಟಕಕಾರರಾಗಿದ್ದಾರೆ. ನಾಟಕಗೋಷ್ಠಿಯ ಅಧ್ಯಕ್ಷರಾದ ಶ್ರೀ ಗುಬ್ಬಿ ವೀರಣ್ಣನವರು ಲೋಕಪ್ರಿಯ ನಟರಾಗಿದ್ದಾರೆ. ಶ್ರೀರಂಗರು ನಾಟಕಕಾರರೆಂದು ಮುಂಬಯಿ ಸರಕಾರದಿಂದ ಕಳೆದ ವರುಷ ಬಹುಮಾನಿಸಲ್ಪಟ್ಟಿದ್ದಾರೆ. ಶ್ರೀ ವೀರಣ್ಣನವರು ರಾಷ್ಟ್ರಾಧ್ಯಕ್ಷರಿಂದ ಸನ್ಮಾನಿಸಲ್ಪಟ್ಟಿದ್ದಾರೆ. ಇಂದಿನ ಈ ವರುಷದ ನಾಟಕಗೋಷ್ಠಿಯ ಮತ್ತೊಂದು ವೈಶಿಷ್ಟ್ಯವೆಂದರೆ ಉದಯವಾಗಲಿರುವ ಸುಂದರ ಸಮಗ್ರ ಕರ್ನಾಟಕದ ಮುಂಬೆಳಗಿನಲ್ಲಿ ಇಂದಿನ ನಾಟಕಗೋಷ್ಠಿಯ ನಾಂದಿ ನಡೆಯಲಿದೆ. ಕರ್ನಾಟಕವೆಂಬ ರಂಗಭೂಮಿಯ ಮೇಲೆ ಹೊಸ ಅಂಕ ತೆರೆಯಲಿದೆ. ಇದೇ ಸಮಯಕ್ಕೆ ರಾಜ್ಯ ಮತ್ತು ಕೇಂದ್ರ ಸರಕಾರಗಳು ನಾಟ್ಯೋತ್ಸವಗಳನ್ನು ಜರುಗಿಸಿ, ನಾಟಕ ತರಬೇತಿ ಕೇಂದ್ರಗಳನ್ನು ನಡಸಿ, ದೊಡ್ಡ ಪಟ್ಟಣಗಳಲ್ಲಿ ಬಯಲು ರಂಗಭೂಮಿಗಳ ನಿರ್ಮಾಣಕಾರ್ಯವನ್ನು ಕೈಕೊಂಡು ಸಾಧ್ಯವಿದ್ದಷ್ಟು ನಾಟಕ ಕಲೆಗೆ ಪ್ರೋತ್ಸಾಹ ಕೊಡುತ್ತಿರುವುದು ಒಂದು ವೈಶಿಷ್ಟ್ಯವೆಂದೇ ಹೇಳಬಹುದು. ಇಂತಹ ವೈಶಿಷ್ಟ್ಯಪೂರ್ಣವಾದ ನಾಟಕಗೋಷ್ಠಿಯಲ್ಲಿ ಒಬ್ಬ ವ್ಯಾಖ್ಯಾನಕಾರರು ಒಂದು ವಿಷಯವನ್ನು ಕುರಿತು ದೀರ್ಘವಾಗಿ ಮಾತನಾಡುತ್ತಿರುವ ಸಂದರ್ಭವೂ ಒಂದು ವಿಶೇಷವೆ.

ಈ ವಿಶೇಷ ಸಂದರ್ಭದಲ್ಲಿ ನಾನು ವಿಚಾರಪ್ರಧಾನವಾದ ನಾಟಕಗಳನ್ನು ಕುರಿತು ಮಾತನಾಡಬೇಕಾಗಿದೆ. ವಿಚಾರಪ್ರಧಾನವಾದ ನಾಟಕಗಳೆಂದರೆ ಏನು ಮಾತಾಡಬೇಕು ಎಂದು ನಾನೂ ವಿಚಾರಿಸಿದೆ. ಭಾವನಾ ಪ್ರಧಾನವಾದ ನಾಟಕಗಳ ವಿರುದ್ಧವಾಗಿ ವಿಚಾರಪ್ರಧಾನವಾದ ನಾಟಕಗಳೊ, ಅಥವಾ ಸಾಮಾಜಿಕ ಸಮಸ್ಯೆಗಳನ್ನು ಚಿತ್ರಿಸಿ ಪ್ರೇಕ್ಷಕರವನ್ನು ವಿಚಾರಿಸ ಹಚ್ಚುವ ನಾಟಕಗಳೊ, ಇಲ್ಲವೆ ಯಾವುದಾದರೊಂದು ತಾತ್ವಿಕ-ರಾಜ

ಕೀಯವೆ ಇರಲಿ, ಧಾರ್ಮಿಕವೆ ಇರಲಿ, ನೈತಿಕವೆ ಇರಲಿ—ವಿಚಾರ ಪ್ರತಿಪಾದಿಸುವ ನಾಟಕಗಳೊ ಎಂದು. ಇದೇ ವಿಚಾರ ಸರಣಿಯಲ್ಲಿ ಇಬ್ಸೆನ್ ನಾಟಕಕಾರನ Doll's Houseದ ಬಗ್ಗೆ — ನೋರಾ ಕೊನೆಯ ದೃಶ್ಯದಲ್ಲಿ ಮನೆಬಿಟ್ಟು ತೆರಳುವಾಗ ಧಡಲ್ ಎಂದು ಬೆನ್ನ ಹಿಂದಿನಿಂದ ಹಾಕಿದ ಬಾಗಿಲ ಸಪ್ಪಳವು ಇಡಿಯ ಯುರೋಪಖಂಡದಲ್ಲಿ ಪ್ರತಿಧ್ವನಿಸಿತು,— ಎಂದು ವಿಮರ್ಶಕರು ಹೇಳುವ ಮಾತು ಗಮನಕ್ಕೆ ಬರುತ್ತದೆ: ಮತ್ತು 'ವಿಚಾರಪ್ರಧಾನವಾದ ನಾಟಕ' ಎಂದರೆ ಹೀಗಿರಬೇಕು ಎನಿಸುತ್ತದೆ. ಎಂದರೆ Doll's Houseನಲ್ಲಿ ಭಾವನೆಗೆ ಅವಕಾಶವಿಲ್ಲವೆಂದಲ್ಲ. ನೋರಾನ ಪಾತ್ರ ಬಂದಾಗಲೆಲ್ಲಾ ಬೇಕಾದಷ್ಟು ಭಾವನೆಗೆ ಅವಕಾಶವಿದೆ. ಆದರೆ ಇಡಿಯ ನಾಟಕವು ನೋಟಕರಮೇಲೆ ಯಾವ ಬಗೆಯ ಪರಿಣಾಮವನ್ನುಂಟುಮಾಡುತ್ತದೆ ಎಂಬುದನ್ನು ವಿಚಾರಿಸಿದಾಗ ಇಂತಹ ಪ್ರಭಾವೀ ನಾಟಕಗಳು ಕನ್ನಡದಲ್ಲಿ ಇವೆಯೆ — ಎಂಬ ಪ್ರಶ್ನೆ ಎದುರಿಗೆ ಬಂದು ನಿಲ್ಲುತ್ತದೆ.

ಶ್ರೀರಂಗರನ್ನು ಶಾ, ಇಬ್ಸೆನ್‌ರಿಗೆ ಹೋಲಿಸಿದುದನ್ನು ನಾನು ಓದಿದ್ದೇನೆ, ಕೇಳಿದ್ದೇನೆ. ಇದರ ಸಮರ್ಪಕತೆಯನ್ನು ವಿಮರ್ಶಿಸುವುದಿಲ್ಲಿ ಪ್ರಸ್ತುತವಾಗಿಲ್ಲ. ಆದರೆ ಶ್ರೀರಂಗರನ್ನು ಷೇಕ್ಸ್‌ಪಿಯರ್ ಕಾಳಿದಾಸರಿಗೆ ಹೋಲಿಸಿಲ್ಲ ಎಂಬುದನ್ನೂ ನೆನೆದಾಗ ಶಾ, ಇಬ್ಸೆನ್‌ರ ವಿಚಾರ ಸರಣಿ ಶ್ರೀರಂಗರ ನಾಟಕಗಳಲ್ಲೂ ಮೂಡಿರಬೇಕು ಎಂದು ಭಾವಿಸಬಹುದಾಗಿದೆ. ವಿಚಾರಪ್ರಧಾನ ನಾಟಕಗಳಿಗೆ ಶ್ರೀರಂಗರ 'ಶೋಕಚಕ್ರ' ಉತ್ತಮ ಉದಾಹರಣೆಯಾಗಿದೆ. "(ಕಾಂಗ್ರೆಸ್) ಪಾರ್ಟಿ ಬೆನ್ನು ಕಟ್ಟಿದವರಿಗೆ ಅಶೋಕಚಕ್ರ; ಗಾಂಧಿ ಬೆನ್ನು ಕಟ್ಟಿದವರಿಗೆ ಶೋಕಚಕ್ರ; ಬುದ್ಧಿ ಇದ್ದದ್ದು ಸುಖಾ ಗಳಿಸಿ ಸಾಯಲಿಕ್ಕೆ; ಭಾವನಾ ಇದ್ದದ್ದು ದುಃಖ ಅನುಭವಿಸಿ ಅಮರ ಆಗಲಿಕ್ಕೆ; ಒಂದು ಅಶೋಕಚಕ್ರ ಇನ್ನೊಂದು ಶೋಕಚಕ್ರ"— ವಿಚಾರ ಸರಣಿಯನ್ನು ಪ್ರತಿಪಾದಿಸುವ ಈ ಹೊಸ ನಾಟಕ ಕೇವಲ ಇತ್ತೀಚೆಗೆ ಬರೆದುದೆಂದು ಹೊಸದಾಗಿರದೆ ಅನೇಕ ರೀತಿಯಲ್ಲಿ ಹೊಸದಾಗಿದೆ. ಗಾಂಧೀಜಿಯವರನ್ನು ಸಾಯಹೊಡೆದುದೆಂದರೆ ಗಾಂಧೀತತ್ವವನ್ನೇ ಸಾಯಹೊಡೆದಂತಾಯಿತು. ಅವರ ತತ್ವ ಅವರೊಡನೆಯೇ ಕಣ್ಮರೆಯಾಯಿತು ಎಂಬ ವಿಚಾರ ಶೋಕಚಕ್ರವನ್ನು ಸುತ್ತಿದೆ. ಇಲ್ಲಿ 'ತಲೆತುಂಬ ವಿಚಾರವಿದೆ' 'ಹೊಟ್ಟೆತುಂಬ ನಗೆ' ಗಿಂತ ಹೃದಯ ತುಂಬ ಭಾವನೆಯಿದೆ. ನಗಿಸಿ ಕೆರಳಿಸುವ ವಿಡಂಬನೆ ಇದೆ. ನಾಟಕವನ್ನು ನೋಡಿದ ಮೇಲೆ ಬಹು ಹೊತ್ತು ವಿಚಾರಿಸ ಹಚ್ಚುತ್ತದೆ; ಗುಂಗು ಹಿಡಿಸುತ್ತವೆ.

ಶ್ರೀರಂಗರ ನಾಟಕಗಳಲ್ಲಿ ಬುದ್ಧಿಪ್ರಧಾನ, ಭಾವನೆ ಗೌಣ — ಎಂದು ಹೇಳಬಹುದಾದರೂ 'ಹರಿಜನ್ವಾರ'ದ ವೇಣಕ್ಕ, 'ಶೋಕಚಕ್ರ'ದ ರಂಗವ್ವ ಮಾನವತೆಯ ಬಗ್ಗೆ ಮಾತೃಹೃದಯವುಳ್ಳ ಪಾತ್ರಗಳು. ಈ ಪಾತ್ರಗಳಲ್ಲಿ ಭಾವನೆಯೇ ಪ್ರಧಾನ. ಹಾಗಾದರೆ ಶ್ರೀರಂಗರ ಪುರುಷ ಪಾತ್ರಗಳು ವಿಚಾರ ಇಲ್ಲವೆ ಬುದ್ಧಿಪ್ರಧಾನ; ಸ್ತ್ರೀ ಪಾತ್ರಗಳು ಭಾವನಾ ಪ್ರಧಾನ ಎಂದರೆ ಸಲ್ಲಬಹುದು.

ಪೌರಾಣಿಕ ಸಂದರ್ಭಗಳನ್ನೆತ್ತಿಕೊಂಡು ಅವುಗಳಲ್ಲಿ ಧ್ವನಿಪೂರ್ವಕವಾಗಿ ಸಾಮಾಜಿಕ ವಿಚಾರಗಳನ್ನು ತುಂಬುವುದು ಶ್ರೀರಂಗರದೇ ಒಂದು ವೈಶಿಷ್ಟ್ಯವಾಗಿದೆ. 'ಶರಪಂಜರ' 'ಅಹಲ್ಯೋದ್ಧಾರ' 'ಸಂಪದ್ಧರ್ಮ'ಗಳನ್ನು ಈ ದೃಷ್ಟಿಯಿಂದ ನೋಡಬಹುದು. ವಾಸ್ತವ ಸಾಮಾಜಿಕ ನಾಟಕಕ್ಕಿಂತ ಈ ವ್ಯಂಗ್ಯ ಪೌರಾಣಿಕ ನಾಟಕಗಳ್ಳು ವಿಡಂಬನೆ ವಿಚಾರ ಪ್ರಚೋದನೆಯ ದೃಷ್ಟಿಯಿಂದ ಹೆಚ್ಚು ಪ್ರಭಾವೀ, ಸತ್ವಯುತವಾಗಿವೆ

ಯೆನ್ನಬಹುದು. ಅವರ 'ಸಂಪದ್ಧರ್ಮ' ಎಂಬ ಚಿಕ್ಕ ನಾಟಕವು ಓದಿದಷ್ಟೂ ಸಲ ಸಾಲು ಸಾಲಿಗೆ, ಸಾಲುಗಳ ನಡುವೆ, ವಿಚಾರವನ್ನು ಕೆರಳಿಸುತ್ತದೆ: ಹಿಂದಕ್ಕೆ ತ್ರೇತಾ ಯುಗ ದ್ವಾಪರಯುಗಗಳ ಸಂಧಿಯಲ್ಲಿ ಭೂಲೋಕದಲ್ಲಿ ಹನ್ನೆರಡು ವರುಷದ ಕ್ಷಾಮ ವನ್ನುಂಟು ಮಾಡಿದ ದೇವೇಂದ್ರ. ಪ್ರಜಾಕೋಟಿ ಹೊಟ್ಟೆಗೆ ಅನ್ನವಿಲ್ಲದೆ ಪ್ರಾಣ ನೀಗಹತ್ತಿತು. ಮಳೆ ಇಲ್ಲ, ಬೆಳೆ ಇಲ್ಲ. ದನಕರುಗಳು ಒಣಗಿ ಹೆಣವಾದುವು. ಇದಕ್ಕೆ ಕಾರಣ ಇಷ್ಟೆ.—ದೇವೇಂದ್ರನು ಪ್ರಜಾಲೋಕದ ಪಾಪಬುದ್ಧಿಯ ಪರೀಕ್ಷೆ ಮಾಡ ಬೇಕಿತ್ತು. ಯುಗಪುರುಷನ ಅವತಾರ ಸಮಾಪ್ತಿಯಾಗಿತ್ತು. ಲೋಕವು ಹೊಸ ಯುಗವು ತನ್ನದೆಂದು ಕೃತಘ್ನತೆ ಅಹಂಮಾನ್ಯತೆಗಳಿಂದ ಉನ್ಮತ್ತವಾಯಿತು. ದೇವೇಂದ್ರನ ಪಟ್ಟವನ್ನು ಮೆಟ್ಟಬೇಕೆಂಬ ವಿಶ್ವಾಮಿತ್ರ ನಡುರಾತ್ರಿಯಲ್ಲಿ ಹೊಲೆಯನ ಮನೆಯ ಮುಂದೆ ನೇತಾಡುತ್ತಿದ್ದ ನಾಯಿಯ ಮಾಂಸದ ತುಣುಕಿಗೆ ನಾತಬಡೆದು ಓಡಾಡುವ ನಾಯಿ ಯಂತೆ ಕಳ್ಳತನದಿಂದ ಧಾವಿಸಿ ಬರುತ್ತಿದ್ದಾನೆ. ಹೀಗೆ ದೃಶ್ಯ ಆರಂಭವಾಗುತ್ತದೆ. ಹೊಲೆಯನ ಹೊಸ್ತಿಲನ್ನು ಸಮೀಪಿಸುತ್ತಲೆ ಎದುರಿನಿಂದ ಪ್ರತಿವಿಶ್ವಾಮಿತ್ರ (ಇದು ವಿಶ್ವಾಮಿತ್ರನ ವಿವೇಕವೆಂಬ ಅವನ ನೆರಳು) ಬರುತ್ತಾನೆ. ಹಸಿವೆಗೆ ತುತ್ತಾಗಿ ಬಾಯಿ ಬಿಡುತ್ತ ಹೊಲೆಯನ ಆಹಾರಕ್ಕೆ ಆಸೆಯ ಕೈ ಚಾಚುವ ವಿಶ್ವಾಮಿತ್ರನನ್ನು ತಡೆಯು ತ್ತಾನೆ. ಇದು ಅಧರ್ಮ, ಪಾಪ, ಕೂಡದೆಂದು ಹೇಳುತ್ತಾನೆ. ಇದು ಆಪದ್ಧರ್ಮ, ಸಮತೆಯ ಹೊಸಯುಗ; ಏನೂ ಪಾಪವಿಲ್ಲ ಎಂದು ಆಮಿಷಕ್ಕೆ ಮನಸೋತ ವಿಶ್ವಾಮಿತ್ರ ಇನ್ನೂ ಮುಂದೆ ಅಡಿಯಿಡುತ್ತಾನೆ. ಆ ನೆರಳು ಮತ್ತೆ ಅವನನ್ನು ತಡೆಯುತ್ತದೆ. ವಿಶ್ವಾ ಮಿತ್ರ ಸಿಟ್ಟಿನಿಂದ ತನ್ನ ನೆರಳನ್ನೇ ತಾನು ಒದೆಯಹೋಗುತ್ತಾನೆ. ನೆರಳು ವಿಶ್ವಾಮಿತ್ರ ನಲ್ಲೇ ಮಾಯವಾಗಿ ಹೋಗುತ್ತದೆ. ವಿಶ್ವಾಮಿತ್ರನ ಚೀರಾಟಕ್ಕೆ ಚಾಂಡಾಲನಿಗೆ ಎಚ್ಚರ ವಾಗುತ್ತದೆ. ಈ ತಾಪಸಿ ತನ್ನ ಅನ್ನವಾದ ಮಾಂಸದ ತುಣುಕಿಗಾಗಿ ಕಳ್ಳತನದಿಂದ ಬಂದುದನ್ನು ನೋಡುತ್ತಾನೆ. ಇದು ಆಪದ್ಧರ್ಮ. ತಾನು ಬದುಕಬೇಕು. ತಾನು ತಾಪಸಿ. ತಾನು ಬದುಕಿದರೆ ಲೋಕ ಬದುಕೀತು. ತಾನು ಮಾನವಶ್ರೇಷ್ಠ. ಉಳಿದ ಜೀವಗಳಿಗಿಂತ ತನ್ನ ಜೀವ ಹೆಚ್ಚಿನದು, ಎನ್ನುತ್ತಾನೆ. ಈ ಬ್ರಹ್ಮರ್ಷಿಯ ಮಾತಿಗೆ ಚಾಂಡಾಲ ನಗುತ್ತಾನೆ. ಇದು ಆಪದ್ಧರ್ಮವಲ್ಲ ಸಂಪದ್ಧರ್ಮ ಎನ್ನುತ್ತಾನೆ, ಚಾಂಡಾಲ. 'ಸಹಸ್ರಾವಧಿ ಜೀವಿಗಳು ಹಸಿವೆಯ ಆಪತ್ತಿಗೆ ಸಿಕ್ಕು ಸಾಯುವಾಗ ತಾನೊಬ್ಬನೆ ಇದ್ದ ಷ್ಟನ್ನು ತಿಂದು ಬದುಕಬೇಕೆಂಬುದು ಸಂಪದ್ಧರ್ಮ. ಅಹುತಿಯಾದವನಿಗೆ ಆಪದ್ಧರ್ಮ. (ಆಹುತಿಕೊಳ್ಳುವ) ಸ್ವಾರ್ಥ ಸಂರಕ್ಷಕನಿಗೆ ಇದು ಸಂಪದ್ಧರ್ಮ'ವೇ ಸರಿ ಎನುತ್ತಾನೆ. ವಿಶ್ವಾಮಿತ್ರನು ಈ ಮಾಂಸಕ್ಕೆ ನಾಲಗೆ ಚಾಚುವುದು ಕೇವಲ ಸ್ವಾರ್ಥ ಬುದ್ಧಿಯಿಂದ. ಚಾಂಡಾಲ ಮುನಿವರ್ಯನಿಗೆ ಮತ್ತೂ ಹೇಳುತ್ತಾನೆ: 'ನನ್ನಂತಹ ಚಾಂಡಾಲನಿದ್ದಲ್ಲಿ ಮಾತ್ರ ನೀವು ಶ್ರೇಷ್ಠ. ಇಲ್ಲದಿದ್ದರೆ ಯಾರಿಗೆ ಶ್ರೇಷ್ಠ ನೀವು? ನಾನು (ಜೀವಂತವಾಗಿ) ಇದ್ದರೆ ಮಾತ್ರ ನನ್ನ ಯೋಗಕ್ಷೇಮದ ವಿಚಾರ. ಇಲ್ಲವಾದರೆ? ನಿಮ್ಮ ಶ್ರೇಷ್ಠತೆಗೆ, ನಿಮ್ಮ ತಪಸ್ಸಿಗೆ ನನ್ನ ಅಸ್ತಿತ್ವ ಅಗತ್ಯವಿದೆ. ಆದುದರಿಂದ ಮೊದಲು ನಾನು ಬದುಕ ಬೇಕಲ್ಲವೆ– ಆ ಮಾಂಸವನ್ನು ತಿಂದು? ಆದರೆ ಕ್ಷುತ್‌ಪೀಡೆಯಿಂದ ಪ್ರಾಣಾಂತಿಕವಾಗಿ ತ್ರಸ್ತನಾದ ಮುನಿಶ್ರೇಷ್ಠನು ಬಲಾತ್ಕಾರದಿಂದ ಧಾವಿಸಿ ಚಾಂಡಾಲನ ಪಾಲಿನ ಮಾಂಸದ ತುಣುಕನ್ನು ತಿನ್ನುತ್ತಾನೆ. ಪುಣ್ಯದೊಡನೆ ಅವನ ಹಸಿವೆಯೂ ಹಿಂಗುತ್ತದೆ. ದೇವೇಂದ್ರನು

ತೃಪ್ತನಾಗುತ್ತಾನೆ, ಅಬ್ಬರಿಸಿ ನಗುತ್ತಾನೆ. ಇಂದು ಶಾಶ್ವತವಾಗಿ ಸೋತಿತು ಮಾನವ ಕುಲ, ತನ್ನ ಗದ್ದುಗೆ ಸ್ಥಿರವಾಯಿತು ಎಂದು ಹರ್ಷಿಸುತ್ತಾನೆ. ಇನ್ನುಮೇಲೆ ಯಥೇಚ್ಛ ವರ್ಷಿಸು ಎಂದು ಮೇಘರಾಜನಿಗೆ ಆದೇಶ ಕೊಡುತ್ತಾನೆ.

ಶ್ರೀರಂಗರ ವಿಚಾರ ಪ್ರಧಾನ ನಾಟಕದ ಮಾದರಿಯಿದು. ಕಥೆಗೆ ಮಹಾಭಾರತದ ಶಾಂತಿಪರ್ವದ ಆಧಾರವಿದೆ. ನಾಟಕವು ಚಿಕ್ಕದಿದ್ದರೂ ಅದರ ಪರಿಣಾಮ ಚಿಕ್ಕದಲ್ಲ, ಚಿರವಾಗಿ ಉಳಿಯುವಂತಹದು. ಒಬ್ಬ ನಿರದ್ಯೋಗಿ ಬ್ರಾಹ್ಮಣ ತರುಣನ ಕಂಗಾಲ ಚಿತ್ರಣವು ಎಷ್ಟೊಂದು ವಾಸ್ತವಪೂರ್ಣವಾಗಿ ಬಂದರೂ ಈ ನಾಟಕದ ಮಾರ್ಮಿಕತೆಯೇ ಮಾರ್ಮಿಕತೆ ಎಂದು ಹೇಳಬಹುದು.

ಇಂದು ಸುಶಿಕ್ಷಿತ ನಿರುದ್ಯೋಗಿಗಳ ಸಮಸ್ಯೆಯನ್ನು ಬಿಡಿಸುವುದಕ್ಕೆ ತಜ್ಞ ಸಮಿತಿಗಳು ಅಂಕಿ ಸಂಖ್ಯೆಗಳಿಂದ ಗಣಿತ ಗುಣಿತಗಳನ್ನು ಮಾಡುತ್ತಿರಬಹುದು. ದ್ವಿತೀಯ ಪಂಚವಾರ್ಷಿಕ ಯೋಜನೆ ನಿರುದ್ಯೋಗ ಸಮಸ್ಯೆಯನ್ನು ನಿವಾರಿಸಲು ಹಣವನ್ನು ಧಾರಾಳವಾಗಿ ವೆಚ್ಚಮಾಡಿ ಹವಣಿಸುತ್ತಿರಬಹುದು. ನಿರುದ್ಯೋಗದ ಅಂಕಿ ಸಂಖ್ಯೆಯ ಚಿತ್ರಣಕ್ಕಿಂತ ಹಸಿವೆಯ ಕಂಗಾಲಸ್ಥಿತಿಯ ನಾಟ್ಯ ನಿರೂಪಣೆಯೇ ಮರ್ಮವೇದ್ಯವಾದೀತು. ನಾಟ್ಯ ನಿರೂಪಣೆಯಲ್ಲೂ ಭಾವನಾವೇಶದ ವಾಚ್ಯಾರ್ಥಕ್ಕಿಂತ ವಿಚಾರಪ್ರಧಾನವಾದ ಸೂಚ್ಯಾರ್ಥವೆ ಹೆಚ್ಚು ಪ್ರಬಲ ಪರಿಣಾಮವನ್ನುಂಟುಮಾಡುತ್ತದೆಯೆನ್ನಬಹುದು ಒಮ್ಮೊಮ್ಮೆ.

ಹೀಗೆ ಹೇಳಿ ಭಾವನಾಪ್ರಧಾನವಾದ ಸ್ಥಾನಮಾನವನ್ನು ಕಡಿಮೆ ಮಾಡಬೇಕೆಂಬ ಉದ್ದೇಶವಿಲ್ಲಿಲ್ಲ. ಜೀವನದ ನೋವು ನಲಿವುಗಳನ್ನು ಮೂಡಿಸುವ ನಾಟಕ ಬುದ್ಧಿ ಭಾವನೆಗಳ ಸಂಗಮವಾಗಿರುತ್ತದೆ. ಒಂದರಲ್ಲಿ ವಿಚಾರಪ್ರಧಾನವಾಗಿದ್ದರೆ ಇನ್ನೊಂದರಲ್ಲಿ ಭಾವನೆ ಪ್ರಧಾನವಾಗಿರಬಹುದು. ಹೆಚ್ಚಾಗಿ, ಕೈಲಾಸಂರ ಸ್ತ್ರೀ–ಪುರುಷರ ಪಾತ್ರಗಳೆರಡೂ ಭಾವನಾಪ್ರಧಾನವೇ ಎಂದು ಹೇಳಬಹುದು; 'ಸಾತು ತವರ್ಮನೆಯು' ನಾಗತ್ತೆ, 'ಟೊಳ್ಳು ಗಟ್ಟಿಯ' ಮಾಧು, 'ತಾಳೀಕಟ್ಟೋಕ್ಕೂಲೀನೆ' ಯ ನರಸಿಂಹಯ್ಯ ಮೊದಲಾದ ವ್ಯಕ್ತಿಗಳು ಒಂದೊಂದು ಸನ್ನಿವೇಶದಲ್ಲಿ ನಮ್ಮ ಕಣ್ಣು ತೋಯಿಸುತ್ತವೆ, ಹೃದಯವನ್ನು ತಲಮುಲಗೊಳಿಸುತ್ತವೆ, ಸಂತಾಪದಿಂದ ಕೆರಳಿಸುತ್ತವೆ. ಕೈಲಾಸಂರಲ್ಲಿ ಇಬ್ಸೆನ್‌ನ ನಿಶ್ಚಲ ಧೋರಣೆ, ಷಾನ ಜಾಣ್ಮೆಯ ಕಿಡಿ, ಗಾಲ್ಸವರ್ದಿಯ ಭಾಷೆಯ ಮಾರ್ಮಿಕತೆಗಳು ಮುಪ್ಪುರಿಗೊಂಡಿವೆ ಎಂದು ವಿಮರ್ಶಕರು ನುಡಿಯುವುದೂ ಸರಿಯೆನಿಸಬದುದಾಗಿದೆ. ಟೊಳ್ಳುಗಟ್ಟಿಯ ಪುಟ್ಟು–ಮಾಧು ಅವರ ಪಾತ್ರಗಳನ್ನು ರಂಗದಲ್ಲಿ ನೋಡಿ, ಕೊನೆಯ ದೃಶ್ಯದಲ್ಲಿ ಮಾಧೂ ಹೊಗೆಯೊಳಗೆ ನುಗ್ಗಿ ತಂದೆ–ತಾಯಿಗಳನ್ನು ಪಾರುಮಾಡಿ, ಬೆಂಕಿಯೊಳಗೆ ನುಗ್ಗಿ ವ್ಯರ್ಥವಾಗಿ ಪುಟ್ಟುವನ್ನು ಹುಡುಕಾಡಿ ಮೂರ್ಛೆಗೊಂಡು ಹೊರಬಂದು ಬಿದ್ದಾಗ ನಮ್ಮ ಹೃದಯ ಕನಿಕರದಿಂದ ತಳಮಳಿಸುತ್ತದೆ. 'ಟೊಳ್ಳು ಟೊಳ್ಳೇ, ಗಟ್ಟಿ ಗಟ್ಟಿಯೇ' ಎಂಬ ಮಾತನ್ನು ತೋರಿಸುವುದಕ್ಕಾಗಿ ಇಲ್ಲಿ ಸನ್ನಿವೇಶವನ್ನು ಕಲ್ಪಿಸಿದ್ದರೂ ಇಲ್ಲಿ ನಾಟಕಕಾರರೊಬ್ಬ ನೀತಿ ಪ್ರಚಾರಕರೆಂಬ ಭಾವನೆ ಮೂಡಿ ಬಂದರೂ 'ಟೊಳ್ಳು ಗಟ್ಟಿ' ಕಲಾತ್ಮಕತೆಯಿಂದ ಕೂಡಿದ ವಿಚಾರಪ್ರಧಾನ ನಾಟಕ. 'ಅಮ್ಮಾವ್ರ ಗಂಡ' ದಲ್ಲಿ ಕಲಿತೂ ಪತಿಪರಾಯಣೆಯೆನಿಸಿ ಸಹನೆಯ ಮೂರ್ತಿಯಾದ ಕಮಲೂ ಸರೋಜಳ ಹೃದಯ ಪರಿವರ್ತನೆ ಮಾಡುತ್ತಾಳೆ. ಅತಿಸಹನೆಯು ಕಮಲೂನಲ್ಲಿ ಒಂದು ದೌರ್ಬಲ್ಯ

ವಾಗಿರಬಹುದು. ಆದರೆ 'ಕ್ಲಬ್‌ಬರ್ಡ್' ಆಗಿ ತನ್ನ ಗೂಡನ್ನೆ ಮರೆತ ಈ ಹಕ್ಕಿ–ಸರೋಜಳಿಗಾಗಿ ಕಮಲೂನ ಪಾತ್ರ ಅಗತ್ಯವೆನಿಸುತ್ತದೆ. ನಮ್ಮ ನಮ್ಮ ಪತಿಗಳ ಹೃದಯವನ್ನು ಅರಿತುಕೊಂಡೆವೊ ಅವರು ಬೇಬಿಗಳಲ್ಲದೆ ಇನ್ನೇನು? ಬಗಲೊಳಗಿನ ಬೇಬಿ ಕಿರಲಿದಾಗ ಹಾಲು, ಈ ದೊಡ್ಡ ಬೇಬಿ ಕಿರಲಿದಾಗ ಕಾಫಿ ಕೊಟ್ಟರಾಯಿತು–ತಾವೆ ಸರಿಹೋಗುತ್ತವೆ ಎಂಬ ಮಾತನ್ನಾಡುವ ಕಮಲೂನ ಅನುಭವವೂ ಅವಳ ಸಹನೆಯಷ್ಟೆ ಗಮನಾರ್ಹವಾದದ್ದು. ವಿಚಾರಪ್ರಧಾನ (?) ವಾದ ವೇಶ್ಯಾಜೀವನ ನಿರೂಪಣೆಯ ಇಂದಿನ ಹಲವು ಕಾದಂಬರಿಗಳು ವಿಚಾರವನ್ನು ಪ್ರಚೋದಿಸುತ್ತವೆಯೋ, ಇನ್ನೇನಾದರೂ ಪ್ರಚೋದಿಸುತ್ತವೆಯೋ ಆ ಮಾತು ಬೇರೆ. ಆದರೆ ಕೈಲಾಸಂರ 'ಸೂಳೆ' ಸಾವಿರ ಗರತಿಯರಿಗೆ ಆದರ್ಶದ ಪಾಠ ಹೇಳುವ ಸಾಮರ್ಥ್ಯವುಳ್ಳವಳಾಗಿದ್ದಾಳೆ. ತನ್ನ ಮಗಳು ತಾನು ಜಾರಿದ ಹಾದಿಯಲ್ಲಿ ಜಾರದಿರಲಿ ಎಂದು ಮಗಳ ಕಲ್ಯಾಣಕ್ಕಾಗಿ ಮಗಳ ಜೀವವನ್ನೇ ತೆಗೆದುಕೊಂಡ ತಾಯಿಯ ಹೃದಯ ಬಾಳಿನ ಬೆಂಕಿಯಲ್ಲಿ ಏನುಪರಿ ನೊಂದು ಬೆಂದು ಬವಣೆಪಟ್ಟಿರಬೇಡ? ಆ ತಾಯಿಯ ಹೃದಯವೇ ಒಂದು ಅಗ್ನಿಕುಂಡವಾಗಿರಬೇಕು. ಸೂಳೆಯಲ್ಲಿ ಮಾತೃಹೃದಯದ ಆದರ್ಶವನ್ನು ಮೂಡಿಸಿದ ಸಮಾಜದ ಕ್ರಾಂತಿಕಾರರು ಕೈಲಾಸಂ. ಇಬ್ಸೆನ್ನನ ಪ್ರಭಾವ ಸೂಳೆಯಲ್ಲಿದೆ. ವ್ಯಕ್ತಿಸ್ವಾತಂತ್ರ್ಯವೇ ಇಬ್ಸೆನ್‌ನ ಹೋರಾಟದ ಉದ್ದಿಶ್ಯ. ಗಂಡನಿಗೆ ಹೆಂಡತಿ ಗುಲಾಮಳು, ಸಂಪ್ರದಾಯಕ್ಕೆ ಸಮಾಜ ಗುಲಾಮ, ಪರಿಸ್ಥಿತಿಗೆ ಪತಿತರು ಗುಲಾಮರು, ಬಲ್ಲಿದವನಿಗೆ ಬಡವ ಗುಲಾಮ, ಬುದ್ಧಿವಂತ ಮೋಸಗಾರನಿಗೆ ಮುಗ್ಧ ಪಾಮರನು; ಗುಲಾಮ. ಈ ಎಲ್ಲ ಗುಲಾಮಗಿರಿಯ ಬೇಡಿಗಳನ್ನು ಕತ್ತರಿಸಲು ಇಬ್ಸೆನ್‌ನಂತೆ ಕೈಲಾಸಂ ಲೇಖನಿಯನ್ನು ಮಸೆದರು.

ನಾಟಕವು ಕಾಂತಾಸಮ್ಮಿತಿ ಎಂದು ಹೇಳುವರು. ಕೈಲಾಸಂರವರ ಸ್ತ್ರೀಪಾತ್ರಗಳು ಹೇಳುವ ಮಾತು ಇದಕ್ಕೂ ತೂಕವುಳ್ಳ ಮಾತೃಸಮ್ಮಿತಿಯವು. ಟೊಳ್ಳುಗಟ್ಟಿಯಲ್ಲಿ ತಾಯಿ ಭಾಗೀರಥಮ್ಮ ಪುಟ್ಟು ಮಾಧೂ ಇಬ್ಬರಿಗೂ ಒಂದು ಮಾತು ಕಲಿಸಿದ್ದಳು–'ಈ ಭೂಮಿಲ್ ಜೀವ್ಸೋಕೆ ದೇವ್ರಿಗ್ ಕೊಡೋಬಾಡ್ಗೆ ಸುತ್ಮುತ್ಲೂ ಇರೋ ಜನರಿಗೆ ಉಪಯೋಗವಾಗಲಿರೋದು' ಎಂದು. ಈ ಮಾತನ್ನು ಪುಟ್ಟು ಮರೆತ. ಮಾಧು ಆಚರಿಸಿ ತೋರಿಸಿದ. ಎಂತಹ ಕಿಮ್ಮತ್ತಿನ ಮಾತನ್ನು ಕೈಲಾಸಂ ಕೊಟ್ಟಿದಾರೆ ನಮಗೆ? 'ಸಾತೂ ತವರ್ಮನೆ'ಯಲ್ಲಿ ಸಾತೂನ ತಾಯಿ ಮಗಳಿಗೆ ಹೇಳುತ್ತಾಳೆ: "ಸಾತು ಒಂದ್ಮಾತು ಹೇಳ್ತೀನೆ ಸಾಯೋವರ್ಗೂ ಮರೀಬೇಡ. ಲೋಕದಲ್ಲಿ ಕಷ್ಟಪಟ್ಟು ನರಳೋವ್ರು ದೇವರಿಗೆ ಸಮಾನ–ದೇವರಿಗಿಂತಲೂ ಜಾಸ್ತಿ". ಈ ಮಾತನ್ನು ಹೇಳಿಸಿದ ನಾಟಕಕಾರನ ಹೃದಯವೂ ಮಾತೃಹೃದಯವೇ. ಆ ಹೃದಯವು ನುಡಿದ ಮಾತೂ ಮಾತೃಸಮ್ಮಿತಿ.

ಹೀಗೆ ಕೈಲಾಸಂರಲ್ಲಿ ವಿಚಾರಕ್ಕಿಂತಲೂ ಭಾವನೆ ಪ್ರಧಾನವಾಗಿದೆ ಎಂದು ಹೇಳಬಹುದು. ಶ್ರೀರಂಗರಲ್ಲಿಯ ಭಾವನೆಯ ಅಂಶ ಕೈಲಾಸಂರಲ್ಲಿಯ ವಿಚಾರ ಪ್ರಧಾನತೆಯ ಅಂಶ ಅಷ್ಟೆ ಪ್ರಮಾಣದವೆನ್ನಬಹುದೆ ಒಂದು ತುಲನಾತ್ಮಕ ದೃಷ್ಟಿಯಿಂದ? ಒಂದು ಉದಾಹರಣೆಯಿಂದ ಇದು ಇನ್ನೂ ಸ್ಪಷ್ಟವಾಗಬಹುದು. ಮದುವೆಯಾಗದ ಒಂದು ಹೆಣ್ಣು, ಇಂತಹ ಒಂದು ಹೆಣ್ಣಿನ ತಂದೆ— ಈ ಎರಡೂ ವ್ಯಕ್ತಿಗಳು ಸಂಪ್ರದಾಯ ಸಮಾಜಕ್ಕೆ ಕಾರುಣ್ಯದ ಮೂರ್ತಿಗಳಂತೆ. ಶ್ರೀರಂಗರು 'ಅಶ್ವಮೇಧ' ಎಂಬ ನಾಟಕವನ್ನು ಬರೆದಿದ್ದಾರೆ. ವೆಂಕಪ್ಪ ಎಂಬ ಗೃಹಸ್ಥ ಮಗಳು ಕಮಲೆಗೆ ವರ ಹುಡುಕುತ್ತ ದಕ್ಷಿಣದ ರಾಮೇ

ಶ್ವರ ಯಾತ್ರೆ ಮುಗಿಸಿ ಉತ್ತರದಲ್ಲಿ ಕಾಶೀ ಪಟ್ಟಣದವರೆಗೂ ಬರುತ್ತಾನೆ. ಎಲ್ಲಿಯೂ ಅವನಿಗೆ, ಎಂದರೆ ಅವನ ಮಗಳಿಗೆ, ವರನೆಂಬ ವಸ್ತು ಸಿಗುವುದಿಲ್ಲ. ಕೊನೆಗೆ ಸಂತಾಪದಿಂದ ರೋಸಿ ವೆಂಕಪ್ಪ ಮಗಳ ಹಣೆಗೆ, 'ಉರ್ವಿಯೊಳ್ ವೆಂಕಪ್ಪ ಪಡೆದ ಕುವರಿ ಕಮಲೆಯೊರ್ವಳ್' ಎಂದು ಪಟ್ಟಕಟ್ಟಿ ಯಾರಾದರೂ ಈಕೆಯನ್ನು ತಡೆಯುವ ಸಾಮರ್ಥ್ಯವಿದ್ದರೆ ತಡೆಯಿರಿ—ಎಂದು ಅಶ್ವಮೇಧದ ಕುದುರೆಯನ್ನು ಬಿಡುವಂತೆ ತನ್ನ ಮಗಳನ್ನು ಬಿಡುತ್ತಾನೆ. ಸಮಾಜದ ಸಮಸ್ಯೆಯನ್ನು ಭೂತಗನ್ನಡಿಯಿಂದ ನೋಡಿ ನಗೆಯ ಬಣ್ಣಗೂಡಿಸಿ ಚಿತ್ರಿಸಿದ ಈ ಸಂಸಾರ ಚಿತ್ರ ವಿಚಾರಪ್ರಧಾನವಾದುದು. ಕೈಲಾಸಂರ 'ಬಹಿಷ್ಕಾರ' ವೂ ಕುಮಾರಿಯೊಬ್ಬಳ ದುರಂತವನ್ನು ಚಿತ್ರಿಸುತ್ತದೆ. ಮನೆಯಲ್ಲಿ ಮದುವೆಯಾಗದ ಬೆಳೆದ ಮಗಳನ್ನಿಟ್ಟುಕೊಂಡು ಕುಳಿತುದಕ್ಕಾಗಿ ಧರ್ಮಾಧಿಕಾರಿಗಳು ಮನೆಯ ಯಜಮಾನನನ್ನೂ ಬಹಿಷ್ಕರಿಸುತ್ತಾರೆ. ಸುತ್ತಲಿನ ಪರಿಸರದಲ್ಲಿ ತಲೆಯೆತ್ತದಂತಾಗಿ, ಸಮಾಜದ ಬಿರುನುಡಿಗೆ ಪಕ್ಕಾಗಿ ಕುಮಾರಿ ನರಸು ತನ್ನ ಸಮಸ್ಯೆಯನ್ನು ತನ್ನ ಪ್ರಾಣದೊಡನೆ ನೀಗುತ್ತಾಳೆ. ಆವೇಶ, ಸಂತಾಪ, ಕರುಣೆ, ಕನಿಕರಗಳಿಂದ ಕೂಡಿದ ಕೈಲಾಸಂರ 'ಬಹಿಷ್ಕಾರ' ವು ಒಂದು ಪ್ರಭಾವೀ ನಾಟಕ, ಶ್ರೀರಂಗರ ಅಶ್ವಮೇಧವು ವಿಡಂಬನೆಯ ಮೂಲಕವೂ ಅಷ್ಟೆ ಪ್ರಭಾವಿಯಾಗಿದೆ ಎನ್ನಬಹುದು. ಶ್ರೀ ದ. ರಾ. ಬೇಂದ್ರೆಯವರ 'ನಗೆಯ ಹೊಗೆ'ಯಲ್ಲಿ ಕೈಲಾಂಸರ ದುರಂತ ಕುರುಣೆ, ಶ್ರೀರಂಗರ ಪ್ರಚೋದಕ ವಿಡಂಬನೆ ಎರಡೂ ಇವೆ—ವಿಡಂಬನೆಯ ನಗೆ, ದುರಂತದ ಹೊಗೆ. ವಿಶ್ವನಾಥರಾಯರ ಮಗಳು ಭಾಗೀರಥಿ ಪ್ರಬುದ್ಧವಾಗಿಯೂ ಅವಿವಾಹಿತ ದುರ್ದೈವಿಯಾಗಿ ಊರ ವಿಧವೆಯರ ಥಂಡಾಥಂಡದ ಆಡಿಕೆಗೆ ಗುರಿಯಾಗುತ್ತಾಳೆ. ವಿಶ್ವನಾಥರಾಯ ವಿಶ್ವಪ್ರಯತ್ನ ಮಾಡಿದರೂ ಭಾಗೀರಥಿಗೆ ಬಾಸಿಂಗ ಬಲ ಒದಗಿ ಬರುವುದಿಲ್ಲ. ಕೈಲಾಸಂರ ನರಸೂನಂತೆ ಭಾಗೀರಥಿಯೂ ಜನ್ಮನೀಗುತ್ತಾಳೆ, (ಮೈಸುಟ್ಟುಕೊಂಡು). ಸರಿ ಇನ್ನಾದರೂ ಜನರ ಆಡಿಕೆ ನಿಂತಿತೆಂದರೆ ಇಲ್ಲ. ಸ್ಮಶಾನದಲ್ಲಿ ಅವಿವಾಹಿತ ದೇಹವು ಸುಡುತ್ತಿರುವಾಗ ಒಬ್ಬ ಅನ್ನುತ್ತಾನೆ.— 'ನೀವೇನ ಅನ್ರಿ, ಆ ಹುಡುಗಿ ತಾನಾಗೆ ಸುಟ್ಟುಗೊಂಡಿದ್ದಾಳು ಅಂತ ನನಗನಸೂದಿಲ್ಲಾ'. ಮತ್ತೊಬ್ಬ ರಾಯರಿಗೆ ಹೇಳುತ್ತಾನೆ 'ಏಳ್ರಿ ವಿಶ್ವನಾಥರಾಯ್ರು, ಇನ್ನೇನು ನಿಮ್ಮ ಚಿಂತಿ ಸುಟ್ಟು ಹೋಯ್ತು.' ರಾಯರ ಮಿತ್ರ, ಅನ್ನುತ್ತಾನೆ 'ಬಡಕೊಳ್ಳಿಕ್ಕೆ ಬೂದಿ ಮಾತ್ರ ತುಂಬಾ ಉಳೀತು.'

ಕೈಲಾಸಂರ 'ಹೋಂರೂಲಿ'ನಲ್ಲಿ ವಿಚಾರವಿದೆ, ವಿಡಂಬನವಿದೆ, ವಿನೋದವಿದೆ. ಅತ್ತೆಯ ಕಾಲವಾಯಿತು, ಇದು ಸೊಸೆಯ ಕಾಲ ಎಂದು ಸಾಧಿಸುವ ವೆಂಕಮ್ಮ. ಇನ್ನೂ ತನ್ನದೇ ಮಾತು ಮಗನು ನಡಸಬೇಕೆನ್ನುವ ತಾಯಿ ಸುಬ್ಬಮ್ಮ. ಇಬ್ಬರ ಮಧ್ಯದಲ್ಲಿ ನಾಟಕವಾಡುವ ರಾಮಣ್ಣ ಹೇಳುತ್ತಾನೆ : 'There is only one master in the house and that is the mistress, ನಾಟಕದ ಮುಕ್ತಾಯದಲ್ಲೂ ತಾಯಿ ಸುಬ್ಬಮ್ಮ ಮಗನಿಗೆ ಹಂಗಿಸಿ ಹೇಳುತ್ತಾಳೆ ಯಾರೊ 'ಯಜಮಾನ್ರು'–ಎಂದು ಕೂಗುತ್ತಿದ್ದಾರೆ. ನಿನ್ನ ಬೋಳ್ಸಿದ ಮಿಾಸೇನ ಆಕೇಗೆ ಹಚ್ಚಿ ತೋರಿಸು ಯಜಮಾನ್ರು ಯಾರೂ ಅನ್ನೋದನ್ನ. ಪ್ರಪಂಚವೆಂದರೆ ಒಂದಿಲ್ಲೊಂದು ಪಾಣಿಪತ್ತೆ—ಗಂಡ–ಹೆಂಡತಿ, ಅತ್ತೆ–ಸೊಸೆ, ಅಣ್ಣ–ತಮ್ಮ ಇವರ ನಡುವೆ. ಶ್ರೀರಂಗರ 'ಪ್ರಪಂಚ ಪಾಣಿಪತ್ತು'. ಶ್ರೀ ರಂ. ಶ್ರೀ. ಮುಗಳಿ ಅವರ 'ಮನೋರಾಜ್ಯ' ಮತ್ತು 'ಪಾಲಿನಕೊಳ್ಳಿ'ಗಳು ಅಣ್ಣ–ತಮ್ಮಂದಿರ ಸಂಬಂ

ಧವನ್ನು ಚಿತ್ರಿಸುತ್ತವೆ. 'ಪ್ರಪಂಚ: ಪಾಣಿಪತ್ತಿ'ನ ಶ್ರೀಪತಿ, 'ಮನೋರಾಜ್ಯ'ದ ಧ್ರುವ, ಸಾತ್ವಿಕ ಗುಣಿಗಳು. ಸತ್ವ ರಜೋತಮಗಳ ಏರಾಟವೇ ಮೂವರು ಸೋದರರ ತಿಕ್ಕಾಟ. ವಿವಾಹ, ದಾಂಪತ್ಯಗಳ ವಿಷಮತೆಯನ್ನು ಚಿತ್ರಿಸುವ ವಿಚಾರಪ್ಲುತನಾಟಕಗಳು ಇತರ ಭಾಷಾಕೃತಿಗಳಿಂದ ಸ್ಫೂರ್ತವಾದರೂ ಶ್ರೀ ಗರೂಡ ಸದಾಶಿವರಾಯರ 'ವಿಷಮ ವಿವಾಹ,' ಶ್ರೀ ವಾಮನರಾಯರ 'ಸಂದೇಹ ಸಾಮ್ರಾಜ್ಯ'ಗಳಿಂದ ಮೊದಲಾದುವು ಎನ್ನಬಹುದು. ಹಿರಣ್ಣಯ್ಯನವರ 'ದೇವದಾಸಿ' ಜನಸಾಮಾನ್ಯರನ್ನು ಕೆರಳಿಸಿ ವಿಚಾರಿಸಹಚ್ಚಿತು.

ಕಾರಂತರ 'ದೃಷ್ಟಿ ಸಂಗಮ'ವು ಹಳೆ—ಹೊಸ ವಿಚಾರಗಳ ಘರ್ಷಣೆಯಲ್ಲಿ ನಡುವಣ ನೋಟವನ್ನು ಸೂಚಿಸುತ್ತದೆ. ಸಂಪ್ರದಾಯವಂತ ಹೆಣ್ಣುಮಕ್ಕಳಿಗೆ ದೊಡ್ಡ ಕುಂಕುಮ ಸುಂದರವೆನಿಸಿದರೆ ಸುಧಾಕರರಳಿಗೆ ಸಣ್ಣ ಕುಂಕುಮ ಸುಂದರವಾಗಿ ತೋರಬಹುದು. ಅದು ಆಗಿನ ಸೌಂದರ್ಯದೃಷ್ಟಿ, ಇದು ಈಗಿನ ಸೌಂದರ್ಯದೃಷ್ಟಿ. ದೊಡ್ಡ ಕುಂಕುಮದವರು ನಿಷ್ಠರು ಸಣ್ಣ ಕುಂಕುಮದವರು ಭ್ರಷ್ಟರು ಎಂದು ಹೇಳಲಿಕ್ಕಾಗದು. ಘರ್ಷಣೆ ಬರುವುದು ಯಾವಾಗಲೂ ವಿಚಾರ ಧೋರಣೆಯಲ್ಲಿ. ಸಾಮಾಜಿಕ ಧಾರ್ಮಿಕ ವಿಚಾರಗಳಲ್ಲಿ ಹಳೆಯ—ಹೊಸ ದೃಷ್ಟಿಕೋನದ ಮೂಲಕ ಉದ್ಭವಿಸುವ ಭಿನ್ನಾಭಿಪ್ರಾಯಗಳ ತಿಕ್ಕಾಟವೆ ವಿಚಾರ ಪ್ರಧಾನ ನಾಟಕಗಳ ಮೂಲವಸ್ತು ಎಂದು ಹೇಳಬಹುದು. ಧರ್ಮದ ಹೆಸರಿನಲ್ಲಿ ಪೂಜಾರಿಗಳು ನಡಸುತ್ತಿರುವ ಅಧರ್ಮ, ಅತ್ಯಾಚಾರ, ಸುಲಿಗೆ, ಸೂಳೆಗಾರಿಕೆಗಳನ್ನು ಕಾರಂತರು 'ಗರ್ಭಗುಡಿ' ಯಲ್ಲಿ ನಿರ್ಭಯವಾಗಿ ನಿರೂಪಿಸಿದ್ದಾರೆ. ಧಾರ್ಮಿಕ, ಸಾಮಾಜಿಕ ಸ್ವರೂಪಗಳು ಕಾಲಾನುಸಾರವಾಗಿ ಬದಲಾಗುವುದು ಅನಿವಾರ್ಯ. ಅಸ್ಪೃಶ್ಯತೆಯು ಒಂದು ಅಪರಾಧವೆನಿಸಿ ದೇವಾಲಯ ಪ್ರವೇಶವು ಜಾತಿ ಮತ ಪಂಥಗಳ ಭೇದವಿಲ್ಲದೆ ಸರ್ವರಿಗೂ ಮುಕ್ತದ್ವಾರವಾಗುವ ಕಾಲಬಂದಿದೆ. ಶಾಸನದಿಂದ ವಿಧಿಸಲ್ಪಟ್ಟ ಈ ಸಾಮಾಜಿಕ ಬದಲಾವಣೆ ಅನಿವಾರ್ಯವೆಂದು ನಾಟಕಕಾರ ಶ್ರೀ ದ. ರಾ. ಬೇಂದ್ರೆಯವರು ಎರಡು ದಶಕಕ್ಕೂ ಮುಂಚಿತವೇ ಹೇಳಿದ್ದಾರೆ 'ಉದ್ಧಾರ'ದಲ್ಲಿ. ಗುಡಿಯಮೂರ್ತಿ ಭೈರವೇಶ್ವರನು ವೀರಶೈವನೊ ಬ್ರಾಹ್ಮಣನೊ ಎಂಬ ತಿಕ್ಕಾಟದಲ್ಲಿ 'ಪರದೇಶಿ'ಯಾದ ದೇವರು ಕೊಡತಿಯ ಏಟು ತಿಂದ. ಈ ಹಾಳುಬಿದ್ದ ಗುಡಿಯಲ್ಲಿ ಅಸ್ಪೃಶ್ಯರು ತಮ್ಮ ದೇವರನ್ನು ಸ್ಥಾಪಿಸುತ್ತಾರೆ. ಈ ತಿಕ್ಕಾಟದಲ್ಲಿ ವಿಘ್ನೇಶ್ವಭಟ್ಟರೂ ರುದ್ರಯ್ಯನವರೂ ಬಲಿಯಾಗುತ್ತಾರೆ. ಧರ್ಮದ ಜಗಳದಲ್ಲಿ ಮನುಷ್ಯ ದೇವರನ್ನೆ ಸಂಹರಿಸತೊಡಗಿದ್ದಾನೆ. 'ಸೋಮನಾಥ'ನಿಗೆ ಒದಗಿದ ದುರಂತ 'ವಿಜಯವಿಠ್ಠಲ'ನಿಗೂ ಒದಗಿತು. ಶ್ರೀ ಎಂ. ಆರ್. ಶ್ರೀ. ಅವರು 'ನಾಗರಿಕ'ದಲ್ಲಿ ಮನುಷ್ಯನಿಂದ ತನ್ನನೆ ತಾನು ರಕ್ಷಿಸಿಕೊಳ್ಳದ ದೇವರು ಮನುಷ್ಯನನ್ನೇನು ರಕ್ಷಿಸುತ್ತಾನೆ ಎಂದು ಉದ್ಗಾರವೆತ್ತಿದ್ದಾರೆ. 'ನಾಗರಿಕ' ನಾಸ್ತಿಕನೆನ್ನಬೇಕೊ, ಆಸ್ತಿಕನೆನ್ನಬೇಕೊ, ? ಕೈಲಾಸವಾಸಿಯಾದ ಶಿವನು ಹೊಲೆಯನ ಹೃದಯದಲ್ಲಿ ತನ್ನ ಮಂದಿರವನ್ನು ಕಂಡುಕೊಳ್ಳುತ್ತಾನೆ. ಶ್ರೀ. ಕೆ. ವ್ಹಿ. ಪುಟ್ಟಪ್ಪನವರ 'ಜಲಗಾರ'ದಲ್ಲಿ.

'ಧಾರ್ಮಿಕ ತತ್ವವಾದದಂತೆ ರಾಜಕೀಯ ತತ್ವವಾದವೂ ಸಾಮಾಜಿಕ ಬದಲಾವಣೆಗೆ ಕಾರಣವಾಗಬಹುದು. ಇಂದು ಜಗತ್ತಿನಲ್ಲಿಯೇ ಒಂದು ಸಂಧಿಕಾಲವು ಒದಗಿಬಂದಿದೆ,

ವಿಜ್ಞಾನದ ಅದ್ಭುತ ಪ್ರಗತಿಯಿಂದ ಮಾನವನ ಆರ್ಥಿಕ ಹಾಗೂ ಸಾಮಾಜಿಕ ಜೀವನದಲ್ಲಿ ಕ್ರಾಂತಿಯಾಗಿದೆ. ಹೀಗೆ ಹೊಸದಾಗಿ ಪ್ರಸ್ಥಾಪಿತವಾದ ವಿಚಾರಸರಣಿಯು ಎಲ್ಲಿ ಯಾವ ಬೆಳಕಿಂಡಿಯೊಳಗಿಂದ ನೋಡಿದರೂ ಸಮತೆಯು ನೆಲೆಗೊಂಡ ಮಾನವ ಕುಲದೆದುರು ನಮ್ಮನ್ನು ಒಯ್ದು ನಿಲ್ಲಿಸುತ್ತಿದೆ. ಮಾರ್ಕ್ಸವಾದವು ಈ ಸಮತೆಯ ಅವತಾರವನ್ನು ಬರ ಮಾಡಿಕೊಳ್ಳುವ ಮಾರ್ಗವೊಂದನ್ನು ಸೂಚಿಸುವದಲ್ಲದೆ ಅದನ್ನು ಒಂದೆಡೆಗೆ ಒಂದಿಲ್ಲೊಂದು ರೀತಿಯಿಂದ ಒಳಪಡಿಸಿಕೊಳ್ಳದೆ ಪೂರ್ಣವಾಗಲಾರದು.' (ಶ್ರೀ ವಿ. ಕೃ. ಗೋಕಾಕರ 'ಯುಗಾಂತರ'ದ ಮುನ್ನುಡಿಯಿಂದ.) ಶ್ರೀ. ಗೊಕಾಕರ 'ಯುಗಾಂತರ' ದಲ್ಲಿ ಬರುವ ಮಾರ್ಕ್ಸವಾದಿನಿ ಮೃಣಾಲಿನಿ, ಪ್ರೀತಿ–ಸ್ನೇಹ–ಕರುಣೆ–ಸೌಂದರ್ಯಗಳ ಕವಿ ಹೃದಯದ ಕೋಸಲೇಂದ್ರ ಇವರಿಬ್ಬರಿಗೆ ದೃಷ್ಟಿ ಸಂಗಮವಾದರೆ ಇಂದು ಜಗತ್ತನ್ನೇ ಎದುರಿಸಿದ ಜಟಿಲ ಸಮಸ್ಯೆಗೆ ಒಂದು ಪರಿಹಾರ ದೊರಕೀತು. ಮಾರ್ಕ್ಸವಾದವು ಕಂಡುಕೊಂಡಿರುವ ಸತ್ಯವು ಭೌತಿಕವಾದದ್ದು; ಬುದ್ಧಿ ವಿಜ್ಞಾನಗಳಿಂದ ಮರ್ಯಾದಿತವಾದದ್ದು. ನಮ್ಮ ವೇದೋಪನಿಷತ್ಕಾಲದ ದ್ರಷ್ಟಾರರು ಕಂಡುಕೊಂಡ ಸಚ್ಚಿದಾನಂದವು ನಿತ್ಯವಾದದ್ದು. 'ಕವಿಯು ಇಂದು ಮಾರ್ಕ್ಸವಾದದ ಹಾಗೂ ಅನುಭಾವಗಳ ನಡುವೆ ಒಂದು ಸೇತುವೆ ಕಟ್ಟಿ ಪೂರ್ಣಜೀವನದ ದರ್ಶನವನ್ನು ನಿಚ್ಚಳವಾಗಿರಿಸಬೇಕಾಗಿದೆ,' ಎಂಬ ದೃಷ್ಟಿಯಿಂದ ಶ್ರೀ ಗೋಕಾಕರ 'ಯುಗಾಂತರ'ವು ಒಂದು ಹೊಚ್ಚಹೊಸ ಮಾದರಿಯಾಗಿದೆ. ಇಂದಿನ ಪುನರ್‍ರಚನೆಯ ಕಾಲದಲ್ಲಿ ನಾಳಿನ 'ಹೊಸ ಸಂಸಾರ'ದ ಹೊಸ ಸಮಾಜದ ಸ್ವರೂಪ ಎಂತಾಗಬಹುದೆಂದು ಮುಂಗಂಡಿದ್ದಾರೆ. ಶ್ರೀ ಬೇಂದ್ರೆಯವರು, ಪೆನಶ್ಯನ್‌ದಾರ ಗುಂಡಪ್ಪ ಸ್ವಂತ ಮೊಮ್ಮಗಳಾದ ಮಂದಾರ ಮಾಲೆಯನ್ನು 'ಮಂದಿ'ಯಂತೆ ಕಾಣುವ ಅವಸ್ಥೆಗೆ ಗುರಿಯಾದ ಕಾಲಾಂತರದಲ್ಲಿ. ತನ್ನ ಮನೆ ಮಂದಿಯ ಮನೆಯಂತಾಗಿದೆ. ತನ್ನ ಮೊಮ್ಮಗಳು 'ಮಂದಿ'ಯಾಗಿದ್ದಾಳೆ. ಸ್ವಕೀಯವೆಲ್ಲಾ ಪರಕೀಯವಾಗಿ ಕಾಣುತ್ತಿದೆ.

ರಾಜಕೀಯ ತತ್ವವಾದದಂತೆ ರಾಜಕೀಯ ಸ್ವಾಂತಂತ್ರ್ಯಸಂಗ್ರಾಮವು ಕೃಷ್ಣಕುಮಾರರ 'ತಿರುಗುಪ್ಪಿ'ನಂತಹ ರೋಮಾಂಚನಕಾರಿ ನಾಟಕ ನಿರ್ಮಾಣಕ್ಕೆ ಹಿನ್ನೆಲೆಯಾಗಿದೆ. 'ಬೆಚಾಳೀಸ ಚಳುವಳಿ' 'ತಿರುಗುಪ್ಪಿ'ನಂತಹ ಅನೇಕ ನಾಟಕಗಳಿಗೆ ಸ್ಫೂರ್ತಿಯು ಉಗುಮವಾಗಿದೆ. ಆದರೆ ನಾಟಕಗಳು ಹೊರಬಿದ್ದಿಲ್ಲ.

ವಿಚಾರಪ್ರಧಾನವಾದ ನಾಟಕ, ಪ್ರಹಸನಗಳ ನಿರ್ಮಾಣ ಕಾರ್ಯವನ್ನು ಸರ್ವಶ್ರೀ ಲಕ್ಷ್ಮಣರಾವ ಬೇಂದ್ರೆ, ಪರ್ವತವಾಣಿ, ಕೈವಾರ ರಾಜಾರಾವ್, ಚಿ. ಸದಾಶಿವಯ್ಯ ಮೊದಲಾದವರು ಮುಂದುವರಿಸಿದ್ದಾರೆ.

ಆದರೆ ವಿಚಾರಪ್ರಧಾನ ನಾಟಕಗಳಿರಲಿ, ಭಾವಪ್ರಧಾನ ನಾಟಕಗಳಿರಲಿ, ಇತ್ತೀಚೆಗೆ ಕನ್ನಡದಲ್ಲಿ ನಾಟಕಗಳ ಅಭಾವವೆ ಪ್ರಧಾನವಾಗಿದೆ. ಗೀತ–ನಾಟಕ, ನೃತ್ಯರೂಪಕಗಳಲ್ಲಿ ಹೊಸ ಹೊಸ ಪ್ರಯೋಗಗಳನ್ನು ಸ್ತುತ್ಯವಾಗಿ ಎಸಗಿದ ಕಾರಂತರು ರೇಶನ್ ಕಾಲದ 'ಬಿತ್ತಿದ ಬೆಳೆ'ಯ ನಂತರ ಸಾಮಾಜಿಕ ನಾಟಕ ಕ್ಷೇತ್ರದಲ್ಲಿ ಇನ್ನೇನು ನಮಗೆ ವಿಶೇಷ ಬೆಳೆದುಕೊಟ್ಟಿಲ್ಲ. 'ಮದುವೆಯೊ ಮನೆಹಾಳೊ'ನ ಸಾಮಾಜಿಕ ನಾಟಕಕಾರ ಅ. ನ. ಕೃ. ಅವರು—'ರಜಪೂತ ಲಕ್ಷ್ಮಿ' 'ಜಗಜ್ಜ್ಯೋತಿ ಬಸವಣ್ಣ' 'ಕಿತ್ತೂರ ಚನ್ನಮ್ಮ'ಗಳನ್ನು ಒಧಗಿಸಿದ್ದರೂ–ಕಾದಂಬರೀ ಕೃಷ್ಣರಾಯರೆ ಆಗಿಬಿಟ್ಟಿದ್ದಾರೆ. ಶ್ರೀ

ದ. ರಾ. ಬೇಂದ್ರೆಯವರ ಮಾನಸರಂಗದಲ್ಲಿ ಇನ್ನೂ ಎಷ್ಟೆಷ್ಟೋ ನಾಟಕಗಳು ಹೊಳಹು ಕಂಡಿವೆ. ಬಾಹ್ಯಸೃಷ್ಟಿಯಲ್ಲಿ ಅವು ಬೇಗನೆ ಬೆಳಕು ಕಾಣಬೇಕು. 'ತಾಳೀಕೋಟೆ' 'ಛತ್ರಪತಿ ಶಿವಾಜಿ'ಗಳ ನಂತರ ಶ್ರೀನಿವಾಸರ 'ಚೆನ್ನಬಸವ ನಾಯಕ'ದ ನಾಟಕಾವತಾರವೂ ಆಗಬೇಕು. ಸರಸ 'ಸುಬ್ಬಣ್ಣ' ಸುಂದರ ನಾಟಕವಾಗುವಲ್ಲಿ ಸಂದೇಹವಿಲ್ಲ. 'ತಿರುಪಾಣಿ'ಯನ್ನು ಕೊಟ್ಟ ಅವರು 'ಅನಾರ್ಕಳಿ'ಯನ್ನು ಕೊಟ್ಟುದು ಸಂತೋಷದ ವಿಷಯ. 'ಯಶೋಧರೆ'ಯಲ್ಲಿ ಹೃದ್ಯವಾಗಿ ನವೀನವಾಗಿ ಒಡಮೂಡಿದ ಶ್ರೀನಿವಾಸರ ಕಲ್ಪನೆ, 'ಹೆಬ್ಬೆರಳಿ'ನಲ್ಲಿ ಬೆಳಗಿದ ಶ್ರೀ ಪೈಯವರ ಪ್ರತಿಭೆ, 'ಮಂಡೋದರಿ' 'ನಚಿಕೇತ'ಗಳಲ್ಲಿಯ ಉನ್ನತವಾದ ಶ್ರೀ ಸಿ. ಕೆ. ವೆಂಕಟರಾಮಯ್ಯನವರ ಪಾತ್ರಸೃಷ್ಟಿ ಕೌಶಲ್ಯ, 'ಸೊಹ್ರಾಬ್ ರುಸ್ತುಂ'ದಲ್ಲಿ ಮೂಡಿದ ಶ್ರೀ ವಿ. ಸೀ. ಯವರ ರಚನಾ ನೈಪುಣ್ಯ 'ವಿದ್ಯಾರಣ್ಯ'ರನ್ನು ಒಳನೋಟದಿಂದ ಕಂಡ ಶ್ರೀ ಡಿ. ವಿ. ಜಿ. ಯವರ ಸೂಕ್ಷ್ಮ ದೃಷ್ಟಿಗಳೆಲ್ಲಾ ಇಂದಿನ ಕೊರತೆಯ ಕನ್ನಡ ರಂಗಭೂಮಿಗೆ ಮನಸ್ಸು ಮಾಡಿದರೆ ಅಪಾರ ಉಪಕಾರ ಮಾಡಲು ಸಮರ್ಥವಾಗಿವೆ. ಗತ ಇತಿಹಾಸಕ್ಕೆ ಪ್ರಾಣ ತುಂಬುವ 'ಸಂಸ'ರ ಸಂಜೀವನಶಕ್ತಿ ಇನ್ನೂ ಅಮೋಘ ಕಾರ್ಯ ಮಾಡಬಹುದಿತ್ತು. ಕನ್ನಡಕ್ಕೆ 'ಗ್ರೀಕ್' ದುರಂತ ಪ್ರಕಾರವನ್ನು ಒದಗಿಸಿಕೊಟ್ಟಿದ್ದಾರೆ 'ಶ್ರೀ' ಯವರು. 'ಬೆರಳ್ಗೆ ಕೊರಳ್'ನಲ್ಲಿ ಪುರಾಣ ಪಾತ್ರಗಳ ಮನೋವಿಶ್ಲೇಷಣದ 'ಕ್ಷ' ದೃಷ್ಟಿಯನ್ನು ತೋರಿದ ಕುವೆಂಪು ಅವರು 'ಶ್ರೀ' ಯವರ ಹಾದಿಯಲ್ಲಿ ನಮ್ಮ ಪ್ರಾಚೀನ ಕಾವ್ಯಗಳ ಪುನಃ ಸೃಷ್ಟಿಯನ್ನು ರಂಗರೂಪವಾಗಿ ಒದಗಿಸಬಲ್ಲರು. ತ. ರಾ. ಸು. ಅವರು, ಚಿತ್ರದುರ್ಗವನ್ನು ಎತ್ತಿ ಕನ್ನಡ ರಂಗಭೂಮಿಗೆ ಇಳಿಸಬಾರದೆ? 'ಸೈರಂಧ್ರಿ', 'ದೊರೆಸಾನಿ'ಯ ಕೆ. ಟಿ. ಪುರಾಣಿಕರೂ ನಾಟಕಗಳನ್ನು ಬರೆಯಬೇಕು. 'ಆಷಾಢಭೂತಿ'ಯ ಮೂರ್ತಿರಾಯರು ಕೇವಲ ಪ್ರಬಂಧಕಾರರಾಗಿಯೇ ಉಳಿಯಬಾರದು.

ನಮ್ಮಲ್ಲಿ ವಿಚಾರಪ್ರಧಾನ ನಾಟಕಗಳಿನ್ನೂ ಹುಟ್ಟಬೇಕು. ಅದಕ್ಕಾಗಿ ತಕ್ಕ ವಾತಾವರಣ ನಿರ್ಮಾಣವಾಗಬೇಕು. ಇಬ್ಸೆನ್‌ನ ಕ್ರಾಂತಿಕಾರಕ ನೋರಾ ನಮ್ಮ ರಂಗಭೂಮಿಗೆ ಅವತರಿಸಬೇಕಾದರೆ ನಮ್ಮ ಮಹಿಳಾ ಸಮಾಜವಿನ್ನೂ ಆ ಮಟ್ಟಕ್ಕೆ ಬರಬೇಕು. ವಿಚಾರಪ್ರಧಾನ ನಾಟಕಗಳು ಸರಿಯಾಗಿ ಗ್ರಾಹ್ಯವಾಗಬೇಕಾದರೆ ಜನ ಸಾಮಾನ್ಯರ ತಿಳುವಳಿಕೆ ಹೆಚ್ಚು ಬೇಕು. ಇದೂ ಅಲ್ಲದೆ ಇತರ ಭಾಷೆಗಳಲ್ಲಿಯ ವಿಚಾರ ಪ್ರಧಾನ ನಾಟಕಗಳೆಲ್ಲಾ ಕನ್ನಡಕ್ಕೆ ಅನುವಾದಿಸಲ್ಪಡಬೇಕು. ಇಬ್ಸೆನ್' ಸಾತ್ರೆ ಇವರಾರೂ ಇಂಗ್ಲೀಷ ಜನರಲ್ಲ. ಷಾ ಕೂಡ ಆಯರಿಶ್‌ರು. ಆದರೂ ಅವರ ಕೃತಿಗಳು ಇಂಗ್ಲಿಷ್ ಆಗಿವೆ.

ಕನ್ನಡ ರಂಗಭೂಮಿಯ ಪುನರ್ರಚನೆಯಾಗಬೇಕಾಗಿದೆ. ನಾಳಿನ ಕರ್ನಾಟಕವೆಂಬ ನಾಟಕ ರಂಗಭೂಮಿಯ ಮೇಲೆ ನಿವೃತ್ತ ನಾಟಕರಕಾರರೆಲ್ಲ ಮತ್ತೆ ಲೇಖನಿ ಎತ್ತಬೇಕು. ಕವಿಗಳು, ಕಾದಂಬರಿಕಾರರು ಕೂಡಿದರೆ ನಾಟಕಗಳು ಬೇಕಾದಷ್ಟು ತಲೆಯೆತ್ತಬಹುದು. ನಾಟಕಕಾರನಿಗೆ ಒಂದು ಕಣ್ಣು ಕವಿಯದು, ಒಂದು ಕಣ್ಣು ಕಾದಂಬರಿಕಾರನದು ಇರುತ್ತದೆ. ಸಾಹಿತಿ ಉಭಯದೃಷ್ಟಿಯುಳ್ಳವನಾಗಬೇಕಾದರೆ ನಾಟಕಕಾರನೇ ಆಗಬೇಕು. ಸ್ವತಂತ್ರ ಭಾರತದಲ್ಲಿ ಈಗ ಸಾಂಸ್ಕೃತಿಕ ಪುನರ್ರಚನೆಯೂ ನಡೆದಿದೆ.

ನಾಟಕಕ್ಕೆ ಪ್ರೋತ್ಸಾಹ ದೊರಕುತ್ತಿದೆ. ನಾಟಕಕಾರನಿಗೆ ಪ್ರಕಾಶಕನಿಂದ ರಾಯಲ್ಟಿ ಸಿಗದಿದ್ದರೂ ಸ್ಪರ್ಧೆಗಳಲ್ಲಿ ಬಹುಮಾನ ದೊರಕಬಹುದಾಗಿದೆ. ಕವಿಗಳು ಅಪ್ರಕಟಿತ ಕವನಸಂಗ್ರಹಗಳಿಗಾಗಿ ಮರುಗುವಂತೆ ನಾಟಕಕಾರ ಅಪ್ರಕಟನೆಗಾಗಿ ಮರುಗಬೇಕಾಗಿಲ್ಲ. ನಾಟಕಪ್ರದರ್ಶನವೇ ನಾಟಕ ಪ್ರಕಾಶನ. ಅಂತಹ ನಾಟಕಗಳನ್ನು ಪ್ರದರ್ಶಿಸಲು ಇಂದಿಗೂ ನಿವೃತ್ತರಾಗದ–ಎಂದಿಗೂ ನಿವೃತ್ತರಾಗದಿರಲಿ ಎಂದು ಹಾರೈಸೋಣ—ನಟರೂ ನಿರ್ಮಾತೃಗಳೂ ಆದ ಶ್ರೀ ವೀರಣ್ಣನವರೂ ನಮ್ಮ ಬಳಿಗೇ ಇದ್ದಾರೆ. ಉದಯವಾಗಲಿ ಎಂದು ಹಾಡಿ ಹಾಡಿ ಅಂತೂ ಒಮ್ಮೆ ಸಮಗ್ರ ಕರ್ನಾಟಕ ಉದಯವಾಯಿತು. ಇನ್ನು ನಾಟಕದಿಂದ ಕರ್ನಾಟಕದ ಉದ್ಧಾರವಾಗಲಿ.

---

# 38ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ರಾಯಚೂರು

### ಹೈದರಾಬಾದು ರಾಜ್ಯದ ಮುಖ್ಯ ಮಂತ್ರಿಗಳಾದ
## ಡಾ॥ ಬಿ. ರಾಮಕೃಷ್ಣರಾಯರ ಸಂದೇಶ ಭಾಷಣ

ಪರಮಬ್ರಹ್ಮ ಶರೀರಪುಷ್ಟಿ ಜನತಾಂತರ್ದೃಷ್ಟಿ ಕೈವಲ್ಯ ಬೋ
ಧ ರಮಾ ಮೌಕ್ತಿಕ ಹಾರಯಷ್ಟಿ ಕವಿತಾವಲ್ಲೀ ಸುಧಾವೃಷ್ಟಿ ಸ
ರ್ವರಸೋತ್ಪಾದ ನವೀನಸೃಷ್ಟಿ ಬುಧಹರ್ಷಾರ್ಕಸೃಷ್ಟಿ ಸರ್ವಾಂಗ ಸುಂ
ದರಿ ವಿದ್ಯಾನಟ ನಾಟಕಂ ನಲಿಗೆ ಮತ್ಕಾವ್ಯಸ್ಥಲೀರಂಗದೋಳ್

—ಕವಿ ನಾಗಚಂದ್ರ.

ಕರ್ನಾಟಕ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರೇ, ಸ್ವಾಗತ ಸಮಿತಿಯ ಅಧ್ಯಕ್ಷರೇ,
ಮಹನೀಯರೇ ಮತ್ತು ಮಹಿಳೆಯರೇ,

ಕನ್ನಡ ಸಾಹಿತ್ಯ ಪರಿಷತ್ತಿನ 38ನೆಯ ಸಾಹಿತ್ಯ ಸಮ್ಮೇಳನವು ರಾಯಚೂರಿನಲ್ಲಿ ಪುನಃ ನೆರೆಯುತ್ತಿರುವುದು ತುಂಬ ಸಂತೋಷದ ಸಂಗತಿ. ಡಿಸೆಂಬರ್ 1934 ರಂದು ಮೊದಲನೆಯ ಸಲ ರಾಯಚೂರಿನಲ್ಲಿ ಸಾಹಿತ್ಯ ಸಮ್ಮೇಳನವು ದಿವಂಗತ **ಪಂಜೆ ಮಂಗೇಶರಾಯರ** ಅಧ್ಯಕ್ಷತೆಯಲ್ಲಿ ನೆರೆದಿತ್ತು. ಕಲುಬುರಿಗೆಯಲ್ಲಿ ಎರಡು ಸಲ, ಹೈದರಾಬಾದಿನಲ್ಲಿ ಒಂದು ಸಲ ಇಂಥ ಸಮ್ಮೇಳನಗಳು ಆಗಿವೆ. ಎರಡನೆಯ ಸಲ ರಾಯಚೂರಿನಲ್ಲಿ ಈಗ ಈ ಸಮ್ಮೇಳನವು ನೆರೆದಿದೆ.

ಹೈದರಾಬಾದು ಸರಕಾರವು ಎಂದಿಗೂ ಇಂಥ ಸಮ್ಮೇಳನಗಳನ್ನು ಬಹಳ ಮಹತ್ವವಾಗಿ ಕಾಣುತ್ತಿದೆ. ಇಂಥ ಸಮ್ಮೇಳನಗಳ ಖರ್ಚಿಗಾಗಿ ತನ್ನಿಂದಾದಷ್ಟು ಧನ ಸಹಾಯವನ್ನು ಮಾಡಲು ಅದು ಎಂದೂ ಹಿಂಜರಿವುದಿಲ್ಲ. ಈ ಸಮ್ಮೇಳನಕ್ಕಾಗಿಯೂ ಹೈದರಾಬಾದು ಸರಕಾರವು 5,000 ರೂಪಾಯಿಗಳಷ್ಟು ಧನ ಸಹಾಯವನ್ನು ಮಾಡಿದೆಯೆಂದು ತಿಳಿಸಲು ನನಗೆ ಸಂತೋಷವಾಗುವುದು.

ಜನಜೀವನದಲ್ಲಿ ಭಾಷೆ ಮತ್ತು ಸಾಹಿತ್ಯಗಳಿಗಿರುವ ಮಹತ್ವವನ್ನು ನಾನು ಒತ್ತಿಹೇಳಬೇಕಾಗಿಲ್ಲ, ಭಾರತದಂಥ ದೊಡ್ಡ ದೇಶದಲ್ಲಿ ಅನೇಕ ಭಾಷೆಗಳನ್ನಾಡುವ ಜನರಿದ್ದಾರೆ. ಈ ಅಂಶವನ್ನೇ ಅಥರ್ವಣ ವೇದದಲ್ಲಿ ಬಹಳ ಮನೋಹರವಾಗಿ ವರ್ಣಿಸಲಾಗಿದೆ.

ಜನಂ ಬಿಭ್ರತೀ ಬಹುಧಾ ವಿವಾಚಸಂ ನಾನಾ ಧರ್ಮಾಣಂ ಪೃಥಿವೀ ಯಥೌ ಕಸಂ ।
ಸಹಸ್ರಂ ಧಾರಾದ್ರವಿಣಸ್ಯ ಮೇ ದುಹಾಂ ಧ್ರುವೇವ ಧೇನುರನಪಸ್ಫುರಂತೀ ॥

—ಅಥರ್ವವೇದ: ಕಾಂ. ೧೨-ಪ್ರ. ೨೬. ಅನು ೧ ಮಂ. ೪೫.

ಬಗೆ ಬಗೆಯ ಭಾಷೆಗಳನ್ನಾಡುವ ಮತ್ತು ಬೇರೆ ಬೇರೆಯ ಧರ್ಮಗಳನ್ನು ಅನುಸರಿಸುವ ಜನಗಳಿಗೆ ಭೂಮಿ ನೆಲೆಯಾಗಿದೆ. ಆಕಳು ಹೇಗೆ ಚಿರವಾಗಿ ಸ್ಫುರಿಸುತ್ತ ಸಹಸ್ರ ಧಾರೆಯಲ್ಲಿ

ಹಾಲನ್ನು ಕರೆವುದೋ ಹಾಗೆಯೇ ಈ ಭೂದೇವಿ ಭೇದ ಭಾವವಿಲ್ಲದೆ ಧನದ ಸಹಸ್ರ ಧಾರೆಯನ್ನು ಎಲ್ಲರ ಮೇಲೂ ವರ್ಷಿಸುವಳು.

ಸಾವಿರಾರು ವರುಷಗಳಿಂದ ಭಾರತದ ಬೇರೆ ಬೇರೆಯ ಪ್ರಾಂತಗಳ ಭಾಷೆಗಳಲ್ಲಿ ಅಮೂಲ್ಯವಾದ ಸಾಹಿತ್ಯ ನಿರ್ಮಾಣವಾಗಿದೆ. ಅಂಕೆ ಸಂಖ್ಯೆಗಳ ದೃಷ್ಟಿಯಿಂದ ಹೇಳುವುದಾದರೆ ಭಾರತದಲ್ಲಿ ಐದುನೂರಕ್ಕಿಂತ ಹೆಚ್ಚು ಪ್ರಾದೇಶಿಕ ನುಡಿಗಳಿವೆ. ಸುಮಾರು 170ರಷ್ಟು ಭಾಷೆಗಳು ಕಾಡುಜನಗಳ ಬಾಯಿಯಲ್ಲಿವೆ. ಇವುಗಳಲ್ಲಿ ಕೆಲವಕ್ಕೆ ಲಿಪಿಗಳಿಲ್ಲ; ಸಾಹಿತ್ಯಗಳಿಲ್ಲ. ಈ ವೈವಿಧ್ಯದಲ್ಲಿ ಸಾಹಿತ್ಯ ಮತ್ತು ಶಿಕ್ಷಣಗಳ ಉದ್ದೇಶದಿಂದ ಸುಮಾರು 14 ಭಾಷೆಗಳನ್ನು ನಮ್ಮ ಸಂವಿಧಾನದಲ್ಲಿ ಪರಿಗಣಿಸಲಾಗಿದೆ. ಈ 14 ಭಾಷೆಗಳಲ್ಲಿಯೂ ಕೂಡ ಬಹಳ ನಿಕಟವಾದ ಸಂಬಂಧವಿದೆ. ಇವುಗಳನ್ನು ಪುನಃ ಎರಡು ಪಂಗಡಗಳಲ್ಲಿ ಹಂಚಬಹುದಾಗಿದೆ. ಒಂದು ಪಂಗಡದಲ್ಲಿ ಆರ್ಯಜಾತಿಗೆ ಸೇರಿದ ಭಾಷೆಗಳು ಬರುವುವು. ಇನ್ನೊಂದರಲ್ಲಿ ದ್ರಾವಿಡಜಾತಿಗೆ ಸೇರಿದ ಭಾಷೆಗಳು ಬರುವುವು. ಭಾಷಾ ಶಾಸ್ತ್ರದ ದೃಷ್ಟಿಯಿಂದ ಈ ಎರಡೂ ಜಾತಿಯ ಭಾಷೆಗಳಲ್ಲಿ ವ್ಯತ್ಯಾಸ ಕಂಡುಬಂದರೂ ಶಬ್ದಸಂಪತ್ತಿಯ ದೃಷ್ಟಿಯಿಂದ ಈ ಎರಡೂ ಜಾತಿಯ ಭಾಷೆಗಳು ಸಂಸ್ಕೃತ ಭಾಷೆಗೆ ಋಣಿಯಾಗಿವೆ ಎಂಬುದನ್ನು ಎಲ್ಲರೂ ಒಪ್ಪುವರು. ಹೀಗಾಗಿ ಭಾರತದಲ್ಲಿ ಭಾಷೆಗಳ ಸಂಖ್ಯೆ ಹೆಚ್ಚಾಗಿ ಕಂಡಬಂದರೂ ವಾಡಿಕೆಯಲ್ಲಿ ಅವುಗಳಿಗೆ ಹತ್ತಿರದ ಸಂಬಂಧವಿದ್ದು ಒಂದು ಭಾಷೆಯಲ್ಲಿ ಪಾರಂಗತನಾದವನಿಗೆ ಬೇರೆಯ ಭಾಷೆಗಳನ್ನು ಕಲಿಯುವಲ್ಲಿ ಹೆಚ್ಚಿನ ಕ್ಲೇಶವಾಗುವುದಿಲ್ಲ. ಅದರಲ್ಲೂ ದ್ರಾವಿಡ ಜಾತಿಗಳ ಭಾಷೆಯಲ್ಲಂತೂ ತೀರ ಹತ್ತಿರದ ಸಂಬಂಧವಿದೆ. ಕನ್ನಡ, ತೆಲುಗು, ತಮಿಳು, ಮಲೆಯಾಳ, ತುಳು ಈ ಐದು ಭಾಷೆಗಳು ಒಂದೇ ಮನೆತನಕ್ಕೆ ಸೇರಿವೆ. ಅದರಲ್ಲೂ ಕನ್ನಡ ಮತ್ತು ತೆಲುಗಿಗಂತೂ ಅವಳಿ ಜವಳಿಯ ಸಂಬಂಧವಿದೆ. ಇವೆರಡಕ್ಕೂ ಪ್ರಾಚೀನಕಾಲದಿಂದ ಒಂದೇ ಲಿಪಿ, ಒಂದೇ ವ್ಯಾಕರಣ ಮತ್ತು ಬಹುಮಟ್ಟಿಗೆ ಒಂದೇ ಬಂಗೆಯ ಶಬ್ದಸಂಪತ್ತಿ ಇದೆಯೆಂದು ಧೈರ್ಯವಾಗಿ ಹೇಳಬಹುದು. ಇವೆರಡರಲ್ಲಿ ಸಾಹಿತ್ಯ ಸಂಪ್ರದಾಯಗಳೂ ಛಂದೋ ನಿಯಮಗಳೂ ಒಂದೆಯಾಗಿವೆ. ನನ್ನಯ್ಯನಿಂದ ಸ್ಮರಿಸಲಾದ ನಾರಾಯಣ ಭಟ್ಟನು ವಾಙ್ಮಯದುರಂಧರನಾಗಿ ಕರ್ಣಾಟಕ ಪಂಡಿತನಾಗಿದ್ದನೆಂದು ತಿಳಿದುಬರುವುದು.

ಕನ್ನಡದ ಆದಿಕವಿಯಾದ ಪಂಪನು ವೆಂಗಿಮಂಡಲದಲ್ಲಿದ್ದು ಬೆಳಗಿದನೆಂಬುದು ಲೋಕಪ್ರಸಿದ್ಧವಾದ ಮಾತು. ಹೀಗಾಗಿ ಕನ್ನಡ ತೆಲುಗು ಭಾಷೆಗಳಲ್ಲಿ ಪ್ರಾಚೀನ ಕಾಲದಿಂದಲೂ ಬಳಕೆ ನಡೆದುಬಂದಿದೆ. ಮಧ್ಯಯುಗದ ಚರಿತ್ರೆಯನ್ನು ನೋಡುವುದಾದರೆ ಶ್ರೀನಾಥ ಕವಿ "ನಾದು ಕರ್ಣಾಟಕ ಭಾಷಾ" ಎಂದು ಹೇಳಿದ್ದಾನೆ. ವಿಜಯನಗರದ ಆಸ್ಥಾನ ಆಂಧ್ರ ಕರ್ಣಾಟಕ ಕವಿಗಳಿಬ್ಬರಿಗೂ ಆಶ್ರಯ ಸ್ಥಾನವಾಗಿದ್ದುದನ್ನು ನಾವು ಇಲ್ಲಿ ಸ್ಮರಿಸಬಹುದು. ಇಂದಿಗೂ ಆಂಧ್ರ ಕರ್ಣಾಟಕರಲ್ಲಿದ್ದ ಸ್ನೇಹ ಸೌಹಾರ್ದಗಳು ಕೊಡುಕೊಳ್ಳುವಿಕೆಗಳು ನಮ್ಮಿಬ್ಬರಲ್ಲಿದ್ದ ನಿಕಟ ಬಾಂಧವ್ಯವನ್ನು ಸೂಚಿಸುತ್ತವೆ.

ಭಾರತದ ಚರಿತ್ರೆಯಲ್ಲಿ ಹೊಸಪುಟವೊಂದು ತೆರೆಯಲಿದೆ. ರಾಜ್ಯದ ಆಡಳಿತಕ್ಕೆ ಅನುಕೂಲವಾಗುವಂತೆ ಗಣರಾಜ್ಯದಲ್ಲಿರಬೇಕಾದ ರಾಜ್ಯಗಳ ಸೀಮೆಗಳನ್ನು ಹೊಸತಾಗಿ ನಿರ್ಣಯಿಸಲು ಭಾರತ ಸರಕಾರವು ಕ್ರಮವನ್ನು ಕೈಕೊಳ್ಳಲಿದೆ. ಈ ಸೀಮಾನಿರ್ಣಯದಲ್ಲಿ ಭಾಷೆ ಒಂದು ಅಂಗವೆಂಬುದನ್ನು ಎಲ್ಲರೂ ಒಪ್ಪುವರು. ಪ್ರಾಯಃ ಆಡಳಿತದಲ್ಲಿ ಆನುಕೂಲ್ಯವನ್ನುಂಟು

ಮಾಡಲು ಭಾಷೆ ಒಂದು ಬಲವಾದ ಅಂಶವೆಂಬುದನ್ನೂ ಒಪ್ಪಲಾಗಿದೆ. ಇಷ್ಟು ಮಾತ್ರಕ್ಕೆ ಭಿನ್ನ ಭಿನ್ನ ಭಾಷೆಗಳನ್ನಾಡುವ ಭಾರತೀಯರು ಸಂಸ್ಕೃತಿಯ ದೃಷ್ಟಿಯಿಂದಲಾಗಲಿ ಭಾರತದ ನಾಗರಿಕ ರೆಂಬ ದೃಷ್ಟಿಯಿಂದಲಾಗಲಿ, ತಾವು ಬೇರೆ ಬೇರೆಯೆಂದು ಭಾವಿಸುವುದಾದರೆ ದೇಶಕ್ಕೆ, ಭಾರತದ ಸಂಸ್ಕೃತಿಗೆ ದ್ರೋಹಮಾಡಿದಂತೆ. ಈ ದೃಷ್ಟಿಯನ್ನು ತಮ್ಮೆಲ್ಲರ ಗಮನಕ್ಕೆ ತರಬೇಕೆಂಬ ಉದ್ದೇಶದಿಂದಲೇ ಭಾರತದಲ್ಲಿರುವ ಬೇರೆಬೇರೆಯ ಭಾಷೆಗಳಲ್ಲಿಯ ಐಕ್ಯಾಂಶವನ್ನು ಕುರಿತು ನಾನು ಪ್ರತಿಪಾದಿಸಿದೆನು.

> ಯೋವೈ ಭೂಮಾ ತತ್ ಸುಖಮ್, ನಾಲ್ಪೇ ಸುಖಮಸ್ತಿ ;
> ಸಹನಾವವತು ಸಹನೌ ಭುನಕ್ತು । ಸಹವೀರ್ಯಂ ಕರವಾವ ಹೈ
> ತೇಜಸ್ವಿನಾವಧೀತಮಸ್ತು । ಮಾವಿದ್ವಿಷಾವಹೈ ॥

ಎಂಬುದು ಭಾರತದ ದಿವ್ಯವಾಣಿ. ಈ ಮಂತ್ರವನ್ನೇ ಭಾರತ ಸರಕಾರವು ತನ್ನ ಸ್ವದೇಶ ಮತ್ತು ವಿದೇಶ ನೀತಿಯಲ್ಲಿ ಆಚರಣೆಯಲ್ಲಿ ತರಬೇಕೆಂದು ಪ್ರಯತ್ನಿಸುತ್ತಲಿದೆ. ಭಾರತದ ಭಿನ್ನ ಭಿನ್ನ ಸಾಹಿತ್ಯಗಳ ಸುಂದರ ಭಾಗಗಳನ್ನು ತೆಗೆದು ನೋಡಿದರೂ ನಮಗೆ ಈ ಅಂಶವೇ ಎದ್ದು ಕಾಣುತ್ತದೆ. ಆದುದರಿಂದ ಈ ವೇದಿಕೆಯಿಂದ ನಾನು ಪ್ರಾರ್ಥಿಸುವುದಿಷ್ಟು. ಭಾರತೀಯರಾದ ನಾವು ಗಣರಾಜ್ಯದ ಯಾವ ಭಾಗದಲ್ಲಿದ್ದರೂ ಅಣ್ಣತಮ್ಮಂದಿರೆ. ಇದು ರಾಜಕೀಯ ದೃಷ್ಟಿಯಿಂದ ಹೇಳುವ ಮಾತಲ್ಲ. ನಮ್ಮ ಪ್ರಾಚೀನ ಸಂಸ್ಕೃತಿಯ ದೃಷ್ಟಿಯಿಂದ ಹೇಳುವ ಮಾತು. ಆಸೇತು ಹಿಮಾಚಲ ಭಾರತದ ಸಂಸ್ಕೃತಿ ಒಂದು. ಸಾಹಿತ್ಯ ಸಂಸ್ಕೃತಿ ಪ್ರಸಾರದ ಮಾಧ್ಯಮ. ಭಾಷೆ ಈ ಮಾಧ್ಯಮದ ಹೊರಮೈ. ಆದುದರಿಂದ ಸಂಸ್ಕೃತಿ ಪ್ರಸಾರದ ಕಾರ್ಯಗಳು ಭಾರತ ದೇಶದ ಯಾವ ಭಾಗದಲ್ಲಿ ನಡೆದರೂ ಎಲ್ಲ ಭಾರತೀಯರ ಏಳ್ಗೆಗೆ ಅವು ಉಪಕಾರಿಗಳೆಂದು ನಾನು ನಂಬಿದ್ದೇನೆ. ಅಂತೆಯೆ ರಾಯಚೂರಿನಲ್ಲಿ ನಡೆದ ಈ ಸಾಹಿತ್ಯ ಸಮ್ಮೇಳನದಲ್ಲಿ ಭಾಗ ವಹಿಸಲು ನನಗೆ ತುಂಬ ಸಂತೋಷವಾಗಿದೆ.

ಸಮ್ಮೇಳನದ ಅಂಗವಾಗಿ ಲೇಖಕ, ಮಹಿಳಾ ಮತ್ತು ನಾಟಕ ಗೋಷ್ಠಿಗಳು ಜರುಗಲಿವೆ. ಈ ಸಂದರ್ಭದಲ್ಲಿ ದೊಡ್ಡ ದೊಡ್ಡ ವಿದ್ವಾಂಸರ ಭಾಷಣಗಳಾಗುವುವು. ಈ ಸಮ್ಮೇಳನಕ್ಕೆ ಶ್ರೀ ಆದ್ಯರಂಗಾಚಾರ್ಯರಂಥ ನುರಿತ ಲೇಖಕರು ಅಧ್ಯಕ್ಷರಾದುದು ತುಂಬ ಉಚಿತವಾಗಿದೆ. ಕನ್ನಡ ಭಾಷೆ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟ ಅಂಶಗಳನ್ನೆಲ್ಲ ಈ ವೇದಿಕೆಯ ಮೇಲೆ ಚರ್ಚಿಸಲಾಗುವುದೆಂಬುದನ್ನು ನಾನು ಬಲ್ಲೆನು. ಆದರೆ ಈ ಸಂದರ್ಭದಲ್ಲಿ ನಾನು ಒಂದು ಸೂಚನೆಯನ್ನು ಮಾಡಲು ಬಯಸುವೆನು. ಭಾಷೆ ಸಾಹಿತ್ಯಗಳು ಹಿಂದಿನ ಕಾಲದಲ್ಲಿ ರಾಜಾಸ್ಥಾನಕ್ಕೆ ಸಂಬಂಧಪಟ್ಟವುಗಳಾಗಿದ್ದುವು. ಸಾಹಿತ್ಯದಿಂದ ಶಿಷ್ಟವರ್ಗಕ್ಕೊಂದೇ ಉಪಕಾರವಾಗುತ್ತಿತ್ತು. ಈಗ ಪರಿಸ್ಥಿತಿ ಬದಲಾಯಿಸಿದೆ. ಜೀವನದ ಆವಶ್ಯಕತೆಗಳು ಭಾರತದ ಪ್ರತಿಯೊಬ್ಬ ನಾಗರಿಕನಿಗೆ ಲಭಿಸುವುದು ಆವಶ್ಯಕವೆಂದು ಭಾವಿಸಿದಂತೆ ಸಂಸ್ಕೃತಿಯ ಸಂದೇಶವೂ ಕೂಡ ಸಾಮಾನ್ಯ ನಾಗರಿಕರಿಗೂ ತಲಪುವುದು ಅಗತ್ಯವೆಂದು ಈಗ ನಮಗೆಲ್ಲರಿಗೆನಿಸಿದೆ. ಆದುದರಿಂದ ಪಂಡಿತ ಮಾನ್ಯ ಗ್ರಂಥಗಳನ್ನೇ ಬೆಳೆಸಿದರೆ ನಾವು ಕೃತಾರ್ಥರಾಗೆವು. ನಮ್ಮ ಭಾಷೆಯ ಬೆಳೆವಣಿಗೆಯೂ ಕುಂಠಿತವಾದಂತೆಯೇ ಸರಿ. ಸಮಾಜದ ಎಲ್ಲ ವರ್ಗಗಳ ಎಲ್ಲ ಅಭಿರುಚಿಗಳನ್ನು ಪ್ರತಿಬಿಂಬಿಸಲು ಭಾಷೆ ಸಮರ್ಥವಾಗಬೇಕಾದರೆ ಸಾಮಾನ್ಯ ಪ್ರಯೋಗಗಳಿಗೂ ಭಾಷೆಯಲ್ಲಿ ಎಡೆಗೊಡಬೇಕು. ಅರಿಸಮಾಸ ಮಿತ್ರಸಮಾಸವಾಗುವ ಕಾಲವಿದು. ತುಂಬ ಮಡಿ ಬೆಳೆವ ಭಾಷೆಗೆ ಸಲ್ಲದು. ನಮ್ಮ

ಸಾಮಾಜಿಕ ನಡೆವಳಿಕೆಗಳಲ್ಲಿ ಹೊಸತನವನ್ನು ನಾವು ಅಳವಡಿಸಿಕೊಂಡಂತೆ ಭಾಷೆಯಲ್ಲಿ ಹೊಸ ತನವನ್ನು ಅಳವಡಿಸಿಕೊಳ್ಳಲು ಹೆದರಬಾರದು. ಅನ್ಯದೇಶ್ಯ ಶಬ್ದಸಂಪತ್ತಿಯಿಂದ ನಮ್ಮ ಭಾಷೆಗೆ ಉಪಕಾರವಾಗುತ್ತಿದ್ದರೆ ಮತ್ತು ಅನ್ಯದೇಶ್ಯ ಪದಗಳು ಜನಜೀವನದಲ್ಲಿ ಬಳಕೆಯಾಗಿ ಅವು ನಮ್ಮವೇ ಆಗಿಹೋಗಿ ಬಿಟ್ಟದ್ದರೆ ಅಂಥ ಪದಗಳಿಗೆ ಬಹಿಷ್ಕಾರ ಹಾಕಬಾರದು. ಲೋಕಾಭಿ ಪ್ರಾಯಕ್ಕೆ ವಿರುದ್ಧವಾದ ಯಾವ ಮಾತೂ ನಿಲ್ಲದು. ಪತಿತೋದ್ಧರಣವೇ ನಮ್ಮ ಕರ್ತವ್ಯವೆಂದ ಮೇಲೆ ಭಾಷೆ ಸಾಹಿತ್ಯಗಳೂ ಕೂಡ ಈ ಕೆಲಸಕ್ಕೆ ನೆರವಾಗಿ ಸರ್ವಮಾನ್ಯತೆಯನ್ನು ಅವು ಪಡೆಯ ಬೇಕು. ಜನಜೀವನದ ಆರ್ಥಿಕ ಮಟ್ಟವನ್ನು ಎತ್ತುವುದಕ್ಕಾಗಿ ಪಾಂಚವಾರ್ಷಿಕ ಯೋಜನೆ ಗಳಿದ್ದಂತೆ ಸಾಂಸ್ಕೃತಿಕ ಪರಿಷ್ಕರಣಕ್ಕಾಗಿ ಸಾಹಿತ್ಯ ಪರಿಷತ್ತಿನಂಥ ಸಂಸ್ಥೆ ಯೋಜನೆಗಳನ್ನು ಹಾಕಿ ಆ ಬಗೆಯ ಸಾಹಿತ್ಯವನ್ನು ಸೃಷ್ಟಿಸಿ ಜನ ಸಾಮಾನ್ಯಕ್ಕೆ ಅದು ಲಭಿಸುವಂತೆ ಮಾಡುವುದು ಆವಶ್ಯಕವೆಂದು ನಾನು ತಿಳಿಯುವೆನು.

ಹೊಸತಾಗಿ ನಿರ್ಮಾಣವಾಗುತ್ತಲಿರುವ ರಾಜ್ಯಗಳಲ್ಲಿ ಪ್ರಾಂತಿಕ ಭಾಷೆಗಳಿಗೆ ಪ್ರಾಧಾನ್ಯ ಸಿಕ್ಕುವ ಅವಕಾಶವಿರುವುದರಿಂದ ಇನ್ನು ಮುಂದೆ ಭಾರತದ ಎಲ್ಲ ಪ್ರಾಂತಗಳ ಭಾಷೆಗಳು ಬೆಳೆ ಯಲು ಅವಕಾಶವಿದೆ. ಅವು ಬೆಳೆಯದ ವಿನಾ ಪ್ರಾಂತೀಯ ಸರಕಾರದ ನಿತ್ಯವ್ಯವಹಾರಗಳಲ್ಲಿ ಅವನ್ನು ಬಳಸುವುದು ಕಷ್ಟವಾದೀತು. ಈ ಅಂಶವನ್ನು ಗಮನದಲ್ಲಿಟ್ಟು ಕನ್ನಡ ಭಾಷೆ ಈ ಹೊಣೆ ಯನ್ನು ಹೊರಲು ಸಮರ್ಥವಾಗುವಂತೆ ಅದನ್ನು ಪೋಷಿಸುವುದು. ಅವಶ್ಯ.

ಕನ್ನಡ ಸಾಹಿತ್ಯ ಪರಿಷತ್ತಿನ ಈ ಅಧಿವೇಶನದ ಉದ್ಘಾಟನೆಯನ್ನು ಮಾಡಬೇಕೆಂದು ನನ್ನಿಂದ ಅಪೇಕ್ಷಿಸಲಾಗಿತ್ತು. ನಾನು ಒಪ್ಪಿಕೊಂಡಿಯೂ ಇದ್ದೆ. ಆದರೆ ಕೆಲವೊಂದು ಅನಿವಾರ್ಯ ತೊಂದರೆಗಳಿಂದ ನನಗೆ ನಿನ್ನೆ ಇಲ್ಲಿಗೆ ಬರುವುದು ಸಾಧ್ಯವಾಗಲಿಲ್ಲ. ತಮಗೆ ಕೊಟ್ಟ ಈ ತೊಂದರೆಗಾಗಿ ನನಗೆ ವಿಷಾದವಾಗಿದೆ, ಮನ್ನಿಸುವಿರೆಂದು ಆಶಿಸುತ್ತೇನೆ.

ಕೊನೆಯದಾಗಿ ಕನ್ನಡ ಸಾಹಿತ್ಯ ಪರಿಷತ್ತಿನ 38ನೆಯ ಈ ಸಾಹಿತ್ಯಸಮ್ಮೇಳನವು ವಿಜಯಪ್ರದವಾಗಲೆಂದು ನಾನು ಹಾರೈಸುವೆನು.

---

# 38ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ರಾಯಚೂರು

## ಮಹಿಳಾ ಗೋಷ್ಠಿಯ ಅಧ್ಯಕ್ಷರಾದ ಶ್ರೀಮತಿ ಪುಟ್ಟಮ್ಮ ಪಾಟೀಲರವರ ಭಾಷಣ

26-12-1955




**ಸನ್ಮಾನ್ಯ ಸ್ವಾಗತಾಧ್ಯಕ್ಷರೆ, ಅಕ್ಕತಂಗಿಯರೆ, ಅಣ್ಣತಮ್ಮಂದಿರೆ,**

ಕನ್ನಡ ಸಾಹಿತ್ಯ ಸಮ್ಮೇಳನದ ಅಂಗವಾಗಿ ಮಹಿಳಾ ಗೋಷ್ಠಿ ಹಲವು ವರುಷಗಳಿಂದ ನಡೆಯುತ್ತಿದ್ದು, ಕನ್ನಡ ಜನ ಮಹಿಳೆಯರಿಗೆ ತೋರುತ್ತಿರುವ ಆದರದ ಪ್ರತೀಕವಾಗಿ ಈ ಗೋಷ್ಠಿ ಮುಂದುವರಿಯುತ್ತಿದೆಯೆಂದು ನಾನು ನಂಬಿರುವೆ. ಈ ಗೋಷ್ಠಿಯ ಅಧ್ಯಕ್ಷಸ್ಥಾನವನ್ನು ಕನ್ನಡ ನಾಡಿನಲ್ಲಿ ಮಹಿಳೆಯರ ಸಲುವಾಗಿ ಕಳಕಳಿಯಿಂದ ದುಡಿಯುತ್ತಿರುವವರನ್ನೋ ಉದ್ದಾಮ ಮಹಿಳಾ ಸಾಹಿತಿಗಳನ್ನೋ ಕರೆತಂದು ಗೌರವಿಸಬೇಕಾಗಿತ್ತು. ಆದರೆ ನಾನು ಸಾಹಿತಿಯೂ ಅಲ್ಲ. ಅಂತಹ ಸಾಮಾಜಿಕ ಕಾರ್ಯಕರ್ತಳೂ ಅಲ್ಲ. ಆದರೂ ನನ್ನನ್ನು ಆರಿಸಿದುದು ನಿಮ್ಮ ಹಿರಿತನ ವಿಶ್ವಾಸಗಳನ್ನು ತೋರಿಸುತ್ತದೆ. ಈ ನಿಮ್ಮ ಮಮತೆ ವಿಶ್ವಾಸಗಳಿಗೆ ತಲೆಬಾಗಿ ಈ ಸ್ಥಾನ ಸ್ವೀಕರಿಸುವದೊಂದೇ ನನ್ನ ಪಾಲಿಗಿರುವ ದಾರಿಯಿರುವುದರಿಂದ ನಿಮ್ಮ ಕರೆಗೆ 'ಓ'ಗೊಟ್ಟು ಇಲ್ಲಿಯವರೆಗೆ ಬಂದಿರುವೆ. ಕನ್ನಡ ನಾಡು ಒಂದುಗೂಡುತ್ತಿರುವ ಈ ಸಂಧಿಕಾಲದಲ್ಲಿ ಸಮ್ಮೇಳನ ಕೂಡುತ್ತಿರುವದರಿಂದ ಮತ್ತು ಇದರಲ್ಲಿ ಭಾಗ ವಹಿಸುವ ಸುಸಂದರ್ಭ ನನಗೆ ಬಂದುದರಿಂದ ನನ್ನ ಹೃದಯವು ಸಂತೋಷದಿಂದ ಅರಳಿದೆ. ಈ ಸುಸಂಧಿಯನ್ನು ಒದಗಿಸಿಕೊಟ್ಟ ಸ್ವಾಗತ ಸಮಿತಿಯ ಸದಸ್ಯರಿಗೂ ಹಾಗೂ ಕನ್ನಡ ಸಾಹಿತ್ಯ ಪರಿಷತ್ತಿನವರಿಗೂ ನನ್ನ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುವುದು ನನ್ನ ಆದ್ಯ ಕರ್ತವ್ಯವಾಗಿದೆ.

ಹೈದರಾಬಾದು ಕರ್ನಾಟಕವು ಕನ್ನಡ ಸಾಹಿತ್ಯ, ಸಂಸ್ಕೃತಿ, ಧರ್ಮಗಳ ಉಗಮಸ್ಥಾನಗಳಲ್ಲಿ ಒಂದಾಗಿದೆ. 5ನೆಯ ಶತಮಾನದಿಂದ ಹಿಡಿದು ಇಂದಿನ ವರೆಗೂ ಅದು ಅನೇಕ ಸಾಹಿತ್ಯರತ್ನರನ್ನು ಕನ್ನಡ ನಾಡಿಗೆ ಕೊಟ್ಟಿದೆ. ಮಹಾಕವಿ ನೃಪತುಂಗ ಹೈದರಾಬಾದಿನ ಮಾನ್ಯಖೇಟ—ಮಳಖೇಡದಲ್ಲಿ ಜನ್ಮ ತಾಳಿದ್ದಾನೆ. ಅಲ್ಲದೆ ವಚನ ಸಾಹಿತ್ಯ, ದಾಸ ಸಾಹಿತ್ಯಗಳಿಗೆ ಕೂಡ ಹೈದರಾಬಾದು ಕರ್ನಾಟಕವೇ ಮೂಲವೆಂದು ಹೇಳಬಹುದು. ಕನ್ನಡ ಸಾಹಿತ್ಯಕ್ಕೆ ಹೊಸ ರೂಪವೊಂದನ್ನು ಕೊಟ್ಟು ವಚನ ಸಾಹಿತ್ಯವನ್ನು ಬೆಳಕಿಗೆ ತಂದ ಮಹಾಮಹಿಮರಾದ ಬಸವಣ್ಣ, ಅಕ್ಕಮಹಾದೇವಿ, ಅಲ್ಲಮಪ್ರಭು ಇವರ ಕಾರ್ಯಕ್ಷೇತ್ರ ಹೈದರಾಬಾದ ಕರ್ನಾಟಕವಾಗಿದೆ. ದಾಸ ಸಾಹಿತ್ಯಕ್ಕೆ ಅಮೂಲ್ಯ ಕಾಣಿಕೆಯಿತ್ತ ಜಗನ್ನಾಥದಾಸರು ಹೈದರಾಬಾದಿನ ಮಾನ್ವಿ ಊರಿನವರು. ಲಿಂಗಸೂಗೂರಿನ ಪ್ರಾಣೇಶದಾಸರೂ ಕೂಡ ಹೈದರಾಬಾದಿನವರು. ಇಬ್ಬರೂ ಈ ರಾಯಚೂರ

ಜಲ್ಲೆಯವರೇ. ರಾಯಚೂರು ಹೈದರಾಬಾದ ಕರ್ನಾಟಕ ಕೇಂದ್ರ ಸ್ಥಾನವಾಗಿದೆ. ಇಲ್ಲಿಯ ಐತಿಹಾಸಿಕ ಮಹತ್ವವನ್ನು ಸಾರಿ ಹೇಳುವಂತೆ ರಾಯಚೂರ, ಆನೆಗುಂದಿ, ದೇವದುರ್ಗ, ಕೊಪ್ಪಳ, ಮುದಗಲ್ಲ, ಮಲಿಯಾಬಾದ ಮೊದಲಾದ ಸ್ಥಳಗಳಲ್ಲಿಯ ಪುರಾತನ ಕೋಟೆ ಕೊತ್ತಳಗಳು ಇನ್ನೂ ತಲೆ ಎತ್ತಿ ಹಿಂದಿನ ವೈಭವಕ್ಕೆ ಸಾಕ್ಷಿಯಾಗಿ ನಿಂತಿವೆ. ರಾಯಚೂರು "ಕನ್ನಡದ ಕಾಶಿ" ಎಂದು ಕನ್ನಡದ ಕಣ್ವ ಬಿ. ಎಂ. ಶ್ರೀಯವರು ಹೇಳಿದ ಒಂದು ಮಾತು ಈ ಹೊತ್ತಿನಲ್ಲಿ ನೆನಪಿಗೆ ಬರುತ್ತದೆ. ನಿಜ! ಈ ಪುಣ್ಯ ಕ್ಷೇತ್ರದ ದರ್ಶನ ಲಾಭ ನಿಮ್ಮಿಂದಾಗಿ ನಮಗೆಲ್ಲರಿಗೆ ಲಭಿಸಿದೆ. ನಮ್ಮ ನಾಡಿನ ವಿವಿಧ ಜನರ, ಸಾಹಿತಿಗಳ, ನಾಟಕಕಾರರ, ಕವಿಗಳ ಸಂಗಮ ಸ್ಥಾನವಾಗಿದೆ ಇದೀಗ ಈ ಪುಣ್ಯಕ್ಷೇತ್ರ.

ರಾಯಚೂರು, ಕಲ್ಯಾಣ, ಬೀದರ, ಕಲಬುರ್ಗಿ ಇವೆಲ್ಲ ಕರ್ನಾಟಕದ ಭಾಗಗಳಾಗಿದ್ದರೂ ಭಿನ್ನ ಭಿನ್ನ ಆಡಳಿತೆಯಿಂದಾಗಿ ನಾವೆಲ್ಲ ದೂರವಾಗಿದ್ದೆವು. ಒಂದುಗೂಡುವದಕ್ಕಾಗಿ ಇಂದಿನವರೆಗೆ ಪರಿಶ್ರಮಿಸಿದೆವು. ಇದೀಗ ನಮ್ಮ ಆ ಯತ್ನ ಕೈಗೂಡಿದಂತಾಗಿದೆ. ಕರ್ನಾಟಕ ಏಕೀಕರಣ ಇನ್ನು ಕೆಲವೇ ತಿಂಗಳುಗಳ, ದಿನಗಳ ಮಾತಾಗಿದೆ. ಸಮಗ್ರ ಭಾರತದ ಐಕ್ಯ ಉನ್ನತಿಗಳಿಗೆ ಅನುಗುಣವಾಗಿ ನಮ್ಮ ಕನಸಿನ ಭವ್ಯ-ದಿವ್ಯ ಕರ್ನಾಟಕವನ್ನು ಕಟ್ಟಲು ಇಂದೇ ನಾವು ಸಿದ್ಧರಾಗಿ ನಿಂತಿರಬೇಕಾಗಿದೆ. ವಿದ್ಯಾರಣ್ಯರ ಆ ತಪಸ್ಸಿನ ರಾಜ್ಯವಾಗಿದ್ದ ನಮ್ಮ ಕನ್ನಡ ನಾಡು ಇಂದು ಪ್ರತಿಯೊಬ್ಬ ಸಾಮಾನ್ಯ ಕನ್ನಡಿಗನ ತಪಸ್ಸು, ಹೋರಾಟ, ಸಾಧನೆ, ಸ್ವಾರ್ಥತ್ಯಾಗಗಳಿಂದ ರೂಪಗೊಳ್ಳುವ ಸಮೃದ್ಧ ನಾಡಾಗಬೇಕಾಗಿದೆ. ಇಂತಹ ಪುಣ್ಯಕಾಲದಲ್ಲಿ ನಾವಿಂದು ನೆರೆದಿದ್ದೇವೆ.

ಕನ್ನಡ ನಾಡಿನ ಇತಿಹಾಸ ಉಜ್ವಲವಾಗಿದೆ; ಸಾಹಿತ್ಯ ಭವ್ಯವಾಗಿದೆ; ಸಂಸ್ಕೃತಿ ಹಿರಿದಾಗಿದೆ; ಎಲ್ಲ ನಿಜ. ಆದರೆ ಕೇವಲ ಹಿಂದಿನ ನೆನಪಿನಿಂದ ನಾವು ಬದುಕಲಾರೆವು. ಹಿಂದಿನ ವೈಭವದಿಂದ ಸ್ಫೂರ್ತಿಯನ್ನು ಪಡೆದು ನಾವು ಇಂಥ ನಾಡು ಕಟ್ಟಲು ಮುಂದಾಗಬೇಕಾಗಿದೆ. ನುಡಿಯನ್ನು ಅಭಿವೃದ್ಧಿಗೊಳಿಸಬೇಕಾಗಿದೆ. ಭವ್ಯ ಕರ್ನಾಟಕವನ್ನು ಕಟ್ಟಲು ಕನ್ನಡ ನಾಡಿನವರಾದ ನಾವೆಲ್ಲ ಸಿದ್ಧರಾಗಬೇಕಾಗಿದೆ. ಅದರಲ್ಲೂ ತ್ಯಾಗ, ಸೇವೆ, ಸಾಹಸಗಳ ಪ್ರತೀಕರಾದ ಮಹಿಳೆಯರು ಹೆಚ್ಚಿನ ಪಾತ್ರ ವಹಿಸಬೇಕಾಗಿದೆ. ಹಾಗೆ ನೋಡಿದರೆ ಮಹಿಳೆಯರೇ ಸಂಸ್ಕೃತಿಯ ನಿಜವಾದ ರಕ್ಷಕರು. ಗಂಡಸರು ತಮ್ಮ ಹೊಟ್ಟೆಯ ಪಾಡಿಗಾಗಿಯೋ ಅಥವಾ ಇತರ ಕಾರಣಗಳಿಂದಾಗಿಯೋ ತಾವಿದ್ದ ಪ್ರದೇಶಗಳ ನಡೆನುಡಿಗಳಿಗೆ ಹೊಂದಿಕೊಂಡು ಹೋಗಬೇಕಾಗುವುದು. ಆದರೆ ಮಹಿಳೆಯರು ಎಂದಿನಿಂದಲೂ ತಮ್ಮ ತಾಯಿನುಡಿ ಕನ್ನಡವನ್ನೂ, ಸಂಸ್ಕೃತಿಯನ್ನೂ ಉಳಿಸಿಕೊಂಡು ಬಂದಿದ್ದಾರೆ; ಬೆಳಸಿಕೊಂಡು ಬಂದಿದ್ದಾರೆ.

ಮಹಿಳೆಯರಾದ ನಾವು ಇಂದು ಸಾರ್ವಜನಿಕ ರಂಗದಲ್ಲಿ ಅಥವಾ ಮತ್ತಿತರ ಯಾವದೇ ರಂಗಗಳಲ್ಲಿ ಹೆಚ್ಚಾಗಿ ಮುಂದೆ ಬಂದಿಲ್ಲ. ವಿಶ್ವದ ಇತರ ದೇಶಗಳನ್ನು ಹೋಲಿಸಿದರೆ ನಮ್ಮ ದೇಶ ಸಾಕಷ್ಟು ಈ ದಿಶೆಯಲ್ಲಿ ಹಿಂದುಳಿದಿದೆಯೆಂದೇ ಹೇಳಬೇಕು. ಕೈ ಬೆರಳುಗಳಿಂದ ಎಣಿಸುವಷ್ಟು ಹೆಸರುಗಳನ್ನು ನಾವು ಹೇಳಬಹುದು. ಒಬ್ಬ ವಿಜಯಲಕ್ಷ್ಮಿ ಪಂಡಿತ ಸಂಯುಕ್ತರಾಷ್ಟ್ರಸಂಘದ ಅಧ್ಯಕ್ಷರಾಗಿರಬಹುದು - ಇನ್ನೊಬ್ಬ ಅಮೃತಕೌರ್ ಮಂತ್ರಿಯಾಗಿರಬಹುದು-ಸರೋಜನಿ ನಾಯಿಡು ಲಕ್ಷಾಂತರ ಜನಮನ ಹೃದಯಗಳನ್ನು ತಮ್ಮ ಕಾವ್ಯ ಕಿನ್ನರಿಯಿಂದ ಅರಳಿಸಿರಬಹುದು. ಆದರೆ ವಿಜಯಲಕ್ಷ್ಮಿ, ಅಮೃತಕೌರ್

ಸರೋಜಿನಿ ನಾಯಿಡು ಅವರಂತಹ ನೂರಾರು–ಸಾವಿರಾರು ಮಹಿಳೆಯರು ತಯಾರಾಗ ಬೇಕಾಗಿದೆ. ಕರ್ನಾಟಕದಲ್ಲಿಯೂ ಅನೇಕ ಮಹಿಳೆಯರು, ಸಾಹಿತಿಗಳಾಗಿ, ಸಾಮಾಜಿಕ ಕಾರ್ಯಕರ್ತರಾಗಿ, ರಾಜಕಾರಣಿಗಳಾಗಿ ವಿವಿಧ ಕ್ಷೇತ್ರಗಳಲ್ಲಿ ತುಂಬು ಶ್ರದ್ಧೆಯಿಂದ ದುಡಿ ದಿದ್ದಾರೆ; ದುಡಿಯುತ್ತಿದ್ದಾರೆ. ಅಂಥವರ ಸಂಖ್ಯೆ ಮನೆಮನೆಗೆ ಹೆಚ್ಚಬೇಕಾಗಿದೆ.

ಸಾಹಿತ್ಯ ಕ್ಷೇತ್ರದಲ್ಲಿ "ಹೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ" ಎಂದು ಹೆಣ್ಣಿನ ಬಗೆಗೆ ಆದರ ಭಾವವನ್ನು ಹುಟ್ಟಿಸಿದ ಕವಯಿತ್ರಿ ಸಂಚಿ ಹೊನ್ನಮ್ಮ, ವಚನ ಸಾಹಿತ್ಯ ದಲ್ಲಿ ಶ್ರೇಷ್ಠ ಸ್ಥಾನ ಪಡೆದ ಅಕ್ಕಮಹಾದೇವಿ, ಹೆಳವನ ಕಟ್ಟೆಯ ಗಿರಿಯಮ್ಮ, ಕಂತಿ ಮೊದಲಾದವರ ಹೆಸರು ಸಾಹಿತ್ಯದಲ್ಲಿ ಅಮರವಾಗಿ ಉಳಿದಿವೆ. ರಾಜಕೀಯ ಕ್ಷೇತ್ರ ದಲ್ಲಂತೂ ನಮ್ಮ ಮಹಿಳೆಯರು ಭಾಗವಹಿಸಿದ ಪಾತ್ರ ಇತಿಹಾಸದಲ್ಲಿ ಸುವರ್ಣಾಕ್ಷರದಲ್ಲಿ ಬರೆದಿಡಲ್ಪಟ್ಟಿದೆ. ಆಂಗ್ಲರ ಗುಂಡುಗಳ ಸುರಿಮಳೆಯನ್ನು ಲೆಕ್ಕಿಸದೆ ದೇಶಪ್ರೇಮದ ದಿವ್ಯತೆ ಯನ್ನು ಬೀರುತ್ತ ಮುಂದೆ ಸಾಗಿದ ವೀರ ರಾಣಿ ಕಿತ್ತೂರ ಚನ್ನಮ್ಮ, ಅಪ್ರತಿಮ ಶೌರ್ಯ ತ್ಯಾಗಗಳಿಂದ ಕೋಟೆಯನ್ನು ರಕ್ಷಿಸಿದ ಒನಕೆಯ ಓಬವ್ವ, ಗಂಡಾತರ ಪರಿಸ್ಥಿತಿ ಯಲ್ಲಿ ಹೌಹಾರದೆ ದೇಶದ ನಾಯಕತ್ವವನ್ನು ವಹಿಸಿದ ಬೆಳವಡಿ ಮಲ್ಲಮ್ಮ, ವೀರ ರಾಣಿ ಚಾಂದಬೀಬಿ, ಇತ್ತೀಚೆಗೆ ಕರನಿರಾಕರಣೆ ಚಳವಳಿಯಲ್ಲಿ ಕನ್ನಡದ, ಅದರಲ್ಲೂ ಕಾರ ವಾರದ ವೀರ ಮಹಿಳೆಯರು ನಡೆಯಿಸಿದ ಹೋರಾಟ, ಸಹಿಸಿದ ದುಃಖ, ಆದರೂ ಎದೆ ಗುಂದದೆ ಮುನ್ನಡೆದ ಅವರ ಕತೆ ಭಾರತ ಸ್ವಾತಂತ್ರ್ಯ ಸಂಗ್ರಾಮದ ವೀರ ಕತೆಯಾಗಿದೆ. ಮಾತೆ ಶಾರದಾಮಣಿ ದೇವಿ ಹಾಗು ತಾಯಿ ಕಸ್ತೂರಿ ಬಾ ಅಂಥವರು ತಮ್ಮ ಸರಳತೆ, ತ್ಯಾಗ, ಸೇವಾಬುದ್ಧಿಗಳಂಥ ಸದ್ಗುಣಗಳಿಂದ ಮಾನವಕೋಟಿಗೆ ಅಮೋಘ ಸೇವೆ ಸಲ್ಲಿಸಿದ ಉದಾಹರಣೆಗಳು ನಮ್ಮೆದುರಿವೆ. ಇವೆಲ್ಲ ಹಿಂದಿನ ನೆನಹುಗಳು ನಮಗೆ ಚೈತನ್ಯದಾಯಕ ವಾಗಿವೆ. ಆದರೆ 'ಇಂದಿನ' ಜನ ನಾಳೆಗೆ ಆದರ್ಶವಾಗಬೇಕು. ನಾವು ತುಳಿದ ನೆಲ, ನಾವು ನಂಬಿದ ಆದರ್ಶ ಮುಂದಿನ ಕಾಲದ ಜನರು ಅನುಸರಿಸುವಂತಾಗಬೇಕು. ಹಿಂದೆ ನಾವು ದೃಷ್ಟಿ ಚೆಲ್ಲಿದಾಗ ಇಂದಿನವರಾದ ನಾವು ಸಾಕಷ್ಟು ಮುಂದುವರೆದಿಲ್ಲವೆಂದು ವಿಷಾದ ದಿಂದ ಹೇಳಬೇಕಾಗಿದೆ.

ಸಾಹಿತ್ಯ ಸಮ್ಮೇಲನಗಳು ನಡೆಯುವದು, ನಮ್ಮ ಸಾಹಿತ್ಯ ಈ ವರೆಗೆ ನಡೆದು ಬಂದ ದಾರಿಯನ್ನು ಕುರಿತು, ಚರ್ಚೆ, ಸಮಾಲೋಚನೆ ನಡೆಸಿ, ಮುಂದಿನ ನಮ್ಮ ಮಾರ್ಗವನ್ನು ಗುರುತಿಸಿಕೊಳ್ಳುವದಕ್ಕಾಗಿ ಎಂಬ ಮಾತು ಅನೇಕ ಸಲ ಕೇಳಿಬರುತ್ತದೆ. ಹಾಗಾದರೆ ಇಂಥ ಸಮ್ಮೇಲನಗಳ ಅಂಗವಾಗಿ ನಡೆಯುವ ಗೋಷ್ಠಿಗಳ ಗುರಿ ಗಮ್ಯವೇನು? ಎಂಬ ಪ್ರಶ್ನೆ ಏಳುವದು ಸಹಜ. ಕೇವಲ ಆಯಾ ವಿಭಾಗದ ಸಾಹಿತ್ಯದ ಬಗ್ಗೆ ಮಾತ್ರ ನಾವು ವಿಚಾರಿಸಬೇಕೆ? ವಿಜ್ಞಾನ ಗೋಷ್ಠಿಯು ವೈಜ್ಞಾನಿಕ ಸಾಹಿತ್ಯದ ಕುರಿತು, ಗದ್ಯ–ಗೋಷ್ಠಿ ಪದ್ಯ–ಗೋಷ್ಠಿಗಳು ಆಯಾ ಸಾಹಿತ್ಯಾಂಗಗಳ ಕುರಿತು ಚರ್ಚಿಸುವದು ತಪ್ಪೇನಲ್ಲ. ಸಾಹಿತ್ಯದ ವಿವಿಧಾಂಗಗಳ ಕೂಲಂಕಷ ವಿಮರ್ಶೆಗೆ ಅದು ಆವಶ್ಯಕವೇ. ಆದರೆ ಮಹಿಳಾಗೋಷ್ಠಿಯು ಇದರಿಂದ ತುಸು ಭಿನ್ನವಿರಬೇಕೆಂದು ನನ್ನ ಕಲ್ಪನೆ. ಏಕೆಂದರೆ ಕೇವಲ ಮಹಿಳೆಯರು ಬರೆದ ಸಾಹಿತ್ಯ, ಕನ್ನಡ ಸಾಹಿತ್ಯದ ಪ್ರತ್ಯೇಕ ಅಂಗ ವೆಂದು ಯಾರೂ ಭಾವಿಸಲಾರರು. ಮಹಿಳಾ ಗೋಷ್ಠಿಯು "ಮಹಿಳಾ ಸಾಹಿತ್ಯ"ವನ್ನು

ಮಾತ್ರ ಚರ್ಚಿಸುವ ಪೀಠವಾಗದೆ ಸಮಗ್ರ ಮಹಿಳೆಯರ ಸ್ಥಾನಮಾನ, ಹೊಣೆಗಾರಿಕೆ ಮತ್ತು ಅದರ ಕಾರ್ಯಕ್ಷೇತ್ರವನ್ನು ಕುರಿತು ಗಮನಿಸುವಂತಾಗಬೇಕು.

ನಮ್ಮ ದೇಶವು ಸ್ವಾತಂತ್ರ್ಯವನ್ನು ಗಳಿಸಿದನಂತರ ಕಲ್ಯಾಣ ರಾಜ್ಯದ ದಾರಿಯಲ್ಲಿ ಮುಂದೆ ಸಾಗುತ್ತಿದೆ. ಜನ ಸಾಮಾನ್ಯರ ಜೀವನಮಟ್ಟ ಏರಬೇಕು, ಬಾಳ್ವ ಸುಖಮಯವಾಗಬೇಕು, ಅತೃಪ್ತಿ, ವಿಷಮತೆಗಳು ತೊಲಗಬೇಕೆಂಬುದೇ ದೇಶದ ಗುರಿಯಾಗಿದೆ. ಸಹಕಾರ ತತ್ವವನ್ನೇ ನೆಲಗಟ್ಟನ್ನಾಗಿರಿಸಿಕೊಂಡ ಸರ್ವೋದಯ ಅಥವಾ ಸಮಾಜವಾದೀ ಸ್ವರೂಪದ ಸಮಾಜದ ಆದರ್ಶವನ್ನು ಭಾರತವು ಇತ್ತೀಚಿಗೆ ಆರಿಸಿಕೊಂಡಿದೆಯಷ್ಟೆ! ಅಂಥ ಸಮಾಜ ವ್ಯವಸ್ಥೆಯ ನಿರ್ಮಾಣದ ಕಾರ್ಯವು ಈಗ ಸರ್ವರ ಲಕ್ಷ್ಯವನ್ನು ಸೆಳೆದಿದೆ. ಅಜ್ಞಾನಕ್ಕೆಡೆಯಿಲ್ಲದ, ಅನ್ಯಾಯಕ್ಕಾಸ್ಪದವಿಲ್ಲದ, ವರ್ಗರಹಿತ ಸಮಾಜ ಕಲ್ಪನೆಗೆ ಮತ್ತು ಅದರ ಸಾಧನೆಗೆ ನಮ್ಮ ರಾಜ್ಯ ಘಟನೆಯಲ್ಲಿ ಸಾಕಷ್ಟು ಅವಕಾಶವಿದೆ. ಸಕಲರ ಸರ್ವತೋಮುಖ ಏಳಿಗೆಯಲ್ಲಿ ಮಾನವನು ತನ್ನ ಇಷ್ಟಾರ್ಥವನ್ನು ಕಂಡುಕೊಳ್ಳುವ ಕಲ್ಪನೆ ಸಾಮಾನ್ಯವಾದುದಲ್ಲ. ಅಂಥ ಸಮಾಜ ವ್ಯವಸ್ಥೆಯ ರಚನೆಯಲ್ಲಿ ಮಹಿಳೆಯರ ಪಾತ್ರವೇನೆಂಬುದನ್ನು ಮಹಿಳೆಯರು ವಿಚಾರಿಸುವ ಕಾಲ ಬಂದಿದೆ. ಇಲ್ಲವಾದರೆ ಸುತ್ತಮುತ್ತಲಿನ ಪರಿಸ್ಥಿತಿಯನ್ನು ಅಲಕ್ಷಿಸಿದಂತಾದೀತು. ಈ ಸಮಸ್ಯೆಯನ್ನು ಸರಿಯಾಗಿ ಸಮಾಲೋಚಿಸಿ, ಯೋಗ್ಯ ನಿರ್ಣಯಕ್ಕೆ ಬಂದು ಕಾರ್ಯಪ್ರವೃತ್ತರಾಗಲೇಬೇಕಾದ ಕಾಲ ಸನ್ನಿಹಿತವಾಗಿದೆ. ಹೊಸ ಸಮಾಜ ವ್ಯವಸ್ಥೆಯಲ್ಲಿ ಜಾತಿಯಿಂದ ಬಂದ ಕೀಳುಮೇಲುಗಳಿಗೆ ಸ್ಥಾನವಿರಲಾರದು; ಅಲ್ಲಿ ನೀತಿಗೆ ಪ್ರಾಮುಖ್ಯವಿರುವದು; ಗುಣಗಳಿಗೆ ಮಹತ್ವವಿರುವುದು; ಕೃತಿಗಳಿಗೆ ಮನ್ನಣೆಯಿರುವದು. ಸಾಮಾಜಿಕ ಅನ್ಯಾಯಗಳನ್ನು ದೂರಗೊಳಿಸುವಲ್ಲಿ, ಆರ್ಥಿಕ ಅಸಮಾನತೆಗಳನ್ನು ಹೊಡೆದೋಡಿಸುವಲ್ಲಿ, ಅಜ್ಞಾನದ ಅಂಧಕಾರವನ್ನು ತೊಲಗಿಸಿ ಜ್ಞಾನ ಪ್ರಸಾರ ಮಾಡುವಲ್ಲಿ, ಅವಕ್ಕನುಗುಣವಾದ ಸಾಹಿತ್ಯ ಕೃತಿಗಳ ನಿರ್ಮಾಣದಲ್ಲಿ ಪುರುಷರೊಂದಿಗೆ ಮಹಿಳೆಯರೂ ಸರಿಸಮಾನರಾಗಿ ದುಡಿದಾಗಲೇ ಹೊಸ ಸಮಾಜ ವ್ಯವಸ್ಥೆಯನ್ನು ನೋಡುವ ಸಮಯ ನಮಗೆ ದೊರೆಯುವದು. ಆದುದರಿಂದ ಮಹಿಳೆಯರು ಈ ದಿಶೆಯಲ್ಲಿ ತಮ್ಮ ಪಾತ್ರವನ್ನು ವಹಿಸಲಿಕ್ಕೆ ಮುಂದೆ ಬರಬೇಕೆಂದು ನಾನು ಈ ಸಮಯದಲ್ಲಿ ಪ್ರಾರ್ಥಿಸಿಕೊಂಡರೆ ವಿಷಯ ಬಾಹಿರವೆಂದು ತಾವು ಭಾವಿಸಲಾರಿರೆಂದು ನಂಬುತ್ತೇನೆ.

ಆಧುನಿಕ ಸಮಾಜ ರಚನೆಯಲ್ಲಿ, ಹೊಸ ಆರ್ಥಿಕ ಹಾಗು ಸಾಮಾಜಿಕ ವ್ಯವಸ್ಥೆಯಲ್ಲಿ ಮಹಿಳೆಯರ ಉನ್ನತಿಯ ಕಾರ್ಯ ಎಷ್ಟೊಂದು ಮಹತ್ವದ್ದೆಂಬುದನ್ನು, ಆವಶ್ಯಕವೆಂಬುದನ್ನು, ನಮ್ಮ ರಾಜ್ಯಕರ್ತರು ಅರಿತಿದ್ದಾರೆ, ಅರಿತು ಕಾರ್ಯೋನ್ಮುಖರೂ ಆಗಿದ್ದಾರೆ. ಭಾರತೀಯ ಮಹಿಳೆಗೆ ಶಿಕ್ಷಣ, ಉದ್ಯೋಗ, ಮೊದಲಾದ ವಿವಿಧ ಕ್ಷೇತ್ರಗಳಲ್ಲಿ ಸಮಾನಾವಕಾಶವನ್ನು ರಾಜ್ಯ ಘಟನೆಯು ನೀಡಿದೆ. ರಾಜ್ಯ ಘಟನೆಯು ರೂಪುಗೊಳ್ಳುತ್ತಿದ್ದ ಸಮಯದಲ್ಲಿ ಹಿಂದುಳಿದ ವರ್ಗದವರಂತೆ, ಮಹಿಳೆಯರಿಗಾಗಿಯೂ ಕೆಲ ಸಂರಕ್ಷಣೆಯ ಕಲಮುಗಳನ್ನು ಸೇರಿಸಬೇಕೆಂಬ ಸೂಚನೆಯೊಂದು ಘಟನಾ ಸಮಿತಿಯ ಎದುರು ಬಂದಿತ್ತು. ಆದರೆ ನಮ್ಮ ದೇಶದ ಮಹಿಳೆಯರೇ ಇಂಥ ವಿಶೇಷ ವ್ಯವಸ್ಥೆಯ ಅಗತ್ಯವಿಲ್ಲೆಂದು ವಾದಿಸಿದರು. ಭಾರತದ ಮಹಿಳೆಯರು ಜಾಗೃತರಾಗಿರುವರೆಂದೂ ಘಟನಾತ್ಮಕ ಸಂರಕ್ಷಣೆಯಿಲ್ಲದೆಯೇ ಅವರು ತಮ್ಮ ವಿಕಾಸವನ್ನು ಸಾಧಿಸಿಕೊಳ್ಳಬಲ್ಲರೆಂದೂ ಹೇಳಿದರು. ಈ

ಮಾತನ್ನು ನಾವೀಗ ಸತ್ಯಮಾಡಿ ತೋರಿಸಬೇಡವೆ? ಪುರುಷರಿಗೆ ಸರಿಸಮಾನರಾಗಿ ಸಕಲ ಕ್ಷೇತ್ರಗಳಲ್ಲಿ ಮುಂದುವರಿಯಬೇಕಲ್ಲವೆ? ಆದರೆ ನಮಗಿರುವ ಅವಕಾಶಗಳ ಲಾಭಪಡೆಯಲು ನಮ್ಮ ಮಹಿಳೆಯರು ಮುಂದೆ ಬರುತ್ತಿದ್ದಾರೆಯೆ? ಹಳೆಯ ಪರಂಪರಾಗತವಾದ ರೂಢಿಗಳ ಕಟ್ಟುಗಳನ್ನು ಹರಿದೊಗೆಯುವದು ಅಷ್ಟೊಂದು ಸುಲಭವಲ್ಲವೆಂಬುದು ನಿಜ. ಆದರೂ ಪ್ರಗತಿಯ ಗತಿ ತೀವ್ರವಾಗಬೇಕಾದರೆ ಆ ದಿಶೆಯಲ್ಲಿ ಬಲವಾದ ಪ್ರಯತ್ನವೂ ಅಗತ್ಯ. ನಾವು ಮಹಿಳೆಯರು ಎಚ್ಚರಾಗಬೇಕು. ಮಹಿಳೆಯರೇ ಮುಂದೆ ಬರಲು ಸಿದ್ಧರಾಗದಿದ್ದರೆ ಅವರ ಕಲ್ಯಾಣ ಉನ್ನತಿಗಳ ಬಗ್ಗೆ ಎಷ್ಟೇ ದೊಡ್ಡ ಸದಿಚ್ಛೆಯುಳ್ಳ ಸರಕಾರಿ ಅಥವಾ ಇತರ ಪ್ರಯತ್ನಗಳು ಫಲಕಾರಿಯಾಗಲಾರವು. ಈ ದಿಶೆಯಲ್ಲಿ ನನ್ನ ಸುಶಿಕ್ಷಿತ ಭಗಿನಿಯರ ಹೊಣೆ ಬಹಳ ಗುರುತರವಾಗಿದೆ. ಕನ್ನಡ ನಾಡು ಭಾರತದ ನಕ್ಷೆಯಲ್ಲಿ ತನ್ನ ಹಿರಿಮೆಯ ಸ್ಥಾನವನ್ನು ಪಡೆಯಬೇಕಾದರೆ ಕನ್ನಡ ಮಹಿಳೆಯರು ತಮ್ಮ ಪಾಲಿನ ಹೊಣೆಯನ್ನು ಯಶಸ್ವಿಯಾಗಿ ನಿರ್ವಹಿಸಲೇಬೇಕು.

ಈ ಸಂದರ್ಭದಲ್ಲಿ, ಮಹಿಳೆಯರಿಗೆ ಇರುವ ಕಾರ್ಯಕ್ಷೇತ್ರ ತುಂಬ ವಿಶಾಲವಾಗಿದೆ. ನಮ್ಮ ಸಮಾಜದಲ್ಲಿರುವ ಅಜ್ಞಾನ ಬಡತನಗಳೊಂದಿಗೆ ಅತೃಪ್ತಿಕರವಿರುವ ಪ್ರಸೂತಿ ಸೌಕರ್ಯಗಳ ಕಾರಣದಿಂದಾಗಿ ಎಷ್ಟೊಂದು ಜನ ತಾಯಂದಿರು ಮರಣದ ದವಡೆಗೆ ತುತ್ತಾಗುತ್ತಿರುವರೆಂಬುದನ್ನು ನೆನೆದರೆ ಮೈ ನವಿರೇಳುತ್ತದೆ. ಭಾರತದಲ್ಲಿ ಪ್ರತಿವರುಷ 2 ಲಕ್ಷ ಸ್ತ್ರೀಯರು ಪ್ರಸೂತಿ ಸಮಯದಲ್ಲಿ ಮರಣಹೊಂದುತ್ತಾರೆಂದು ದೇಶದ ಯೋಜನಾ ಆಯೋಗವು ಲೆಕ್ಕಹಾಕಿದೆ. ಕರ್ನಾಟಕದ ಪರಿಸ್ಥಿತಿ ಇದಕ್ಕಿಂತ ಭಿನ್ನವಾಗಿಲ್ಲ. ಮಹಿಳೆಯರಿಂದ ಈ ದಿಶೆಯಲ್ಲಿ ದುಡಿಯಲು ಎಷ್ಟು ಬೇಕಷ್ಟು ಅವಕಾಶವಿಲ್ಲವೆ? ನಮ್ಮ ತರುಣಿಯರು ಕಲಿತು, ದಾದಿಯರಾಗಿ, ವೈದ್ಯವೃತ್ತಿಯವರಾಗಿ ಸೇವಾ ಭಾವನೆಯಿಂದ ದುಡಿದು ಬೇನೆ ಬೇಸರಿಕೆಗಳಿಂದ ನರಳುತ್ತಿರುವ ನಾಡಿನ ಭಗಿನಿಯರಿಗೆ, ಬಾಲಕರಿಗೆ, ಹಾಗು ಇತರರಿಗೆ ಆರೋಗ್ಯವನ್ನೂ ಚೈತನ್ಯವನ್ನೂ ನೀಡಬಲ್ಲರು. ನಮ್ಮ ಮಹಿಳೆಯರಿಗೆ ಯೋಗ್ಯ ಶಿಕ್ಷಣ ದೊರೆತರೆ ಎಂತಹ ಮಹಾ ಕಾರ್ಯವಾದರೂ ಸಾಧಿಸದೆ ಇರಲಾರದು. ಕಸ್ತೂರಿಬಾ ಗಾಂಧೀ ರಾಷ್ಟ್ರೀಯ ಸ್ಮಾರಕ ನಿಧಿಯವರು ಮಹಿಳಾ ಕಲ್ಯಾಣದ ಮತ್ತು ಶಿಶುಕಲ್ಯಾಣದ ಚಟುವಟಿಕೆಗಳನ್ನು ನಡೆಸುತ್ತಿದ್ದಾರೆ. ಉತ್ಸಾಹಿ ಕಾರ್ಯಕರ್ತಕರು ಮುಂದೆ ಬಂದಲ್ಲಿ ಕರ್ನಾಟಕದಲ್ಲಿ ಈ ಸಂಸ್ಥೆಯಿಂದ ಗ್ರಾಮೀಣ ಭಾಗಗಳ ತಾಯಿ-ಮಕ್ಕಳ ಕಲ್ಯಾಣಕಾರ್ಯ ಹೆಚ್ಚಾಗಿ ನಡೆಯಬಲ್ಲದು. ಕೇಂದ್ರ ಸರಕಾರದ ಸಮಾಜ ಕಲ್ಯಾಣ ಮಂಡಳವು ಮಹಿಳಾ ಸಂಘಟನೆಗಳಿಂದ ನಡೆಸಲ್ಪಡುವ ಸಮಾಜ ಸೇವಾ ಸಂಸ್ಥೆಗಳಿಗೆ ನೆರವು ನೀಡುತ್ತಿದೆ. ನಮ್ಮ ನಾಡಿನಲ್ಲೂ ಇಂತಹ ಹಲವಾರು ಸಂಸ್ಥೆಗಳು ಇನ್ನೂ ಹೆಚ್ಚಾಗಿ ತಲೆಯೆತ್ತಬೇಕೆಂದು ನನ್ನ ಮನೀಷೆ. ಏಕೆಂದರೆ ಭಾರತದ ಇತರೆಡೆಗಳಲ್ಲಿರುವಂತೆಯೇ ನಮ್ಮಲ್ಲೂ ನಿರ್ಗತಿಕ ಸ್ತ್ರೀಯರ ಸಮಸ್ಯೆ, ಅಭಾಗಿನಿ ಬಾಲಿಕೆಯರ ಸಮಸ್ಯೆ, ಪರಿತ್ಯಕ್ತರಾದ ಪತ್ನಿಯರ ಸಮಸ್ಯೆ, ದುರ್ದೈವಿ ವಿಧವೆಯರ ಸಮಸ್ಯೆಗಳು ಸಮಾಜದ ಎದುರಿಗಿಲ್ಲವೆ? ಇವಕ್ಕೆಲ್ಲ ಪರಿಹಾರವೇ ಇಲ್ಲವೆಂದು ನಾವು ಮಹಿಳೆಯರು ಅಸಹಾಯರಾಗಿ ಕೈಚಲ್ಲಿ ಕುಳಿತುಕೊಳ್ಳಬೇಕೆ? ಅಷ್ಟೊಂದು ಸುದೈವಿಗಳಲ್ಲದ ಭಗಿನಿಯರ ಸೇವೆಗಾಗಿ ನಮ್ಮ ಸುಶಿಕ್ಷಿತ ಅಕ್ಕತಂಗಿಯರು, ತಂಡತಂಡವಾಗಿ ಮುಂಬಂದರೆ ಇಂಥ ಗುಡ್ಡದಂತೆ ಕಾಣುವ ಸಮಸ್ಯೆಗಳು ಮಂಜಿನಂತೆ ಕರಗಿಹೋಗಬಲ್ಲವು. ಸಮಾಜದಲ್ಲಿ

ಸ್ವಾಸ್ಥ್ಯ ನೆಲೆಸಬಲ್ಲದು. ಮನೆಮನೆಗಳಲ್ಲಿ ಸುಖ ಸಂತಸದ ಹಾಡು ಹೊರಹೊಮ್ಮ ಬಲ್ಲದು.

ಇದೇ ರೀತಿ ಚಿಕ್ಕಮಕ್ಕಳ ಕಲ್ಯಾಣದ ಕಾರ್ಯವು ಮಹಿಳೆಯರೇ ಯಶಸ್ವಿಯಾಗಿ ನಿರ್ವಹಿಸಬಹುದಾದಂಥ ಇನ್ನೊಂದು ಕಾರ್ಯವಾಗಿದೆ. ಇಂದಿನ ಮಕ್ಕಳೇ ನಾಳಿನ ನಾಡಿನ ಆಶಾಕಿರಣ. ಮಕ್ಕಳ ಬೆಳವಣಿಗೆ, ಅವರ ವಿಕಾಸದ ಹೊಣೆ, ಪ್ರಪಂಚದಲ್ಲಿ ಬಹುಶಃ ಎಲ್ಲೆಡೆಗೆ ಕುಟುಂಬದ ಹೊಣೆಯೇ ಅಹುದು. ಈ ಹೊಣೆ ಹೆಚ್ಚಾಗಿ ತಾಯಿಯ ಮೇಲೆಯೇ ಇರುತ್ತದೆ. ಇತ್ತೀಚಿನ ಕಾಲದಲ್ಲಿ ಮಕ್ಕಳ ಯೋಗಕ್ಷೇಮದ ಈ ಪುರಾತನ ಕಲ್ಪನೆಯಲ್ಲಿ ತುಸು ಬದಲಾವಣೆಯುಂಟಾಗಿದೆಂಬುದು ನಿಜ. ಬದಲಾಗುತ್ತಿರುವ ವ್ಯವಸ್ಥೆಯಲ್ಲಿ ಸಮಾಜದ ಹಾಗು ಆಡಳಿತೆಯ ಹೊಣೆಯ ತಿಳುವಳಿಕೆ ಹೆಚ್ಚುತ್ತಿದೆ. ಆದರೂ ಅತ್ಯಂತ ಭದ್ರವಾದ, ಪುರಾತನವಾದ, ಕುಟುಂಬ ವ್ಯವಸ್ಥೆ ಭಾರತೀಯ ಸಂಸ್ಕೃತಿಯ ಕುರುಹಾಗಿ ಇನ್ನೂ ಅಚಲವಾಗಿ ನಿಂತಿದೆ. ಇಲ್ಲಿ ಮಕ್ಕಳ ಮಾನಸಿಕ, ಬೌದ್ಧಿಕ, ದೈಹಿಕ, ವಿಕಾಸದ ಹೊಣೆ ಕುಟುಂಬದ ಮೇಲೆ, ವಿಶೇಷವಾಗಿ ಮಾತೆಯರ ಮೇಲೆ ಇದೆ. "ಮಕ್ಕಳ ಸ್ಕೂಲು ಮನೇಲಲ್ವೆ?" ಎಂದು ಕನ್ನಡಕ್ಕೊಬ್ಬರೇ ಆದ ದಿ|| ಕೈಲಾಸಂ ಹೇಳಿದ ಮಾತು ನಮ್ಮ ಹೊಣೆಗಾರಿಕೆಯ ಅರಿವನ್ನು ಉಂಟುಮಾಡಿಕೊಡುವುದಕ್ಕಾಗಿಯೇ ಎಂದು ನಾನು ತಿಳಿದಿದ್ದೇನೆ. ನನ್ನ ಕನ್ನಡ ಭಗಿನಿಯರು ತಮ್ಮ ಮನೆ, ತಮ್ಮ ಮಕ್ಕಳು ಈ ಮರ್ಯಾದಿತ ಆವರಣದಲ್ಲಷ್ಟೇ ಅಲ್ಲದೆ ನಾಡಿನ, ಸಮಾಜದ ಎಲ್ಲ ಬಾಲ ಬಾಲಿಕೆಯರ ಕಲ್ಯಾಣ ಚಟುವಟಿಕೆಗಳಲ್ಲಿ ಆಸ್ಥೆ ವಹಿಸಿ, ದುಡಿದು, ಭಾರತಕ್ಕೇ ಭೂಷಣಪ್ರಾಯವಾಗುವಂತಹ ಕಾರ್ಯಶಕ್ತಿಯನ್ನು ತೋರ್ಪಡಿಸಲು ಸಮರ್ಥರಾಗುವರೆಂಬ ಭರವಸೆ ನನಗಿದೆ. ಅದಕ್ಕೆ ಯೋಗ್ಯವಾಗುವಂತಹ ವಾತಾವರಣವನ್ನು ನಿರ್ಮಿಸಲು ನಾವು ಹೆಣಗಬೇಕು. ನಾನೀಗ ಹೇಳಿದ ಒಂದೆರಡು ಅಂಶಗಳಲ್ಲದೆ ಅಂಗಹೀನರು, ಬಾಲ ಅಪರಾಧಿಗಳು ಮುಂತಾದ ಹಲವಾರು ಸಾಮಾಜಿಕ ಸುಧಾರಣೆಯ ಕಾರ್ಯಗಳಲ್ಲಿ ಮಾತೆಯ ಮಮತಾಪೂರ್ಣ ಆರೈಕೆ ಉಪಚಾರಗಳ ಆವಶ್ಯಕತೆ ಇರುವ ಅನೇಕ ಕಾರ್ಯಕ್ಷೇತ್ರಗಳಲ್ಲಿ ಮಹಿಳೆಯರು ತಮ್ಮ ಪಾಲಿನ ರಾಷ್ಟ್ರೀಯ ಋಣವನ್ನು ಸಲ್ಲಿಸುವಂತಾಗಬೇಕು. ಹೊಸದಾಗಿ ಸ್ವಾತಂತ್ರ್ಯ ಪಡೆದು ಪ್ರಪಂಚದ ರಾಷ್ಟ್ರಗಣದಲ್ಲಿ ತನ್ನ ಹೆಮ್ಮೆಯ ಸ್ಥಾನವನ್ನು ಮರಳಿ ಗಳಿಸಲು ಹೊರಟಿರುವ ದೇಶಕ್ಕೂ, ದೇಶದಲ್ಲಿ ಇಷ್ಟರಲ್ಲಿಯೇ ಅಸ್ತಿತ್ವದಲ್ಲಿ ಬರುವ ಏಕೀಕೃತ ಕರ್ನಾಟಕಕ್ಕೂ, ಇದು ನಾವು ಸಲ್ಲಿಸಬೇಕಾದ ಋಣ.

ಇದೆಲ್ಲ ನಾವು ಮಾತಾಡಿದ ಮಾತ್ರಕ್ಕೆ ಸಾಧಿಸೀತೆ? ಹಾಗೆ ನಾನೆಂದೂ ತಿಳಿದಿಲ್ಲ. ಇದು ಅತ್ಯಂತ ಬೃಹತ್ತರವಾದ ಕಾರ್ಯವೆಂಬುದನ್ನು ನಾನು ಬಲ್ಲೆ. ಆದರೆ ಇಲ್ಲಿ ನೆರೆದಿರುವ ನಾಡು ನುಡಿಗಳ ಪ್ರೇಮಿಗಳಾದ ನಾವು ನಮ್ಮ ಹೊಣೆಯನ್ನು ಅರಿತುಕೊಂಡು ತೀವ್ರ ಕಾರ್ಯೋನ್ಮುಖರಾಗುವ ಆವಶ್ಯಕತೆಯನ್ನು ಮನಗಾಣಬೇಕೆಂಬುದೇ ನನ್ನ ಉದ್ದೇಶ. ನಮ್ಮ ದೇಶದಲ್ಲಿ ನಿರಕ್ಷರತೆಯ ಪ್ರಮಾಣ ಬಹಳ ದೊಡ್ಡದು. ಮಹಿಳೆಯರಲ್ಲಂತೂ ಅದು ಇನ್ನೂ ಹೆಚ್ಚು. ಇಂಥ ಪರಿಸ್ಥಿತಿಯಲ್ಲಿ ಸುಶಿಕ್ಷಿತರು, ಸಾಹಿತಿಗಳು, ಸಾಹಿತ್ಯಪ್ರೇಮಿಗಳು ನಾಡಿನ ಹಳ್ಳಿಹಳ್ಳಿಗಳಲ್ಲಿಯ ನಿರಕ್ಷರ ಬಂಧುಭಗಿನಿಯರಲ್ಲಿ ಸಾಕ್ಷರತೆಯನ್ನು ಹೆಚ್ಚಿಸುವ, ಜಾಗೃತಿಯನ್ನು ತುಂಬುವ, ಸಾಮಾಜಿಕ ಪ್ರಜ್ಞೆಯನ್ನು ಬೆಳಸುವ ಮಹತ್ತರ ಹೊಣೆಗಾರಿಕೆಯನ್ನು ಹೊರಬೇಕು. ಗ್ರಾಮಗ್ರಾಮಕ್ಕೂ ಅರಿವಿನ ಅರವಟ್ಟಿಗೆ

ಏರ್ಪಡಬೇಕು. ಹೆಣ್ಣುಮಕ್ಕಳು ಕಲಿತು ಏನು ಮಾಡಬೇಕಾಗಿದೆ ಎಂಬ ತಾತ್ಸಾರ ಭಾವ ತೊಲಗಬೇಕು. ಈಚೀಚೆಗೆ ಈ ಭಾವನೆ ಕ್ರಮೇಣ ಕಡಿಮೆಯಾಗುತ್ತಿದೆಯೆಂಬುದ ಸಂತೋಷದ ಸಂಗತಿಯಾದರೂ ಇನ್ನೂ ಅದರ ನಿರ್ಗಮನ ಆಮೆಯ ಗತಿಯಲ್ಲೇ ಸಾಗಿದೆ. ಈ ಗತಿ ಎಷ್ಟಕ್ಕೂ ಸಾಲದು. ಒಂದೆಡೆಗೆ ಬಹು ಜನ ಸಮಾಜದ ಮಹಿಳೆಯರಲ್ಲಿ ಇಂಥ ಪರಿಸ್ಥಿತಿ ಇದ್ದರೆ, ಇನ್ನೊಂದೆಡೆ ಸಮಾಜದ ಕೆಲ ಹಂತಗಳಲ್ಲಿ ಹಳೆಯ ಆದರ್ಶಗಳಲ್ಲಿ ಮಹಿಳೆಯರ ಆಸ್ಥೆ ಕದಲುತ್ತಿದ್ದು ಪಾಶ್ಚಾತ್ಯರ ಹೊಸ ಆದರ್ಶಗಳ ಆಕರ್ಷಣೆಯ ಒತ್ತಡ ಹೆಚ್ಚುತ್ತಿರುವ ಲಕ್ಷಣಗಳು ಕಂಡುಬರುತ್ತಿವೆ. ಆದರೂ ಅವರು ಇನ್ನೂ ಅದಕ್ಕೆ ಸಂಪೂರ್ಣ ಮನಸೋತಿಲ್ಲವೆಂಬುದು ಸಂತೋಷದ ಸಂಗತಿ. ಭಿನ್ನ ಆದರ್ಶ–ಆಕರ್ಷಣೆ ಗಳ ಸುಳಿಯಲ್ಲಿ ಅವರು ಪೇಚಾಡುತ್ತಿದ್ದ ಸಂಧಿಕಾಲದಲ್ಲಿ ದೇಶವು ಸ್ವತಂತ್ರವಾದುದು ಶುಭಸೂಚಕವೇ ಎಂದು ಹೇಳಬಹುದು. ಈಗ ಅವರಿಗೆ ಭಾರತ ಸಂಸ್ಕೃತಿಗೆ ಅನುಗುಣ ವಾದ ನಿಚ್ಚಳ ಗುರಿಯನ್ನು ಗುರುತಿಸಿ ಅನುಸರಿಸಲು ಪೂರ್ಣ ಅವಕಾಶ ದೊರೆತಂತಾಗಿದೆ. ಜ್ಞಾನಕ್ಕಿಂತ ಪವಿತ್ರವಾದುದು ಬೇರೊಂದಿಲ್ಲವೆಂಬ ಶಾಶ್ವತ ಸತ್ಯವನ್ನು ಸಾರುವ ಜ್ಞಾನ ದೀವಟಿಗೆಗಳು ಎಲ್ಲೆಲ್ಲೂ ಪ್ರಜ್ವಲಿಸಿ ಬೆಳಗಬೇಕು. ಭಾರತೀಯ ಸಂಸ್ಕೃತಿಯ ಹಿರಿಮೆ ಇಲ್ಲಿ ಸ್ತ್ರೀಯರಿಗಿರುವ ಆದರ ಭಾವದಲ್ಲಿದೆ. ವೇದ ಕಾಲದಿಂದಲೂ ಮಹಿಳೆಯರು ವಿದ್ವ ನ್ಮಣಿಗಳ ಸಾಲಿನಲ್ಲಿ ಭೂಷಿತರಾಗಿದ್ದಾರೆ. ಆ ಹಿರಿಮೆಯನ್ನು ನಮ್ಮ ಇಂದಿನ ಮಹಿಳೆ ಯರೂ ಪಡೆಯಬೇಕು. ಮಹಿಳೆ ವಿದ್ಯೆ, ಜ್ಞಾನ, ಅನುಭವ ಸಂಪನ್ನಳಾಗಿ ಪುರುಷ ರೊಂದಿಗೆ ಸರಿಸಮಾನ ಸ್ಥಾನ ಗಳಿಸಿದಾಗಲೆ ನಾಡಿನ ಸರ್ವತೋಮುಖ ಸಮನ್ವಯತೆ ಏಳಿಗೆ ಸಾಧ್ಯ. ಸ್ತ್ರೀ ಪುರುಷರು ಜೀವನ ರಥದ ಎರಡು ಚಕ್ರಗಳೆಂದು ಹೇಳುವ ಮಾತು ಒಣ ಮಾತಾಗಬಾರದು.

ಅನೇಕ ವಿಷಯಗಳಲ್ಲಿ ನಮಗಿಂತಲೂ ನಮ್ಮ ನೆರೆಹೊರೆಯವರು ಮುಂದರಿ ದಿದ್ದಾರೆಂದು ನನಗನಿಸುತ್ತದೆ. ಇದೇ ಮಾತು ಅಲ್ಲಿಯ ಮಹಿಳೆಯರಲ್ಲಿ ಕಂಡುಬಂದ ಜಾಗೃತಿಗೂ ಅನ್ವಯಿಸುತ್ತದೆ. ಉದಾಹರಣೆಗಾಗಿ ಇಪ್ಪತ್ತನೆಯ ಶತಮಾನದ ಪ್ರಾರಂಭ ದಲ್ಲಿಯೇ ಮಹಾರಾಷ್ಟ್ರದ ಮಹಿಳೆಯರಲ್ಲಿ ಉಂಟಾದ ಜಾಗೃತಿ ಹಾಗೂ ವೈಚಾರಿಕ ಕ್ರಾಂತಿ ಗಳು ನಮ್ಮಲ್ಲಿ ಇನ್ನೂ ತಲೆದೋರಿದಿಲ್ಲವೆಂದರೂ ಸಲ್ಲುವುದು. ಮಹಿಳೆಯರ ಶಿಕ್ಷಣ ರಂಗದಲ್ಲಿ ಅಲ್ಲಿ ಅತಿ ಪ್ರಭಾವೀ ಕಾರ್ಯ ನಡೆದಿದೆ. ಮಹರ್ಷಿ ಕರ್ವೆಯವರಂಥ ಸಮಾಜ ಸುಧಾರಕರು ಅಲ್ಲಿ ಜನ್ಮ ತಾಳಿದ್ದರ ಪರಿಣಾಮವಾಗಿ ಸುಧಾರಣೆಯ ಗಾಳಿ ಅಲ್ಲಿ ಬಹು ಬೇಗ ಬೀಸಿತು. ಆ ತಪಸ್ವಿಗಳ ತಪಸ್ಸಿನ ಫಲವಾಗಿ ಬಹು ಹಿಂದೆಯೇ ಒಂದು ಮಹಿಳಾ ವಿಶ್ವವಿದ್ಯಾಲಯ ರೂಪುಗೊಂಡು ಇದೀಗ ಅದು ಶಾಸನಬದ್ಧ ವಿಶ್ವವಿದ್ಯಾಲಯವಾಗಿ ಶಾಶ್ವತರೂಪ ತಳೆದು ನಿಂತಿದೆ. ನಮ್ಮ ಕನ್ನಡ ನಾಡಿನಲ್ಲೂ ಅಂತಹ ಪ್ರಯತ್ನ ನಡೆಯ ಬೇಕಾದುದು ಅವಶ್ಯ. ಗ್ರಾಮೀಣ ವಿಭಾಗದ ಶೈಕ್ಷಣಿಕ ಅವಶ್ಯಕತೆಗಳನ್ನು ಪೂರೈಸಲು ಒಂದು ಗ್ರಾಮೀಣ ವಿಶ್ವವಿದ್ಯಾಲಯದ ಪ್ರಶ್ನೆಯನ್ನು ಕೂಡ ನಮ್ಮ ಶಿಕ್ಷಣ ತಜ್ಞರು ವಿಚಾರಿಸಬೇಕಾಗಿದೆ. ಕರ್ನಾಟಕದಲ್ಲಿ ಈಗಿರುವ ಎರಡು ವಿಶ್ವವಿದ್ಯಾಲಯಗಳನ್ನು ನಡೆಸು ವದು ನಮಗೆ ಸಾಧ್ಯವೇ ಎಂದು ಶಂಕಿಸುವವರೂ ಇದ್ದಾರೆ. ಆದರೆ ಕರ್ನಾಟಕದಂತಹ ವಿಶಾಲ ನಾಡಿಗೆ ಎರಡೇಕೆ ನಾಲ್ಕು ವಿಶ್ವವಿದ್ಯಾಲಯಗಳಾದರೂ ಸಾಲದೆಂದು ನಾನು ನಮ್ರತೆಯಿಂದ ತಿಳಿಸಬಯಸುವೆ. ನಮ್ಮ ಸೋದರರೂ ಈ ಕಾರ್ಯದಲ್ಲಿ ನೆರವಾಗಬೇಕು.

ಅದಕ್ಕೂ ಹೆಚ್ಚಾಗಿ ನಾವು ಜಾಗೃತರಾಗಿ ಮುಂದೆ ಬಂದು ಕಾರ್ಯಪ್ರವೃತ್ತರಾಗಬೇಕು. ಸತ್ಕಾರ್ಯಕ್ಕೆ ಸಹಾಯ ದೊರೆಯದೆ ಹೋಗುವುದಿಲ್ಲ. ಸಾಹಿತ್ಯ ಪರಿಷತ್ತುಗಳಂತಹ ಪ್ರಾತಿನಿಧಿಕ ಸಂಸ್ಥೆಗಳು ಇಂತಹ ಯೋಜನೆಗಳನ್ನು ಪುರಸ್ಕರಿಸಿ, ಅವಕ್ಕೆ ರಾಜ್ಯ ಸರಕಾರ, ಕೇಂದ್ರ ಸರಕಾರಗಳ ಬೆಂಬಲವನ್ನು ಪಡೆಯಲು ಪ್ರಯತ್ನಿಸಬೇಕು. ನಮ್ಮ ಮಹಿಳಾ ಸಂಸ್ಥೆಗಳು ಹೆಚ್ಚು ಕ್ರಿಯಾಶಾಲಿಯಾಗಿ ಮುನ್ನಡೆಯಬೇಕು. ಕನ್ನಡದ ಮಹಿಳಾ ವಿಶ್ವವಿದ್ಯಾಲಯವು ಬೇಗನೆ ಅಸ್ತಿತ್ವದಲ್ಲಿ ಬರುವಂತೆ ಯತ್ನಿಸಬೇಕು.

ಸ್ತ್ರೀಯರಿಗಾಗಿ ಪ್ರತ್ಯೇಕ ಶಿಕ್ಷಣ ಸಂಸ್ಥೆಗಳು ಬೇಕೆಂಬ, ಅಥವಾ ನಾನು ಸಹ ಶಿಕ್ಷಣದ ವಿರೋಧಕಳೆಂಬ ಅರ್ಥದಲ್ಲಿ ನಾನೀ ಮಾತನ್ನು ಹೇಳುತ್ತಿಲ್ಲ. ಆದರೂ ಸ್ತ್ರೀಯರ ಸಾಮಾನ್ಯ ಶಿಕ್ಷಣವು, ಅವರ ಅವಶ್ಯಕತೆಗಳಿಗೆ ಅನುಗುಣವಾಗಿ, ಪುರುಷರ ಶಿಕ್ಷಣಕ್ಕಿಂತ ತುಸು ಭಿನ್ನವಾಗುವುದು ಅನಿವಾರ್ಯವೆಂದು ನನ್ನ ಅಭಿಪ್ರಾಯ. ಉದಾಹರಣೆಗಾಗಿ ಲಲಿತಕಲೆಗಳಲ್ಲಿ ಸಾಮಾನ್ಯವಾಗಿ ಸ್ತ್ರೀಯರ ಒಲವು ಹೆಚ್ಚು. ಅದನ್ನು ಬೆಳೆಸಿಕೊಂಡು ಬರಲು ಅವರ ಶಿಕ್ಷಣ ಕ್ರಮದಲ್ಲಿ ಏರ್ಪಾಡಿರಬೇಕಾದುದು ಅಗತ್ಯ. ಗೃಹ ವಿಜ್ಞಾನದಂಥ ವಿಷಯಗಳು ಬಾಲಿಕೆಯರಿಗೆ ಮುಂದಿನ ಜೀವನದಲ್ಲಿ ಉಪಯುಕ್ತವಾಗುವಂತಹ ವಿಷಯಗಳಾಗಿವೆ. ಇತರ ವಿಜ್ಞಾನಗಳಿಗಿಂತ ಸಮಾಜ ವಿಜ್ಞಾನವು ಸ್ತ್ರೀಯರಿಗೆ ಹೆಚ್ಚು ಉಪಯುಕ್ತವಾಗಬಹುದು. ಅದರಲ್ಲಿಯ ಅವಳ ಜ್ಞಾನ ಸಮಾಜಕ್ಕೂ ಅವಳಿಗೂ ಲಾಭದಾಯಕವಾಗಬಹುದು. ಇದೆಲ್ಲವನ್ನೂ ಗಮನಿಸಬೇಕೆಂಬ ಉದ್ದೇಶದಿಂದಲೇ ನಾನೀ ವಿಷಯವನ್ನು ಎತ್ತಿದ್ದೇನೆ.

ಶಿಕ್ಷಣವಿಲ್ಲದೆ ಮಹಿಳೆಯರಲ್ಲಿ ವೈಚಾರಿಕ ಕ್ರಾಂತಿ ಸಂಭವಿಸುವದು ಸಾಧ್ಯವಿಲ್ಲ. ವರದಕ್ಷಿಣೆ, ದೇವದಾಸಿ ಪದ್ಧತಿ ಮುಂತಾದ ಸಾಮಾಜಿಕ ಅನ್ಯಾಯಗಳ ವಿರುದ್ಧ ಪ್ರತಿಭಟನೆಯ ಕೂಗು ಇತರೆಡೆಗಳಲ್ಲಿ ಎದ್ದಷ್ಟು ನಮ್ಮಲ್ಲಿ ಎದ್ದಿಲ್ಲ. ಈ ಅನಿಷ್ಟಗಳ ಕಲಂಕ ನಮ್ಮ ನಾಡಿನಲ್ಲಿ ಇಲ್ಲವೆ? ಇದ್ದೇ ಇದೆ. ಸಾಮಾಜಿಕ ಅನ್ಯಾಯಗಳ ವಿರುದ್ಧ ಇತ್ತೀಚಿನ ಹಲವಾರು ಸಾಹಿತಿಗಳು ಲೆಕ್ಕಣಿಕೆಯ ಅಸ್ತ್ರವನ್ನು ಸಮರ್ಥ ರೀತಿಯಲ್ಲಿ ಎತ್ತಿ ಸಾಹಿತ್ಯ ರಚನೆ ಮಾಡಿರುವುದು ನಿಜ. ಆದರೆ ನಮ್ಮಲ್ಲಿಯೇ ಮಹಿಳೆಯರಲ್ಲಿಯೇ, ಈ ವಿಷಯವಾಗಿ ಆಗಬೇಕಾದಷ್ಟು ಜಾಗೃತಿ ಆಗಿಲ್ಲವೆಂಬುದೇ ನನ್ನ ಕೊರಗು. ಈ ಪರಿಸ್ಥಿತಿ ಮಾಯವಾಗಬೇಕು, ನಮ್ಮ ಸ್ಥಾನಮಾನದ ಅರಿವು ನಮ್ಮಲ್ಲಿ ಉದಯಿಸಬೇಕು ಎಂಬುದೇ ನನ್ನ ಬಯಕೆ. ಕನ್ನಡ ನಾಡಿನ ಪ್ರತಿಯೊಬ್ಬ ಸ್ತ್ರೀಯೂ ಶಕ್ತಿ ಸ್ವರೂಪಿಣಿಯಾಗುವಂತಹ ವಿದ್ಯೆ ಅವಳಿಗೆ ದೊರೆಯಬೇಕೆಂಬುದೇ ನನ್ನ ಹಾರೈಕೆ. ವಿದ್ಯೆಯ ಅಧಿದೇವತೆ ಸರಸ್ವತಿಯು ಸ್ತ್ರೀಯೆ ಆಗಿದ್ದರೂ ನಾವು ಅವಳನ್ನು ಆದರಿಸಿ ಪೂಜಿಸಿಲ್ಲವೇನೋ? ಆ ಸರಸ್ವತಿಯ ಪೂಜೆ ನಡೆದ ಆ ಸಾಹಿತ್ಯ ಮಂದಿರದಲ್ಲಿ ಸೇರಿದ ನಮಗೆಲ್ಲರಿಗೆ ಆ ದೇವಿಯ ಅನುಗ್ರಹ ದೊರೆಯಲಿ ಎಂದು ಪ್ರಾರ್ಥಿಸಿಕೊಳ್ಳುತ್ತೇನೆ.

ನಾನು ಹೇಳಬೇಕೆಂದಿದ್ದುದನ್ನು ನನಗೆ ತಿಳಿದ ರೀತಿಯಲ್ಲಿ ನಿಮ್ಮೆಲ್ಲರ ಮುಂದೆ ಇಟ್ಟಾಯಿತು. ನಾನೇನೂ ಉಪದೇಶಕಳಲ್ಲ, ಬೋಧಕಳಲ್ಲ. ಕಲಿಯಬೇಕೆನ್ನುವಳೇ ಹೊರತು ಕಲಿಸಬೇಕೆನ್ನುವ ಹಮ್ಮಿನಿಂದ ನಾನಾವುದನ್ನೂ ನುಡಿದಿಲ್ಲ. ನನ್ನ ಹೃದಯದ ಮಿಡಿತವನ್ನೇ ನಿಮ್ಮೆಲ್ಲರ ಮುಂದೆ ಇಡುವ ಅಲ್ಪ ಪ್ರಯತ್ನ ಮಾಡಿದ್ದೇನೆ. ನಾನು ಸಾಹಿತಿಯಲ್ಲವಾದುದರಿಂದ ಭಾಷೆಯ ಬಂಧುರ ನನ್ನ ಭಾಷಣದಲ್ಲಿ ಬಂದಿರಲಿಕ್ಕಿಲ್ಲ. ಆದರೆ ನನ್ನ

ಮನದಲ್ಲಿ ಮೂಡಿದ ವಿಚಾರಗಳಿಗೆ ವ್ಯಕ್ತರೂಪ ಕೊಡಲು ಈ ಸಂದರ್ಭವನ್ನು ಉಪಯೋಗಿಸಿದ್ದೇನೆ; ನಮ್ಮ ಜನಪದದ ಜೀವನ ಸುಖಮಯವಾಗಬೇಕೆಂಬ ಕಳಕಳಿಯಿಂದ ನುಡಿದಿದ್ದೇನೆ.

ನುಡಿದರೆ ಮುತ್ತಿನ ಹಾರದಂತಿರಬೇಕು
ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು
...........**ನುಡಿಯೊಳಗೆ ನಡೆಯದಿದ್ದರೆ ಕೂಡಲ**
ಸಂಗಮದೇವನೆಂತೊಲಿವನಯ್ಯ

ಎಂದೆಚ್ಚರಿಸಿದ ಶರಣರ ವಚನವು ನಮ್ಮ ದಾರಿಯಲ್ಲಿ ಸದಾ ಕಾಲವೂ ಬೆಳಕು ತೋರಿಸುತ್ತಿರಲಿ; ಅದು ನಮ್ಮ ತಾರಕಮಂತ್ರವಾಗಿರಲಿ.

ಕೂಡಿ ಓದಿ ಕೂಡಾಡಿ ಕೂಡಿ ಅರಿಯೋಣ ಕೂಡಿ ಕೂಡಿ
ಕೂಡಿ ತಿಂದು ಕೂಡುಂಡು ಕುಡಿದು **ದುಡಿಯೋಣ ಕೂಡಿ ಕೂಡಿ**

ಎಂದು ಕವಿವರ್ಯ ಬೇಂದ್ರೆ ಅವರು ಅಚ್ಚಗನ್ನಡದಲ್ಲಿ ನುಡಿದ ಶ್ರುತಿವಾಣಿಯ ಪ್ರಾರ್ಥನೆಯೊಂದಿಗೆ ನನ್ನ ಭಾಷಣವನ್ನು ಮುಗಿಸುತ್ತೇನೆ; ಈ ವರೆಗೆ ಶಾಂತಚಿತ್ತದಿಂದ ಕಿವಿಗೊಟ್ಟ ನಿಮ್ಮೆಲ್ಲರಿಗೂ ಈ ಸಂದರ್ಭವನ್ನು ನನಗೆ ಒದಗಿಸಿಕೊಟ್ಟ ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯವರಿಗೂ ಇನ್ನೊಮ್ಮೆ ನನ್ನ ಹೃತ್ಪೂರ್ವಕವಾದ ಕೃತಜ್ಞತೆಗಳನ್ನು ಅರ್ಪಿಸುತ್ತೇನೆ.

---

## ಮಹಿಳಾ ಗೋಷ್ಠಿಯ ಅಧ್ಯಕ್ಷರಾದ
## ಶ್ರೀಮತಿ ಪುಟ್ಟಮ್ಮ ಪಾಟೀಲರವರ ಪರಿಚಯ

ರಾಯಚೂರಿನಲ್ಲಿ ನಡೆಯುವ ಕನ್ನಡ ಸಾಹಿತ್ಯ ಸಮ್ಮೇಳನದ ಮಹಿಳಾ ಗೋಷ್ಠಿಯ ಅಧ್ಯಕ್ಷರಾಗಿ ಆಯ್ಕೆ ಹೊಂದಿದ ಶ್ರೀಮತಿ ಪುಟ್ಟಮ್ಮ ಪಾಟೀಲರು ಮುಂಬೈ ಸರಕಾರದ ಅರಣ್ಯ ಹಾಗೂ ಒಕ್ಕಲುತನ ಖಾತೆಯ ಉಪಮಂತ್ರಿಗಳಾದ ಶ್ರೀ ಪಾಟೀಲ ಕಲ್ಲನಗೌಡರ ಧರ್ಮ ಪತ್ನಿಯವರು. ಶ್ರೀಮತಿ ಪುಟ್ಟಮ್ಮನವರ ಜನ್ಮ ಸ್ಥಳ ಧಾರವಾಡ ಜಿಲ್ಲೆಯ ಹಾವೇರಿ. ಶ್ರೀ ಹೆರೂರ ಮಹಾಲಿಂಗಪ್ಪನವರ ಮಗಳಾದ ಇವರು ಹುಟ್ಟಿದುದು 1917ರಲ್ಲಿ. ವರ್ತಕ ಮನೆತನದಲ್ಲಿ ಹುಟ್ಟಿದ ಪುಟ್ಟಮ್ಮನವರು ಮನೆಯಲ್ಲಿಯೇ ಹೆಚ್ಚಾಗಿ ಶಿಕ್ಷಣ ಪಡೆದರು. ತಾಯಿನುಡಿ ಕನ್ನಡವನ್ನಷ್ಟೇ ಬಳಸಿಕೊಂಡಿರುವದಲ್ಲದೆ, ನೆರೆ ಭಾಷೆಯಾದ ಮರಾಠಿ, ರಾಷ್ಟ್ರಭಾಷೆಯಾದ ಹಿಂದಿ ಹಾಗೂ ವ್ಯವಹಾರಕ್ಕೆ ಬೇಕಾಗುವಷ್ಟು ಇಂಗ್ಲಿಷನ್ನು ತಿಳಿದರವರಾಗಿದ್ದಾರೆ. ಜೀವನವನ್ನು ಸಾಗಿಸಲು ಬೇಕಾಗುವ ಶಿಕ್ಷಣ, ಸಾಮಾಜಿಕ ಕಾರ್ಯ ಸಾಗಿಸಲು ಬೇಕಾಗುವ ಜ್ಞಾನ ಇವೆರಡೂ ಪುಟ್ಟಮ್ಮನವರಲ್ಲಿ ಸಮ್ಮಿಲಿತವಾಗಿವೆ. ಗೃಹಕೃತ್ಯದ ಹೊಣೆಯ ಜೊತೆಗೆ ಮನೆಯಲ್ಲಿಯೇ ಜ್ಞಾನ ಭಂಡಾರ ತುಂಬಿಕೊಳ್ಳುತ್ತಿರುವ

ಸಾಧನಾ ಜೀವಿ. ಪುಟ್ಟಮ್ಮನವರು ಸಾಹಿತ್ಯದಲ್ಲಿ ಹಾಗು ಇತರ ಲಲಿತ ಕಲೆಗಳಾದ ನೃತ್ಯ, ಗಾಯನಗಳಲ್ಲಿ ಅವರದು ತುಂಬಾ ಆಸಕ್ತಿ. ಓದುವ ಪ್ರವೃತ್ತಿ ಮೊದಲಿನಿಂದಲೂ ಪುಟ್ಟಮ್ಮನವರಲ್ಲಿ ಬೆಳೆದು ಬಂದಿದೆ.

1941ರಲ್ಲಿ ಪುಟ್ಟಮ್ಮನವರ ಮದುವೆಯಾಯಿತು. ರಾಜಕೀಯ ಜೀವನ ಒಂದು ಮುಳ್ಳುಹಾಸಿಗೆ. ಅದರಲ್ಲಿಯೂ ಆಗಿನ ಕಾಲದಲ್ಲಿ ಚಳವಳಿ ತೀವ್ರಗತಿಯಿಂದ ಸಾಗುತ್ತಿತ್ತು. 1942ರ ಚಳವಳಿಯ ಕಾಲದಲ್ಲಿ ಅವರು ಭೂಗತ ಕಾರ್ಯಕರ್ತರಿಗೆ ಮಾಡಿದ ಸೇವೆಯನ್ನು ಅದನ್ನು 'ಬಲ್ಲವರೇ' ಬಲ್ಲರು. ಹಗಲು ರಾತ್ರಿಯೆನ್ನದೆ ಅವರು ಶ್ರದ್ಧೆಯಿಂದ ಆ ಸ್ವಾತಂತ್ರ್ಯ ಚಳುವಳಿಯ ಧೀರರಿಗೆ ನಿಜವಾದ 'ತಾಯಿ' ಸೇವೆಯನ್ನು ಸಲ್ಲಿಸಿದರು. ರಾಷ್ಟ್ರೀಯ ಆಂದೋಲನೆಯ ಮಹಾನ್ ಕಾರ್ಯಕ್ಕೆ ಇದು ಪುಟ್ಟಮ್ಮನವರ ಅಳಿಲ ಸೇವೆ. ಪತಿಯೊಡನೆ ಸಾರ್ವಜನಿಕ ರಂಗದಲ್ಲಿ ಕೆಲಸ ಮಾಡುತ್ತಿದ್ದರೂ ಕಾಣಿಸಿಕೊಳ್ಳದೆ ಕಾರ್ಯವನ್ನು ಮಾಡುವ 'ಕಾರ್ಯಶಕ್ತಿ' ಪುಟ್ಟಮ್ಮನವರಿಗೆ ಸಾಧಿಸಿದೆ. ಶ್ರೀ ಕಲ್ಲನಗೌಡರ ಅನೇಕ ಸಾರ್ವಜನಿಕ ಕಾರ್ಯಗಳಿಗೆ ಪುಟ್ಟಮ್ಮನವರ ಸಹಾಯ ಸಹಕಾರವಿದೆ.

1946ರಿಂದ ಮುಂಬಯಿಗೆ ಬಂದಾಗಿನಿಂದ ಪುಟ್ಟಮ್ಮನವರ ಕಾರ್ಯರಂಗ ವಿಶಾಲವಾಗಿದೆ. ಕನ್ನಡ ಸೇವೆ–ಕನ್ನಡಿಗರ ಹಿತರಕ್ಷಣೆ ಇದೀಗ ಇವರ ಮೆಚ್ಚಿನ ರಂಗವಾಗಿದೆ, ಅದರಲ್ಲೂ ಮಹಿಳೆಯರಲ್ಲಿ ನಿಜವಾದ ಶಿಕ್ಷಣ ಹೆಚ್ಚಬೇಕು ಎಂದು ಕಳಕಳಿಯಿಂದ ದುಡಿಯುತ್ತಿರುವವರಲ್ಲಿ ಅವರೊಬ್ಬರಾಗಿದ್ದಾರೆ. ಮುಂಬಯಿಯ ಕರ್ನಾಟಕ ಸಂಘದ ಮಹಿಳಾ ಶಾಖೆಯ ಉಪಾಧ್ಯಕ್ಷರಾಗಿ ಪುಟ್ಟಮ್ಮ ಮಹಿಳೆಯರ ಉನ್ನತಿಗಾಗಿ ದುಡಿಯುತ್ತಿದ್ದಾರೆ. ಅಲ್ಲದೆ ಮುಂಬೈ ಕರ್ನಾಟಕ ಸಂಘದ ಕಾರ್ಯಕಾರಿ ಸಮಿತಿಯ ಸದಸ್ಯರೂ ಆಗಿರುತ್ತಾರೆ. ಮುಂಬೈಯಲ್ಲಿ ಕರ್ನಾಟಕ ಸಂಘಕ್ಕೆ ತನ್ನದೇ ಆದ ಕಟ್ಟಡ ಬೇಕು ಎಂದು ಮುಂದಾಗಿ ಅದರಲ್ಲಿಯೂ ಹಣ ಕೂಡಿಸುವಲ್ಲಿ ವಿಶೇಷ ಆಸ್ಥೆ ವಹಿಸಿ ಪುಟ್ಟಮ್ಮನವರು ಮಾಡಿದ ಕೆಲಸವನ್ನು ಮುಂಬಯಿ ಕನ್ನಡಿಗರು ಮರೆಯಲಾರರು. ಮುಂಬಯಿ ಸರಕಾರದವರು ಏರ್ಪಡಿಸಿದ ನಾಟ್ಯ ಮಹೋತ್ಸವದ ಕನ್ನಡ ನಾಟಕಗಳ ಪರೀಕ್ಷಕರಾಗಿ ಪುಟ್ಟಮ್ಮನವರು ಕಾರ್ಯ ಮಾಡಿದರು. ಮುಂಬಯಿಯಲ್ಲಿ ನಡೆದಿರುವ ಅನೇಕ ರಾತ್ರಿ ಶಾಲೆಗಳ ಉನ್ನತಿ ಮತ್ತು ಇತರ ಸಾಂಸ್ಕೃತಿಕ ಚಟುವಟಿಕೆಗಳಲ್ಲಿ, ವಿಶೇಷವಾಗಿ ದಕ್ಷಿಣ ಕನ್ನಡ ಜಿಲ್ಲೆಯ ಬಾಂಧವರು ನಡೆಸಿರುವ ಎಲ್ಲ ಚಟುವಟಿಕೆಗಳಲ್ಲಿ ಅವರು ಮನೆಯವರಂತೆ ಭಾಗವಹಿಸುತ್ತಾರೆ.

---



# 38ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ರಾಯಚೂರು




## ಮಹಿಳಾ ಗೋಷ್ಠಿಯಲ್ಲಿ
## ಶ್ರೀಮತಿ ಎಸ್. ವಿನೋದಾಬಾಯಿ ಅವರ ಭಾಷಣ

26-12-1955

### ಹೊನ್ನಮ್ಮನ ಕಾವ್ಯ — ಹದಿಬದೆಯ ಧರ್ಮ.

ಸಮ್ಮೇಳನಾಧ್ಯಕ್ಷರೇ, ಮಹಿಳಾ ಗೋಷ್ಠಿಯ ಅಧ್ಯಕ್ಷರಾದ ಶ್ರೀಮತಿ ಪುಟ್ಟಮ್ಮನವರೆ,
ಕನ್ನಡಾಭಿಮಾನಿಗಳಾದ ಹಿರಿಯರೆ, ಅಣ್ಣ ತಮ್ಮಂದಿರೆ, ಅಕ್ಕ ತಂಗಿಯರೆ,

ನನಗಿಂತ ಹೆಚ್ಚಿನ ದಕ್ಷತೆಯುಳ್ಳವರು ಅನೇಕರಿದ್ದರೂ ಈ ಮಹಿಳಾ ಗೋಷ್ಠಿಯ ಭಾಷಣಕಾರಳನ್ನಾಗಿ ನನ್ನನ್ನು ಆರಿಸಿರುವುದು ಹಿರಿಯರ ಔದಾರ್ಯದ ಫಲವೆಂದು ನಾನು ಭಾವಿಸುತ್ತೇನೆ. ಈ ಕೆಲಸಕ್ಕೆ ಅನರ್ಹಳಾದ ನನ್ನಲ್ಲಿ ಆ ಅರ್ಹತೆಯನ್ನು ತುಂಬಿ ಉತ್ತೇಜನವಿತ್ತ ಹಿರಿಯರಿಗೆ ನಾನು ಕೃತಜ್ಞಳಾಗಿದ್ದೇನೆ. ಪ್ರಥಮತಃ ಕನ್ನಡ ನಾಡಿನ ನಿಮ್ಮೆಲ್ಲರಿಗೂ ರಾಯಚೂರಿನ ಈ ಸಮ್ಮೇಳನದ ಸ್ವಾಗತ ಸಮಿತಿಯವರಿಗೂ ಕನ್ನಡವನ್ನೇ ನನ್ನ ಬಾಳಿನ ಕೈದೀವಿಗೆಯನ್ನಾಗಿ ಮಾಡಿದ ನನ್ನ ಗುರು ಹಿರಿಯರಿಗೂ ವಂದಿಸುವುದು ನನ್ನ ಕರ್ತವ್ಯ. ನೀವೆಲ್ಲ ಧೈರ್ಯಗೊಟ್ಟು ಕರಿಸಿದ ಒಬ್ಬ ಸೋದರಿಯ ಮಾತುಗಳೆಂದು ಭಾವಿಸಿ, ಏನಾದರೂ ತಪ್ಪುಗಳಾದರೂ ಸಹನೆಯಿಂದ ಕೇಳುವಿರಾಗಿ ನಂಬಿದ್ದೇನೆ.

ನನಗೆ ಕೊಟ್ಟಿರುವ ಅಲ್ಪಾವಕಾಶದಲ್ಲಿ ಹೊನ್ನಮ್ಮನ ಕಾವ್ಯದ — ಹದಿಬದೆಯ ಧರ್ಮದ — ಒಂದು ನೋಟವನ್ನು ಮಾತ್ರ ನಾನು ಕೊಡಬಲ್ಲೆ.

ಈಗಲೇ ಅಲ್ಲ ಹಿಂದೆಯೂ, ನಮ್ಮ ದೇಶದಲ್ಲೇ ಅಲ್ಲ ಎಲ್ಲಿಯೂ ಹೆಂಗಸರು ಬರೆದಿರುವುದು, ಗ್ರಂಥರಚನೆ ಮಾಡಿರುವುದು ಕಡಮೆ. ಬಹಳ ಕಡಮೆ ಎನ್ನಬೇಕು. ನಮ್ಮ ದೇಶದಲ್ಲಿ ಹಾಡುಗಳನ್ನೂ ಲಾವಣಿಗಳನ್ನೂ ಕಟ್ಟಿರುವ ಅಜ್ಞಾತ ಕವಿಯಿತ್ರಿಯರು ಹಲವರುಂಟು. ಆದರೆ ಇಲ್ಲಿ ಹೇಳುತ್ತಿರುವುದು ವಿದ್ವದ್ ಗೋಷ್ಠಿಯಲ್ಲಿ ಪರಿಗಣಿತರಾದ ಕವಯಿತ್ರಿಯರನ್ನು. (ಕವಿಯಿತ್ರಿ ಎಂಬ ಪದ 'ಸ್ತ್ರೀ ಕವಿ' ಎಂಬ ಅರ್ಥದಲ್ಲಿ ಸಂಸ್ಕೃತದಲ್ಲಿ ಬಳಕೆಯಲ್ಲಿ ಇಲ್ಲದಿದ್ದರೂ ಅದನ್ನು ಸೌಕರ್ಯಕ್ಕಾಗಿ ಇಲ್ಲಿ ಬಳಸಿದೆ.) ಗಂಡಸಿನ ಬರವಣಿಗೆಯ ಮಾದರಿಯನ್ನು ಅನುಸರಿಸಿ, ಎಲ್ಲ ವಿಷಯಗಳಲ್ಲಿಯೂ ಅವನ ಅಭಿಪ್ರಾಯವನ್ನೇ ಒಪ್ಪಿ ಒಕ್ಕಣಿಸುವ ಗ್ರಂಥಗಳೇ ಹೆಚ್ಚು, ಸ್ತ್ರೀ ರಚಿತ ಗ್ರಂಥಗಳಲ್ಲಿ ಕೂಡ. ಹೀಗಾಗಿ ಸ್ವತಂತ್ರ ವಿಚಾರದಿಂದ, ಸ್ತ್ರೀಯರ ವಿಶಿಷ್ಟ ದೃಷ್ಟಿಯಿಂದ, ಕೃತಿರಚನೆ ಮಾಡಿರುವವರನ್ನು ಒಕ್ಕೈ ಬೆರಳು ಮಡಿಚಿ ಎಣಿಸಬಹುದು. ಇಂಥ ಸಂದರ್ಭದಲ್ಲಿ ಈ ಕೃತಿಗಳನ್ನು ಶುದ್ಧ ವಿಮರ್ಶನ ದೃಷ್ಟಿಯಿಂದ ನೋಡಿ ಬೆಲೆಕಟ್ಟದೆ, "ಅಯ್ಯೋ ಪಾಪ" ಎಂಬ ಅನುಕಂಪೆಯ ದೃಷ್ಟಿ

ಯಿಂದ ನೋಡಿ ಆ ಕೃತಿಗಳಲ್ಲಿರುವ ಒಳ ಜಿಲೆಯನ್ನು ನಿಜವಾಗಿ ಅರಿಯದೇ ಹೋಗುವುದೂ ಸಾಧ್ಯ. ಇಲ್ಲಿ ನಾನು ಸಂಚಿ ಹೊನ್ನಮನ "ಹದಿಬದೆಯ ಧರ್ಮ" ಎಂಬ ಗ್ರಂಥವನ್ನು ಕುರಿತು ಕೊಂಚ ನಿರ್ದಾಕ್ಷಿಣ್ಯ ದೃಷ್ಟಿಯಿಂದಲೇ ವಿಚಾರಕ್ಕೆ ತೊಡಗುತ್ತೇನೆ. ಈ ನೋಟದಿಂದ ನೋಡಿ, ರಾಶಿಯನ್ನು ತೂರಿದಾಗ ಜೊಳ್ಳು ಪೊಳ್ಳುಗಳು ಹಾರಿ, ಕಸಕಡ್ಡಿಗಳು ಕಳೆದರೂ ಕೊನೆಯಲ್ಲಿ ಸಾಕಷ್ಟು ಗಟ್ಟಿಕಾಳು ಉಳಿಯುತ್ತದೆ ಎಂಬ ನೆಚ್ಚಿಕೆ ನನಗಿದೆ.

ನಮ್ಮವರು ಕವಿ, ಕಾವ್ಯ ಎಂಬ ಪದಗಳನ್ನು ಹಿಡಿತವಿಲ್ಲದೆ ಬಳಸುತ್ತ ಬಂದಿದ್ದಾರೆ. "ಕಾವ್ಯಾಲಾಪಾಂಶ್ಚ ವರ್ಜಯೇತ್" ಎಂದರೆ ಕಾವ್ಯ ಓದುವುದು ಸಲ್ಲದು ಎಂದು ಒಂದಾನೊಂದು ಕಾಲದಲ್ಲಿ ಕೆಲವು ಹಿರಿಯರು ಹೇಳಿದರು. ಸೂಪಶಾಸ್ತ್ರ, ಅಶ್ವಶಾಸ್ತ್ರ, ಅಕ್ಷಶಾಸ್ತ್ರ, ಗಣಿತಶಾಸ್ತ್ರ, ನೀತಿಶಾಸ್ತ್ರಗಳನ್ನು ಬರೆದವರನ್ನೂ ಕವಿಗಳು ಎಂದು ಕರೆಯುವುದೂ, ಕಾವ್ಯ ಎಂದರೆ ಕವಿಯ ಕರ್ಮ ಎಂದು ಅರ್ಥಯಿಸುವುದೂ - ನಮ್ಮಲ್ಲಿ ಪ್ರಾಚೀನ ಕಾಲದಿಂದ ಬಂದಿದೆ. ಎಂದರೆ, ಒಂದು ದೃಷ್ಟಿಯಲ್ಲಿ ಯಾರಾದರೂ ಏನೇ ಬರೆಯಲಿ ಅವರು ಕವಿ, ಅವರು ಬರೆದದ್ದು ಏನೇ ಆಗಿರಲಿ ಅದು ಕಾವ್ಯ, ಹೀಗಾದರೆ ಸಮಸ್ತ ಜ್ಞಾನವೂ ಕಾವ್ಯ ವಿಷಯ, ಸರ್ವಲೇಖವೂ ಕಾವ್ಯ. 'ಕಾವ್ಯ ಓದುವುದು ಸಲ್ಲದು' ಎಂಬ ನುಡಿಗೆ ಹಾಗಾದರೆ ಅರ್ಥ ಮನುಷ್ಯ ಜ್ಞಾನಾರ್ಜನೆ ಮಾಡಕೂಡದು ಎಂದೊ? ನಾವು ಕವಿ, ಕಾವ್ಯ ಎಂಬ ಮಾತುಗಳನ್ನು ಬಹಳ ಸಡಿಲವಾಗಿ ಉಪಯೋಗಿಸುತ್ತಿದ್ದೇವೆ. ಅದರಲ್ಲಿಯೂ ಛಂದೋಬದ್ಧವಾದದ್ದೆಲ್ಲಾ ಕಾವ್ಯ ಎಂಬ ಭ್ರಮೆ ಈಗಲೂ ನಮ್ಮಲ್ಲಿ ಕೆಲವರಿಗೆ ಇರುವಂತೆ, ಹಿಂದೆಯೂ ಹಲವರಿಗೆ ಇತ್ತು. ಈ ಭ್ರಮೆಯೇ ಹಿಂದೆ ಬರೆದದ್ದೆಲ್ಲಾ, ಅದರಲ್ಲಿಯೂ ಛಂದಸ್ಸಿನಲ್ಲಿ ಹೆಣೆದದ್ದೆಲ್ಲಾ ಕಾವ್ಯ ಎಂದು ಸಾಮಾನ್ಯರು ವ್ಯವಹರಿಸುತ್ತ ಬಂದಿರುವುದಕ್ಕೆ ಕಾರಣ. ಬರವಣಿಗೆಯ ಸೌಕರ್ಯ, ಮುದ್ರಣ ಸೌಕರ್ಯ ಇಲ್ಲದ ಹಿಂದಿನ ಕಾಲದಲ್ಲಿ ಮನುಷ್ಯನಿಗೆ ತನ್ನ ವ್ಯವಹಾರ, ಜ್ಞಾನಾನುಭವಗಳನ್ನು ತಲೆಮಾರಿಂದ ತಲೆಮಾರಿಗೆ ಪರಂಪರೆಯಾಗಿ ಸಾಗಿಸುವುದಕ್ಕೆ ಇದ್ದದ್ದು ಒಂದೇ ಸಾಧನ: ಅದು ಬಾಯಿ ಮಾತು. ಈ ಬಾಯಿ ಮಾತು ಬಾಳಬೇಕಾದರೆ ನೆನಪು ಬೇಕು. ಸುಲಭವಾಗಿ ನೆನಪಿಟ್ಟು ಕೊಳ್ಳುವುದಕ್ಕೆ ಛಂದಸ್ಸು ಬಹಳ ಸಹಾಯ ಮಾಡುತ್ತದೆ. ಹೀಗಾಗಿ, ಸರಳ ಸುಲಭ ಶೈಲಿಯ ಗದ್ಯದಲ್ಲಿ ಸ್ವಾಭಾವಿಕವಾಗಿಯೂ ಅಚ್ಚುಕಟ್ಟಾಗಿಯೂ ಬರೆದು ತಿಳಿಸಬಹುದಾದ ಎಷ್ಟೋ ವಿಷಯಗಳನ್ನು ನಮ್ಮವರು ಛಂದಸ್ಸಿನಲ್ಲಿ ಬರೆದಿಟ್ಟರು. ಈ ಗುಟ್ಟನ್ನು ಅರಿಯದೆ, ನಾವು ಛಂದಸ್ಸಿನಲ್ಲಿ ಬರೆದದ್ದನ್ನೆಲ್ಲಾ ಕಾವ್ಯ ಎಂದೂ, ಛಂದಸ್ಸು ಹೆಣೆದವರನ್ನೆಲ್ಲಾ ಕವಿಗಳು ಎಂದೂ ವ್ಯವಹರಿಸುತ್ತ ಬಂದು ಅಪಚಾರ ಮಾಡುತ್ತಿದ್ದೇವೆ. ಈ ಅಪಚಾರ ಎರಡು ತೆರನಾದ್ದು: ಕಾವ್ಯೇತರ ಕೃತಿಗಳನ್ನು ಕಾವ್ಯ ಪಂಕ್ತಿಯಲ್ಲಿ ಸೇರಿಸಿ, ಕಾವ್ಯ ಎಂಬ ಪದದ ಸಹಜಾರ್ಥವನ್ನು ಹಿಗ್ಗಲಿಸಿ ಜಾಳು ಮಾಡುವುದು ಒಂದು; ಎರಡನೆಯದು, ಬೇರೆ ರೀತಿಯಲ್ಲಿ ಎಷ್ಟೋ ಅಚ್ಚುಕಟ್ಟಾದ, ಉಪಯುಕ್ತವಾದ ಬರವಣಿಗೆಯಾದರೂ, ಅದನ್ನು ಕಾವ್ಯದೃಷ್ಟಿಯಿಂದ ನೋಡಿ, ಅದು ನೀರಸ, ಸಪ್ಪೆ, ಶುಷ್ಕ ಎಂದು ಮೂದಲಿಸುವುದು. ಈ ಎರಡೂ ಸಲ್ಲದು. ಈ ಗೊಂದಲದಿಂದ ಪಾರಾಗಲು ನಮ್ಮಲ್ಲಿ ಕೆಲವರು "ಸಾಹಿತ್ಯ" ಎಂಬ ಮಾತನ್ನು ಬಳಕೆಗೆ ತಂದು, ಸಾಹಿತ್ಯಕ್ಕೂ ಕಾವ್ಯಕ್ಕೂ ವ್ಯಾತ್ಯಾಸ ಮಾಡಿದರು. ಅಚ್ಚುಕಟ್ಟಾಗಿ ಬರೆದದ್ದು ಸಾಹಿತ್ಯ; ರಸವತ್ತಾಗಿ ಬರೆದದ್ದು ಕಾವ್ಯ. ಛಂದಸ್ಸಿನಲ್ಲಿ

ಬರೆದದ್ದು ಪದ್ಯ, ಛಂದಸ್ಸಿಲ್ಲದ್ದು ಗದ್ಯ, ಕಾವ್ಯವಲ್ಲದ ಪದ್ಯವಿರಬಹುದು (ಲಕ್ಸ್‌ಸೋಪು, ಡಾಲ್ಡವನಸ್ಪತಿ, ಅಂಬಾಳರ ನಶ್ಯ ಇವುಗಳ ಮಾಟಾಟದ ಜಾಹೀರಾತು ಪದ್ಯಗಳನ್ನು ನೋಡಬಹುದು). ಛಂದಸ್ಸಿಲ್ಲದ ಕಾವ್ಯವಿರಬಹುದು (ಶಿವಶರಣರ ವಚನಗಳು). ಸಾಹಿತ್ಯವೂ ಅಲ್ಲದ, ಕಾವ್ಯವೂ ಅಲ್ಲದ ಬರವಣಿಗೆಯಂತೂ ಬೇಕಾದಷ್ಟಿದೆ. ಈ ಅಂಶಗಳನ್ನೆಲ್ಲಾ ಚೆನ್ನಾಗಿ ಗಮನಿಸಿ, ನಮ್ಮ ಕೃತಿಗಳನ್ನು ಪುನರ್ ವಿಮರ್ಶಿಸಿ ನಾವು ಅದಕ್ಕೆ ಈಗ ಬೆಲೆ ಕಟ್ಟಬೇಕಾಗಿದೆ.

ನಾನು ಮಾತಾಡಬೇಕಾಗಿರುವ "ಹದಿಬದೆಯ ಧರ್ಮ"ಕ್ಕೂ ಈ ದೀರ್ಘ ಪೀಠಿಕೆಗೂ ಏನು ಸಂಬಂಧ ಎಂದು ಕೇಳಬಹುದು. ಸಂಬಂಧ ಇಷ್ಟೆ: "ಹದಿಬದೆಯ ಧರ್ಮ" ಎಂಬ ಕೃತಿಯನ್ನು ನಾವು ಯಾವ ದೃಷ್ಟಿಯಿಂದ ನೋಡಬೇಕು? ಕಾವ್ಯದೃಷ್ಟಿಯಿಂದಲೆ? ಸಾಹಿತ್ಯದೃಷ್ಟಿಯಿಂದಲೆ? ನೊಡಬೇಕಾದ ದೃಷ್ಟಿಗಿಂತ ಬೇರೆ ದೃಷ್ಟಿಯಲ್ಲಿ ಅದನ್ನು ನಾವು ನೋಡಿ ಅದರ ವಿಮರ್ಶೆಗೆ ತೊಡಗಿದರೆ, ಮೊದಲೆ ಹೇಳಿದಂತೆ ನಾವು ನಮಗೂ ಅದಕ್ಕೂ ಅಪಚಾರ ಮಾಡುತ್ತೇವೆ. "ಹದಿಬದೆಯ ಧರ್ಮ" ಹೇಳ ಹೊರಟಿರುವುದು ಕಾವ್ಯವನ್ನಲ್ಲ, ವ್ಯವಹಾರನೀತಿಯನ್ನು. ಇಂದು ಅಂಥದೇ ಒಂದು ಕೃತಿಗೆ ಆವಶ್ಯಕತೆ ಇದ್ದರೆ ಅದು ಗದ್ಯದಲ್ಲಿ; ಪದ್ಯದಲ್ಲಲ್ಲ. ಅಂಥ ಕೃತಿಯನ್ನು ಬರೆಯುವುದಕ್ಕೆ ಬೇಕಾದ್ದು ಪ್ರತಿಭೆಯಲ್ಲ, ರಸಿಕತೆಯಲ್ಲ; ವ್ಯವಹಾರಜ್ಞಾನ, ಲೋಕಾನುಭವ. ಅದು ಛಂದಸ್ಸಿನಲ್ಲಿರುವುದು ಸ್ವಾಭಾವಿಕವಲ್ಲ, ಅನಿವಾರ್ಯವಲ್ಲ; ಕೇವಲ ಆಕಸ್ಮಿಕ. ಹೀಗೆಂದು ಹೇಳಿದ ಮಾತ್ರಕ್ಕೆ ಅದನ್ನು ತೆಗಳಿತೆಂದು ಯಾರೂ ಎಣಿಸಬಾರದು. ಈ ನೋಟದಿಂದ ನೋಡಿದರೇನೇ ಅದಕ್ಕೆ ತಕ್ಕ ವಿಶಿಷ್ಟ ಗೌರವ ಕೊಟ್ಟಂತೆ ಎಂದು ನನ್ನ ಭಾವನೆ. ಕಾವ್ಯ ಎಂದು ಅದನ್ನು ನೋಡವುದರಿಂದ ಕಂಡುಬರಬಹುದಾದ ಕುಂದುಕೊರತೆಗಳು ಈ ನೋಟದಿಂದ ಮಾಯವಾಗುತ್ತವೆ.

ಪುರಾತನ ಕೃತಿಗಳ ವಿಮರ್ಶೆಯಲ್ಲಿ ಇನ್ನೊಂದು ಅಂಶವನ್ನು ನೆನಪಿಡಬೇಕು. ಅದರಲ್ಲಿಯೂ ಆ ಕೃತಿ ಧರ್ಮಕ್ಕೆ ಸಂಬಂಧಪಟ್ಟಿದ್ದರೆ ಈ ನೆನಪಿನ ಎಚ್ಚರಿಕೆ ಇನ್ನೂ ಹೆಚ್ಚು ಆವಶ್ಯಕ. ಯಾವ ಕಾಲದ ಯಾವ ದೇಶದ ಯಾವುದೇ ಧರ್ಮವಿರಲಿ, ಅದರಲ್ಲಿ ಎರಡು ಅಂಶಗಳು ಅಥವಾ ಲಕ್ಷಣಗಳು ಕಾಣಬರುತ್ತವೆ: ಒಂದು ಸಾರ್ವಕಾಲಿಕವೂ ಸಾರ್ವದೇಶೀಯವೂ ಆದ ಶಾಶ್ವತಾಂಶ; ಇನ್ನೊಂದು, ತಾತ್ಕಾಲಿಕವೂ। ಏಕದೇಶೀಯವೂ ಆದ ಕಾಲ ಕಾಲಕ್ಕೆ, ದೇಶ ದೇಶಕ್ಕೆ ಬದಲಾಯಿಸುತ್ತ ಹೋಗುವ ಅಂಶ. ಯಾವುದೇ ಸನಾತನ ನೂತನ ಧರ್ಮಗಳಿರಲಿ, ಈ ಎರಡೂ ಅಂಶಗಳು ಒಂದಲ್ಲ ಒಂದು ರೀತಿಯಲ್ಲಿ ಒಂದಲ್ಲ ಒಂದು ಪ್ರಮಾಣದಲ್ಲಿ ಬೆರೆದೇ ಇರಬೇಕು. ಇಂಥ ಧರ್ಮ ವಿಚಾರವನ್ನು ಕುರಿತ ಕೃತಿಗಳ ವಿಮರ್ಶೆಯಲ್ಲಿ ನಮ್ಮ ಗಮನ ಎರಡೂ ಅಂಶಗಳ ಕಡೆಗೆ ಹರಿಯಬೇಕಾದ್ದಾದರೂ ತಾರತಮ್ಯ ಜ್ಞಾನದಿಂದ ಏಕದೇಶೀಯ ತಾತ್ಕಾಲಿಕಾಂಶಗಳಿಗಿಂತ ಸಾರ್ವತ್ರಿಕ ಶಾಶ್ವತಾಂಶಗಳ ಕಡೆಗೆ ಹೆಚ್ಚು ಹರಿಯಬೇಕು.

ಈ ದೃಷ್ಟಿಯಿಂದ "ಹದಿಬದೆಯ ಧರ್ಮ" ಗ್ರಂಥದ ಪರಿಚಯಕ್ಕೆ ತೊಡಗೋಣ. ಈ ಗ್ರಂಥದಲ್ಲಿ ನಮಗೆ ಕಂಡುಬರುವುದು ಕವಿಯ ಸ್ಫೂರ್ತಿ ಪ್ರತಿಭೆ ರಸಿಕತೆಗಳಿಗಿಂತ ಅನುಭವಿಯ ವ್ಯವಹಾರಜ್ಞಾನ ಲೋಕನೀತಿ ಪಾಂಡಿತ್ಯಗಳು. ಇದರಲ್ಲಿ ಅಡಕವಾಗಿರುವ ಅಂಶಗಳನ್ನೇ ಕೊಂಚ ಹೆಚ್ಚು ಕಡಮೆ ಮಾಡಿ ಹೊಸ ಮಾದರಿಯಲ್ಲಿ ಗದ್ಯದಲ್ಲಿ ಬರೆದರೆ

ಅದು ಗೃಹಕಾರ್ಯದ ಬಗ್ಗೆ ಇಂದೂ ಒಂದು ಒಳ್ಳೆಯ ಪಠ್ಯ ಪುಸ್ತಕ, ಕೈಪಿಡಿ ಆದೀತು. ಇಷ್ಟು ಹೇಳಿದರೆ ಈ ಗ್ರಂಥದಲ್ಲಿ ಏನಿದೆ ಏನಿಲ್ಲ ಎಂದು ಹೇಳಿದ ಹಾಗಾಯಿತು. ಹೊನ್ನಮ್ಮ ಹದಿನೇಳನೆಯ ಶತಮಾನದವಳು, ಅರಮನೆಯ ಊಳಿಗದಲ್ಲಿ ಪಂಡಿತರ ಸಾನ್ನಿಧ್ಯದಲ್ಲಿ ಬಾಳಿ ಬೆಳೆದವಳು. ಹದಿನೇಳನೆಯ ಶತಮಾನ ಮೈಸೂರಲ್ಲಿ ಕನ್ನಡ ಸಾಹಿತ್ಯದ ಪುನರುಜ್ಜೀವನ ಕಾಲವೆನ್ನಬಹುದು. ಈಕೆಗೆ ಆಶ್ರಯದಾತರಾದ ಚಿಕದೇವ ರಾಜ ಒಡೆಯರವರು ಸ್ವತಃ ಕವಿಗಳು, ರಸಿಕರು. ಅವರ ಆಸ್ಥಾನದಲ್ಲಿ ಆಶ್ರಯದಲ್ಲಿ ಇದ್ದ ತಿರುಮಲಾರ್ಯ, ಚಿಕುಪಾಧ್ಯಾಯ, ಸಿಂಗರಾರ್ಯರು ಪಂಡಿತರು. ಈ ಪುನರುಜ್ಜೀವನ ಪ್ರಭಾವ, ಈ ಅರಮನೆಯ ಅಡಕ ಪ್ರಭಾವಗಳು, ಈ ವಿದ್ವದ್ ವಾತಾವರಣ— ಇವೆಲ್ಲದರ ಪರಿಣಾಮವನ್ನು ನಾವು ಹೊನ್ನಮ್ಮನ ಹದಿಬದೆಯ ಧರ್ಮದಲ್ಲಿ ಕಾಣುತ್ತೇವೆ. ಈ ಕೃತಿಯಲ್ಲಿ ಹೆಣ್ಣುಕರುಳಿನ ಮಿಡಿತವೂ ಇದೆ, ಕಲಿಕೆಯೋದಿನ ನುಡಿತವೂ ಇದೆ. ಹೆಣ್ಣುಹೃದಯವನ್ನು ಅರಿತ ಹೆಣ್ಣುಬುದ್ಧಿಯ ಅನುಭವವೂ ಇದೆ, ಗಂಡು ತನ್ನ ಸುಖಕ್ಕಾಗಿ ಹೆಣ್ಣಿನಮೇಲೆ ಹೇರಿದ ತತ್ವ ಸೂತ್ರಗಳ ಗಿಳಿಪಾಠವೂ ಇದೆ. ಇಂದಿನ ಸಮಾಜ ದೃಷ್ಟಿಯಿಂದ ಅಲ್ಲಲ್ಲಿ ಕೆಲವು ಅಂಶಗಳನ್ನು ಬಿಡಬೇಕಾದೀತು. ಕೆಲವನ್ನು ಬದಲಿಸಬೇಕಾದೀತು. ಆದರೆ ತಿರುಳು ಗಟ್ಟಿಯಾಗಿದೆ, ಪಕ್ವವಾಗಿದೆ. ಗೊಡ್ಡಾಚಾರದ ನೀತಿಯ ಕಂತೆಗಳೆಂದು ಹೊರನೋಟಕ್ಕೆ ತೋರಬಹುದಾದ ಇಲ್ಲಿಯ ಕೆಲವು ಪದ್ಯಗಳಿಗೆ ಕೂಡ ನಮ್ಮ ಪ್ರತಿಕ್ರಿಯೆ ಅವನ್ನು ತಿರುಗ ಮುರುಗ ಮಾಡಿ ಬರೆದು ಅನಾಚಾರವನ್ನು ಸ್ವಾತಂತ್ರ್ಯವೆಂದು ಎತ್ತಿ ಹಿಡಿಯುವುದಲ್ಲ. ನನಗೆ ತೋರುವ ಮಟ್ಟಿಗೆ ನಮ್ಮ ಸಮಾಜ ಸುಧಾರಣೆಯ ದೃಷ್ಟಿಯಿಂದ ಇಂದು ನಮಗೆ ಬೇಕಾಗಿರುವುದು ಈ ಹಳೆಯ ಕಾಲದ "ಹದಿಬದೆಯ ಧರ್ಮ"ಕ್ಕೆ ಪ್ರತಿಗ್ರಂಥವೊಂದಲ್ಲ; ಅದಕ್ಕೆ ಪೂರಕ ಅಥವಾ ಜತೆಯ ಗ್ರಂಥ ಒಂದು ಬೇಕು. ಅದು "**ಪತಿಧರ್ಮ**" ಅಥವಾ "**ಪತ್ನೀವ್ರತಧರ್ಮ**" ಎಂಬ ಗ್ರಂಥ. ಅಂಥದೊಂದು ಗ್ರಂಥ ಬಂದು ಅದರ ಪ್ರಭಾವ ಪರಿಣಾಮಗಳು ನಮ್ಮ ಜನರ ಮೇಲೆ ಆಗಿ, ಅದರ ಫಲವಾಗಿ ಗಂಡಿನ ಬಿರುಬಾಳು ಮೆದುಗೊಂಡು ಹೆಣ್ಣೊಲವಿನ ಸಂಸ್ಕಾರದಿಂದ ಹದಗೊಂಡು ಇಬ್ಬರ ಬಾಳೂ ಹುರುಳಾದೀತು ಹೊನ್ನಾದೀತು ಎಂದು ಹಾರೈಸೋಣ.

ಹದಿಬದೆಯ ಧರ್ಮದಲ್ಲಿ ಹೆಣ್ಣು ತವರುಮನೆಯಲ್ಲಿ, ಗಂಡನ ಮನೆಯಲ್ಲಿ ಮಗಳಾಗಿ, ಮಡದಿಯಾಗಿ, ಸೊಸೆಯಾಗಿ, ಕೊನೆಗೆ ಸವತಿಯಾಗಿ ಕೂಡ ನೇರವಾಗಿ ಒಪ್ಪವಾಗಿ ಬಾಳಬೇಕಾದರೆ ಅನುಸರಿಸಬೇಕಾದ ತತ್ವಗಳನ್ನೂ ನೀತಿಗಳನ್ನೂ ಮಾರ್ಗಗಳನ್ನೂ ಅಚ್ಚುಕಟ್ಟಾಗಿ ಸೊಗಸಾಗಿ ಕೆಲವೆಡೆ ರಸವತ್ತಾಗಿ ಹೇಳಿದೆ. ಇದರಲ್ಲಿ ಸತಿ ಹೇಗೆ ನಡೆದುಕೊಳ್ಳಬೇಕು ಎಂಬುದನ್ನು ಮಾತ್ರ ಹೇಳಿಲ್ಲ; ಅತ್ತೆ ಸೊಸೆಯನ್ನು ಹೇಗೆ ನಡಸಿಕೊಳ್ಳಬೇಕು, ಗಂಡ ಹೆಂಡತಿಯನ್ನು ಹೇಗೆ ಒಲಿಸಿಕೊಳ್ಳಬೇಕು, ನಡಸಿಕೊಳ್ಳಬೇಕು, ತಾಯಿ ಮಗಳನ್ನು ಹೇಗೆ ಬೆಳಸಬೇಕು—ಇವೇ ಮೊದಲಾದುವನ್ನು ಹೇಳಿದೆ. ನಮ್ಮ ಪೂರ್ವಾಚಾರದ ಸತ್ ಸಂಪ್ರದಾಯದ ಪದ್ಧತಿಗಳನ್ನು ಇಲ್ಲಿ ಸುಲಭವಾಗಿ ಸರಳವಾಗಿ ವಿವರಿಸಿದೆ. ಇಲ್ಲಿ ಹೇಳಿರುವ ಒಂದೊಂದು ಅಂಶವನ್ನೂ ಒಂದೊಂದು ವಿವರವನ್ನೂ ಎಲ್ಲರೂ ಏಕರೀತಿಯಾಗಿ ಒಪ್ಪಿಯಾರು, ಒಪ್ಪಬೇಕು ಎಂದು ಹೇಳಲಾರೆ. ಏಕೆಂದರೆ ಹಿಂದಿನವರ ವಿಚಾರಗಳಿಗೂ ಇಂದಿನವರ ವಿಚಾರಗಳಿಗೂ ಬಹಳ ವ್ಯತ್ಯಾಸವಿದೆ ಎಂಬುದು ಎಲ್ಲರಿಗೂ ತಿಳಿದ ವಿಷಯವೇ.

ಆದರೆ ಇದರಲ್ಲಿ ಸರ್ವಮಾನ್ಯವಾದ ಸಾರವತ್ತಾದ ಭಾಗವೂ ಬಹಳ ಇದೆ. ಈ ಕಾರಣದಿಂದ ಇದು ಇಂದೂ ಮಾನ್ಯ ಮಾತ್ರವಲ್ಲ, ಆವಶ್ಯಕವೂ ಹೌದು.

"ಹದಿಬದೆಯ ದರ್ಮ"ದಲ್ಲಿ ಹೆಣ್ಣಿನ ಸ್ಥಾನ ಬಹುವಾಗಿ ತೊತ್ತಿನ ಸ್ಥಾನ.

"ತಡೆಯದೆಳವೆಯೊಳು ತಂದೆತಾಯಿಗಳಿಗೆ
ನಡುವರೆಯದೊಳು ನಲ್ಲನಿಗೆ
ಕಡುಮುದುಪಾದ ಕಾಲದೊಳು ತನ್ನಣುಗರಿ
ಗಡತ ಮೆನಿಪುದಬಲೆಯರು ||

ಈ ರೀತಿಯೊಳಿರ್ಪುದೇಕಪತ್ನಿಯರಿಗೆ
ನಾರಾಯಣನಾಜ್ಞೆಯೆಂದು
ಅರ್ರೈದು ತಿಳಿದಾಚರಿಪುದೊಡನೆ ಕೈ
ಸೇರುವುವಿಷ್ಟಸಿದ್ಧಿಗಳು ||"

ಈ ರೀತಿಯ ದಾಸೀ ಸ್ಥಾನವನ್ನು ಇಂದಿನ ಎಷ್ಟು ಹೆಣ್ಣುಮಕ್ಕಳು ಸ್ವೀಕರಿಸಲು ಸಿದ್ಧರಿರುತ್ತಾರೆ?

"ಕಂದ ಕೇಳಿನಿಯನು ಕನಲಿ ಕಾಡಿದೊಡದ
ರಿಂದ ನೀನಳವಳಿಯದಿರು |
ಒಂದಡಿಯಿಂದೊದೆದೊಡನುದನುಳಿದು ಮ
-ತ್ತೊಂದ ವಿಡಿದೊಡಬಡಿಸು"

ತಾನು ಹೊತ್ತು ಹೆತ್ತು ಎತ್ತಿ ಬೆಳಸಿದ ಮಗಳಿಗೆ ಇದನ್ನೂ ಕಲಿಸಬೇಕಾಗಿ ಬಂದ ತಾಯ ಕರುಳ ಮಿಡಿತವನ್ನೇನೋ ಇಲ್ಲಿ ಕಾಣಬಹುದು. ಆದರೆ ಈ ಉಪದೇಶವನ್ನು ಕೇಳಲು ಇಂದು ನಾವು ಎಷ್ಟು ಜನ ಸಿದ್ಧರಿದ್ದೇವೆ? ಇಂಥ ಉಪದೇಶವನ್ನು ಪುರುಷ ಸಮಾಜಕ್ಕೆ, ನಮ್ಮ ಸ್ವಾಭಿಮಾನಕ್ಕೆ ಗೌರವದಾಯಕವೇ? ಈ ರೀತಿ ಪ್ರಶ್ನೆ ಕೇಳಿದರೆ ಅದಕ್ಕೆ ಇರುವುದು ಒಂದೇ ಉತ್ತರ ಎಂದು ಅಲ್ಲ. ಇಂಥವು ವಿಚಾರಾರ್ಹವಾದ ವಿಷಯಗಳು ಎಂದು ಸೂಚಿಸುವುದು ಮಾತ್ರ ಈ ಪ್ರಶ್ನೆಗಳ ಆಶಯ; ಇಂಥವು ಈ ಕೃತಿಯ ಉದ್ದಕ್ಕೂ ಅಲ್ಲಲ್ಲಿ ಇವೆ. ಇಂಥವನ್ನು ಧೀರವಾಗಿ, ಗಂಭೀರವಾಗಿ ಸಮಾಲೋಚಿಸಿ, ಇಂದಿನ ಪರಿಸ್ಥಿತಿ ಆವಶ್ಯಕತೆಗಳಿಗೆ ಅನುಸಾರವಾಗಿ ಅವನ್ನು ಮಾರ್ಪಡಿಸಿ ಹೊಂದಿಸಿಕೊಳ್ಳಬೇಕಾದೀತೇನೊ! ಈ ನಿಲವಿನ ನೋಟದಿಂದ ಈ ಕೃತಿಯಲ್ಲಿಯ ಕೆಲವು ಪದ್ಯಗಳ ಪರಿಚಯಕ್ಕೆ ಇಲ್ಲಿ ಪ್ರಯತ್ನಿಸುತ್ತೇನೆ. ಆವಶ್ಯಕವಾದ ಕಡೆ ವಿವರಣೆಗಾಗಿ, ಟೀಕೆಗಾಗಿ, ಒಂದೆರಡು ಮಾತು ಹೇಳುತ್ತೇನೆ.

"ಶ್ರೀಮದಮಲ ಗುಣನಿಧಿಗೆ ನಿತ್ಯನಿಗೆ ನಿ
ಸ್ಸೀಮ ಕೃಪಾವಾರಿಧಿಗೆ|
ರಾಮಣೀಯಕ ರಾಶಿಗೆ ಪಶ್ಚಿಮ ರಂಗ
ಧಾಮನಿಗಾನೆರಗುವೆನು ||

ರಂಗಧಾಮನ ದಿವ್ಯಾಂಗ ಸಂಗತಿಯಿಂ
ಮಂಗಳದೇವತೆಯೆನಿಪಾ|
ರಂಗಮಂದಿರ ಮಂಗಳ ವೈಜಯಂತಿಗೆ
ರಂಗನಾಯಕಿಗೆರಗುವೆನು ||

ಮಿಕ್ಕೆಲ್ಲ ಕಾವ್ಯಗಳಂತೆ ಇದಾದರೂ ದೇವತಾಸ್ತೋತ್ರದಿಂದಲೇ ಪ್ರಾರಂಭವಾಗಿದೆ.

ಬಳಿಕ ತನ್ನ ಆಶ್ರಯದಾತರಾದ ಅರಸ ಅರಸಿಯರು ಅಭಿಮಾನದಿಂದ ತನ್ನನ್ನು ಪ್ರೋತ್ಸಾಹಿಸಿದ್ದನ್ನು ಹೇಳುತ್ತಾಳೆ ಹೀಗೆ—

ಅರಸಿ ಕೇಳೀ ಹೊನ್ನಿ ಸರಸ ಸಾಹಿತ್ಯದ
ವರದೇವತೆ ತಾನೆಂದು |
ಪರಮಾರ್ಥವಾದಿಯುಳಸಿಂಗರಾರ್ಯನು
ಪರಿಪರಿಯೊಳು ಬಣ್ಣಿಪನು ||

ಎಂದರಾಯನ ನುಡಿಗಾನು ವಿನಯಗೂಡಿ
ಪಿಂದೆಗೆದಿರೆ ಪಟ್ಟದರಸಿ |
ಕಂದ ಬಾರೆನ್ನ ಕಟ್ಟಾಣಿ ಪೆಣ್ಮಣಿಯೆ ಬಾ
ರೆಂದು ಮುಂದಕೆ ಬರಿಸಿದಳು||

ಹೊನ್ನಿ ಬಾ ಹೊನ್ನಕ್ಕ ಬಾರೆಂದು ಕರವಿಡಿ
ದೆನ್ನ ತನ್ನೊತ್ತಿಗೆ ಬರಿಸಿ|
ಎನ್ನೊಳು ನೆವಮಿನಿತೆಲ್ಲದೆಂತಗೂಡಿ
ಮನ್ನಿಸಿ ನುಡಿದಳಿಂತೆಂದು||

ಪಲವೋದುಗಳಿಂದ ಪಲವು ಬಿಜ್ಜೆಗಳಿಂದ
ಪಲಬಗೆ ಮಾತುಗಳಿಂದ|
ಬೆಲೆ ವೆಡೆದಿರ್ಪೆನೆಂದೆಣಿಸುವಳಲ್ಲ ನಿ
ನ್ನೊಲವೊಂದನೆ ನಂಬಿಹೆನು||

ಒಡೆಯನಿರಿಸಿದಂತಿರ್ಪುದಲ್ಲದೆ ಪೇ
ಳೊಡವೆಗೆ ಬೇರಿರವುಂಟೆ |
ಕಡುಗೂರ್ಮೆಯಿಂದ ನಿನ್ನಡಿಯಾಣತಿಯನೆನ್ನ
ಮುಡಿಯಾಳಾಂತೆನು ಮತ್ತೇನು ||

ತಾನು ಹೇಳಿರುವ ವಿಷಯ ಹೊಸದಲ್ಲವೆಂಬುದಕ್ಕೆ—

ಆದಿಕಾವ್ಯ ದೊಳೈದನೆಯ ವೇದದೊಳು
ಮನ್ವಾದಿಕ ಧರ್ಮಶಾಸ್ತ್ರದೊಳು|
ಭೇದಿಸಿ ಪಿರಿಯರು ಪೇಳಿದುದನೆ ಕೃತಿ
ಗೈದಾನು ಕಿವಿಗೊಳಿಸಿದೆನು—ಎಂದಿದ್ದಾಳೆ.

ತಂದೆ ತಾಯಿಗಳ ಕರ್ತವ್ಯವನ್ನು ಹೊನ್ನಮ್ಮನು ಈ ರೀತಿ ಹೇಳುತ್ತಾಳೆ—

ಸುಗುಣನಾವನು ಸುಚರಿತ್ರನಾವನು ಕಣ್ಗೆ
ಸೊಗಸುವ ಸೊಬಗನಾರೆಂದು
ಬಗೆದು ಭಾವಿಸಿ ಪೆಣ್ಣನೀವುದು ವಂಶದೊ
ಳೊಗೆದೊಳ್ಳವರನಿಗೊಲಿದು ||

ಅತಿಗೈಯ್ಯದನ ನುತಿಯೆಸಗದ ವೈರವ
ಬಲಿಸದ, ಬರಿದೆ ಪಳಿಯನ
ಕೊಲೆ ಬೈಗಳಿಂದ ಕೋಟಲೆಗೊಳಿಸದ ಸ
ತ್ಕುಲಕೀವುದು ಕುವರಿಯನು ||

ಪಣದಾಸೆ ನಂಟುತನದ ಪತ್ತುಗೆ ನೇಹ
ದೆಣಿಕೆಗಳಿಂದೆದೆಗರಗಿ
ಗುಣ ಜವ್ವನ ಕುಲರೂಪಗುಂದಿದ ನಡೆ
ವೆಣಕೀಯಲಾಗದು ಪೆಣ್ಣ ||

ಜಡನಿಗೆ ಜಾತಿಹೀನನಿಗೆ ಚಂಚಲನಿಗೆ
ಕಡು ಮೂರ್ಖನಿಗೆ ಗಾಂಪನಿಗೆ
ಬಡತನದೊಳು ಬಲು ಬವಣೆಗೊಂಬನಿಗೆ
ಕೊಡಲಾಗದು ಕುವರಿಯನು ||

ಬಾಳಿ ಬದುಕಿ ತಣಿವಿಲ್ಲದ ತಮ್ಮಂತೆ
ಬಾಳಲೆಳಸುವ ಬಾಲಕಿಯ
ಬೀಳುಗುವರನಿಗೆ ಬೆವಗೈದರೆಂಬುದ
ಕೇಳಿ ಕಿವಿ ಮುಚ್ಚುವುದು ||

ದುಡ್ಡಿನ ಆಸೆಗಾಗಿ ಎಷ್ಟೋ ಜನ ತಾಯಿ ತಂದೆಯರು ತಮ್ಮ ಮಕ್ಕಳಿಗೆ ಈ ರೀತಿ ವಂಚನೆ ಮಾಡುವುದನ್ನು ನೋಡುತ್ತೇವೆ. ಅವರಿಗಾಗಿ ಈ ಮಾತು ಹೇಳಿರುವಳೇನೊ!

ಅತ್ತೆಯ ಮನೆಗೆ ತೆರಳಿರುವ ಮಗಳಿಗೆ ತಾಯಿ ತಂದೆಯರ ಉಪದೇಶ ನೋಡಿ—

ಕುಲಕೆ ಪೊರಗು ಕೊಟ್ಟ ಪೆಣ್ಣೆಂಬುದನರಿ
ತೆಲಗೆ ನೀನೆಮ್ಮ ಬಯಸಡೆ
ಅವಗೈವ ನಲ್ಲನೊಳಡಕ ಮಾಗಿರ್ದೆಮ್ಮ
ಕುಲದೇಳ್ಗೆಯ ಕೊನರಿಡಿಸು ||

ಮಗಳೆ ನಿನ್ನಿನಿಯನ ಮನೆಯುವರೆಮ್ಮೊಳು
ಪಗೆ ಸಾಧಿಸಿ ಬಯ್ದೊಡದಕೆ
ಬಗೆಯೊಳು ತಾಳುಮೆಯನು ಬಲಿದವರೊಳು
ಮೊಗವಂಟದೆ ಮೋನವೆಸಗು ||

ಮನೆಗೆ ಬಂದ ಸೊಸೆಯನ್ನು ಹೇಗೆ ನಡಸಿಕೊಳ್ಳಬೇಕು ಎಂದು ಅತ್ತೆಗೂ ಕೆಲವು ಬುದ್ಧಿವಾದಗಳನ್ನು ಹೇಳಿದ್ದಾಳೆ ಹೊನ್ನಮ್ಮ. ಆದರೆ ಅದನ್ನು ಎಷ್ಟು ಜನ ಅತ್ತೆಯರು ನಡಸುತ್ತಾರೋ ಗೊತ್ತಿಲ್ಲ.

ತಂದೆ ತಾಯನು ಬಿಟ್ಟು ತನ್ನ ಕೈಗೆಡೆಯಾಗಿ
ಬಂದ ಸೊಸೆಯರ ಬಾಧಿಸದೆ
ಅಂದಂದಿಗುಡುಗೆ ತೊಡಿಗೆಯೂಟ ಮೀಹಗ
ಳಿಂದ ಸಂತಸಗೊಳಿಸುವುದು ||

ಬಸವಳಿಸದೆ ಪಳಿಯದೆ ಭಂಗವಡಿಸದೆ
ಹಸಗೆಡಿಸದೆ ಹದುಗಿಸದೆ
ಬಸಿರೊಳು ಬಂದ ಪೆಣ್ಮಕ್ಕಳ ಮರುಕವ
ಸೊಸೆಯರೆಡೆಯೊಳಿಸಗುವುದು ||

ಬಸಿರನಿಟ್ಟಸಿ ಯುಣಬಡಿಸುವುದೊಳುಮುಡಿ
ಮೈಸಕವರಿತು ಮೀಯಿಸುವುದು
ಒಸೆದು ಸಿಂಗರಿಸುವುದೊಲಿದು ನೋಡವುದಿಂತು
ಸೊಸೆಯರ ಸುಖಬಡಿಸುವುದು ||

ಎಲ್ಲ ಅತ್ತೆಯರೂ ಕೆಟ್ಟವರೇ ಇರುವರೆಂದಲ್ಲ; ಆದರೂ ಅಳಿಯನ ದರ್ಜೆಗೆ ಬಂದ ಕೂಡಲೇ ಗಂಡಸರು ಬೀಗುವಂತೆ ಮಾವನ ಪ್ರಾಣವನ್ನು ಮಾತ್ರ ಬಿಟ್ಟು ಮಿಕ್ಕೆಲ್ಲ ಐಶ್ವರ್ಯವನ್ನೂ ಹೀರುವಂತೆ, ಅತ್ತೆಯ ಪಟ್ಟಕ್ಕೆ ಹೆಂಗಸು ಬಂದ ಕೂಡಲೇ ಸೊಸೆಯಮೇಲೆ ತನ್ನೆಲ್ಲ ಆಟೋಪವನ್ನೂ ತೋರಿಸುತ್ತಾಳೆ. ಅದು ಅವರ ತಪ್ಪಲ್ಲ; ಅವರ ಸ್ಥಾನದ ಮಹಿಮೆ ಅಂಥದು!

ಆಮೇಲೆ ಹೆಣ್ಣಿನ ಪ್ರಾಶಸ್ತ್ಯವನ್ನು ಹೇಳುತ್ತ ಹೀಗೆ ಅಂದಿದ್ದಾಳೆ—

ಪೆಣ್ಣ ಪೆತ್ತವರ ಬಳಗ ಬೆಳೆವುದು ಬೇಗ
ಪೆಣ್ಣ ಪೆತ್ತವರು ಪೆರ್ಚುವರು
ಪೆಣ್ಣ ಪೆತ್ತುದರಿಂದೆ ಪೆಸರೆನಿಸಿತು ಮಿಗೆ
ಬಣ್ಣವೇರಿತು ಪಾಲ್ಗಡಲು ||

ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ
ಪೆಣ್ಣಲ್ಲವೆ ಪೊರೆದವಳು
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು
ಕಣ್ಣು ಕಾಣದ ಗಾವಿಲರು ||

". . . ರ ಸೊಸೆಗೊ ಮಗಳಿಗೊ ಎಂಥ ಮಗು?" ಎಂದು ಕೇಳಿದಾಗ "ಹೆಣ್ಣು" ಎಂದು ಉತ್ತರ ಬಂದರೆ ಮೂಗು ಮುರಿಯುತ್ತಾರೆ. ನಾನೂ ಅಂಥ ಹಲವರನ್ನು ಕಂಡಿದ್ದೇನೆ. ಏಕೆ ಹಾಗೆ ಮಾಡುವರೊ ಏನೊ! ಇಬ್ಬರಿಂದಲೂ ಇಹಪರ ಸೌಖ್ಯ ಉಂಟು ಎಂದು ಹೊನ್ನಮ್ಮ ಹೇಳುತ್ತಾಳೆ—

ಕುವರನಾದೊಡೆ ಬಂದ ಗುಣವೇನದರಿಂದ
ಕುವರಿಯಾದೊಡೆ ಕುಂದೇನು
ಇವರಿರ್ವರೊಳೇಳ್ಗೆವಡೆದವರಿಂದ
ಸವನಿಪುದಿಹ ಪರಸೌಖ್ಯ ||

ಹೊನ್ನಮ್ಮನ ಪ್ರಕಾರ ಗಂಡಿಗಿಂತ ಹೆಣ್ಣಿಗೆ ಪ್ರಾಶಸ್ತ್ಯ ಹೆಚ್ಚು. ಈ ಪದ್ಯ ನೋಡಿ—

ಕುಲಪುತ್ರನೋದಿ ತಿಳಿದು ನಡೆದಲ್ಲದೆ
ಕುಲವನುದ್ಧರಿಸಲರಿಯನು
ಕುಲಪುತ್ರಿಯೊಳ್ಳ್ಗವರನಿಗಿತ್ತ ಮಾತ್ರಕೆ
ಕುಲಕೋಟಿಯನುದ್ಧರಿಪಳು ||

ಇದರಲ್ಲಿ ಹೇಳಿರುವುದೆಲ್ಲ ಹೆಂಗಸರಿಗೆ ಎಂದು ತಿಳಿಯಬೇಡಿ. ಗಂಡಸಿಗೂ ಕೆಲವು ಮಾತುಗಳನ್ನು ಹೇಳಿದ್ದಾಳೆ.

. . . . ಇನಿಯರು ದಿಟ್ಟವೆಂಡಿರ
ಬಳಿಸಂದೊಡ ಬಡಿಸುವುದು
ತಿಳಿಪುವುದೆದೆಗೊಳಿಸುವುದಿಂಪುದೋರುವು
ದೊಳಗು ಗೈದೊಂದುವೆರೆವುದು ||

ಗಂಡು ಹೆಣ್ಣ ಮೇಲೆ ಕೋಪಿಸಿಕೊಳ್ಳದೆ ಒಳ್ಳೆಯ ಮಾತಿನಿಂದ ಒಲಿಸಿಕೊಳ್ಳಲು ಪ್ರಯತ್ನಿಸಬೇಕು ಎಂದು ಈ ಪದ್ಯ ಹೇಳುತ್ತದೆ—

ಒಲುಮೆಯನೊಳಕೊಂಡು ನಾಣ್ಚಿಯೊಲಿಯದಂತೆ
ಚಲ ಪೋರುವೆಳಜವ್ವನದ
ಕುಲಸತಿಯೊಳು ಕೋಪಿಸದೆ ಕೋಟಲೆ ಗೊಳ
ದಲಸದೆಯನುಸರಿಸುವುದು ||

ಏನೆಂದರಿಯದೆಳವೆಯೊಳಿನಿಯಳಭಿ
ಮಾನಗೊಂಡಿರೆ ಮಚ್ಚರಿಸದೆ
ಮೋನದೊಳಿರದೆ ಮೋಡಿಯು ಕಾಣಿಸದೆ ಸ
ನ್ಮಾನದಿ ಮನಗರಗಿಪುದು ||

ಗಲಗೆಸಗದೆ ಗಾಬರಿಗೊಳಿಸದೆ ಮಿಗೆ
ಕಲಹವ ಗಂಟು ವಡಿಸದೆ
ಬಲುಮೆ ಗೈಯದೆ ಬಾಲೆಯ ಬಣ್ಣವಾತಿನಿಂ
ದೊಲಿಸಿಯೊತ್ತಿಗೆ ಬರಿಸುವುದು ||

ನಸುನಾಣ್ಚುವೆಳೆವೆಂಡಿರ ನಲವೇರಿಸಿ
ಬಸಗೈಯದೆ ಬಲ್ಮೆದೋರೆ

ಪೊಸಪೂವ ಸರಗೈದು ಮುಡಿಯುದೆ ನಲುಗಿಸಿ
ರಸದೆಗೆವೆಸಕವೆನಿಪುದು ||

ಎರಗಿ ಎರಗದೆಳೆವೆಣ್ಣ ನೆರಗಿಸದೆ
ಬರಿದೆ ಮುಗಿದು ಬಲ್ಮೆದೋರೆ
ಎರೆವ ಕಣ್ಣೀರನೆಳಸುವೆಳೆ ವಳ್ಳಿಗೆ
ತರಳಗೆಂಡವ ತಳೆವಂತೆ ||

ಗೃಹಿಣಿಯರು ಹೇಗೆ ಮನೆಯ ಕೆಲಸಗಳನ್ನು ನಡಸಿಕೊಂಡು ಹೋಗಬೇಕೆಂಬುದನ್ನು ಹೊನ್ನಮ್ಮನು ಒಂದು ಸಂಧಿಯ ಪೂರ್ತಿ ಹೇಳಿದ್ದಾಳೆ. ಅದರಲ್ಲಿ ಮುಖ್ಯವಾಗಿರುವುದನ್ನು ಮಾತ್ರ ಇಲ್ಲಿ ನೋಡೋಣ—

ಅತಿಥಿಗಳಭ್ಯಾಗತರೊಡನಧವರ
ಯತಿ ಯಾಚಕರೆಲ್ಲರನು
ಪತಿಕರಿಸುವುದು ಬಳಿಕ ಸಂತಸದೊಳು
ಸತಿಯರು ಸವಿವುದನ್ನವನು ||

ತನ್ನೊಡಲಿಗೆ ತನ್ನ ಮನವ ಕಾಪಿಡಿಡುವುದು
ತನ್ನ ಮನಕೆ ತನ್ನ ಮತಿಯು
ತನ್ನ ಮನೆಗೆ ತನ್ನ ಸಾತ್ವಿಕ ಧೈರ್ಯವ
ನುನ್ನತಿವಡೆದೊಪ್ಪುವುದು ||

ತನ್ನ ಮನೆಯ ಬಡತನಗಳ ಧನಗಳ
ತನ್ನಿನಿಯನ ತಪ್ಪುಗಳ
ತನ್ನ ಮರೆವೆ ಮೋಸಗಳನವರಿವರೊಳು
ಬಿನ್ನವಿಸದೆ ಮರಸುವುದು ||

ಪತಿಯೆ ಪರಮಗುರು ಪತಿಯೇ ದೇವತೆ
ಪತಿಯೇ ಸದ್ಗತಿಯೆಂದು
ಪತಿಯ ಪಾದಾಂಬುಜದೊಳು ಭಕ್ತಿಗೈವುದು
ಸತಿಯರ ಧರ್ಮದ ಸಾರ ||

ಇದನ್ನು ಒಪ್ಪಬಹುದು. ಆದರೆ ಮಹಾಭಾರತದ ಅರಣ್ಯ ಪರ್ವದ 198ನೆಯ ಅಧ್ಯಾಯದಲ್ಲಿಯ ಕಥೆಯನ್ನು ಹೇಳುತ್ತ ಹೊನ್ನಮ್ಮನು ಈ ರೀತಿ ಹೇಳುತ್ತಾಳೆ—

ಸಾಂಗ ವೇದವನೋದಿ ಸಕಲ ಧರ್ಮದ ತ
ತ್ವಂಗಳನರಿತಾಚರಿಸಿ
ತುಂಗಮಹಿಮೆವೆತ್ತು ದೋಷವಳಿದು ಮುನಿ
ಪುಂಗವ ನೊರ್ವನೆಸೆದನು ||

ಅವನು ಬೇಸಗೆಯ ಬಿಸಿಲಲ್ಲಿ ಬೇಸತ್ತು ಒಂದು ಮರದಡಿಯಲ್ಲಿ ನಿಂತಿರಲು,

ಮರದ ಮೇಲಿದ್ದ ಬಿಳುವಕ್ಕಿಯು ದನಿ ತನ್ನ ಕಿವಿಗೆ ಕ್ರೂರವಾಗಿ, ತಾನು ಕೆರಳಿ ಕಣ್ಣು ಬಿಟ್ಟಾಗ ಹಕ್ಕಿ ಬೆಂದುಹೋಯಿತು.

ಬಳಿಕ ಪಸಿದು ಪಾರ್ವರ ಬೀದಿಯೊಳೊಂದು
ನಿಳಯವ ಪೊಕ್ಕು ನಿಂದಲ್ಲಿ
ಬಳಲಿದೆನೆನಗುಣ ಬಡಿಸೆಂದಲ್ಲಿರ್ದ
ಕುಲಪಾಲಿಕೆಗುಸುರಿದನು ||

ಒಲಿದೇಕ ಪತ್ನಿಯೆಂಬೊಳ್ಪೆಸರೆಸೆವಾ
ಕುಲಸತಿಯುಳ್ಳರು ಗೂಡಿ
ನಲವಿನಿಂದವನಿಗನ್ನವನೀಯುವೆನೆಂದು
ಕೆಲದೊಳು ಕುಳ್ಳಿರಿಸಿದಳು ||

ಅನಿತರೊಳಗಲಿಗವಳ ಗಂಡನೈತರೆ
ಮನವೊಲಿದಿದಿರೆದ್ದು ನಡೆದು
ವಿನಯದಿಂದುಚಿತೋಪಚಾರವೆಸಗಿ ಮಿಗೆ
ಮನದನ್ನನ ಮನ್ನಿಸಿದಳು ||

ಪತಿಸೇವೆಯೊಳಂತು ಪಸಿದ ಪಾರ್ವನ ಮರೆ
ದತಿ ವಿಳಂಬವನಾಚರಿಸೆ
ಸತಿಯರ ಧರ್ಮ ಸಾರವನರಿಯದೆ
ಖತಿಗೊಂಡು ಮುನಿ ಗಳಪಿದನು ||

ಅತಿಘೋರ ತಪವೆನ್ನದದನು ನೀನರಿಯದೆ
ಮತಿಗೆಟ್ಟು ಮರುಳಾಗದಿರು
ಪತಿಶುಶ್ರೂಷೆಯು ಬಲ್ಮೆ ಫಲಿಸದಿಲ್ಲಿ
ಯತಿಧರ್ಮದಿರವಿದು ಬೇರೆ ||

ಎಂದು ಗರ್ವದಿಂದ ಸೊಕ್ಕೇರಿ ನುಡಿದ ಮುನಿಗೆ,—

ಬಳಲಿದೆ ಸಾಕಿನ್ನು ಬಡಿಪಿದನ್ನವನುಂಡು
ತಳುವದೆ ತಪವನಾಚರಿಸು
ಬಿಳುವಕ್ಕಿಯು ಬೀಳುಗೆಡಹಿದ ಬಿಂಕವೀ
ಬಳಿಯೊಳು ಬಣ್ಣವಡೆಯದು ||

ಮರುಳೆ ನೀನೀ ಮಾತಮರೆ ಧರ್ಮಸೂಕ್ಷ್ಮ ದೊಂ
ದಿರವ ನೀನರಿತವನಲ್ಲ
ಪರಮ ಪತಿವ್ರತೆಯರ ಬಗೆ ಬೇರಿದು
ಹರಿಹರಾದ್ಯರ ಹವಣಲ್ಲ ||

ಎಂದು ಬುದ್ಧಿ ಹೇಳುತ್ತಾಳೆ. ಈ ಕಥೆಯು ಅತ್ತಿಹಣ್ಣನ್ನು ಹಿಕ್ಕದಿರುವುದು ನೋಲು. ಪಾತಿವ್ರತ್ಯ ಮಹಿಮೆಯು ಕೊಂಡಾಟಕ್ಕೆಂದು ಹೊರಟ ಈ ನೀತಿ ಕಥೆಯು

ಕರಾಳ ಮುಖ ಇನ್ನೊಂದು ಇದೆ. ಇಷ್ಟನ್ನೂ ನೋಡುತ್ತಿದ್ದ ಆ ಗಂಡ ಮನುಷ್ಯನೋ ಮೃಗವೊ ? ಪತ್ನಿಗೇನೋ ಪತಿಸೇವೆ ಮುಖ್ಯ ನಿಜ; ಆದರೆ ಸತಿ ಪತಿಗಳಿಬ್ಬರಿಗೂ ಮತ್ತೊಂದು ಧರ್ಮವಿಲ್ಲವೆ – ಆತಿಥ್ಯ ಧರ್ಮ ?

ಮುಂದೆ ನೋಡೋಣ—

ಮನೆವಾಳ್ತಿ ಮೆಯ್ಯಲಸಿಕೆ ಮಕ್ಕಳ ಮುದ್ದು
ಬಿನದಂಗಳನು ಬಿಟ್ಟಿದ್ದು
ದನಿಗೇಳದ ಮುನ್ನ ತಾನಿದಿರ್ಗೊಂಡವ
ನರಿತನುಸರಿಸುವುದು ||

ಇದನ್ನು ಎಲ್ಲರೂ ಶುದ್ಧಾಂಗವಾಗಿ ಒಪ್ಪಬಹುದೇ ?

ಪತಿಯ ಬುದ್ಧಿಗೆ ಮೋಸ ಬಂದೊಡಮುದರಿಂದ
ಖತಿಗೊಂಡು ಗಲಗುವಡಿಸದೆ
ಇತರರರಿಯದಂತೇಕಾಂತ ಸಮಯದೊ
ಳತಿ ಭಕ್ತಿಯಿಂದರುಹುವುದು ||

ಅನುಚಿತ ಕಾರ್ಯಮನವನೊಡರಿಸೆ ಕಂಡು
ನಿನಗಿದು ನೀತವಲ್ಲೆಂದು
ನೆನಯಿಪೆನಲ್ಲದೆ ನೇಮಿಪುದಿಲ್ಲೆಂದು
ವಿನಯವೆರಸಿ ಬಿನ್ನವಿಪುದು ||

ನನಗೆ ತೋರುವ ಮಟ್ಟಿಗೆ ಇದರಲ್ಲಿ ಅಡಗಿರುವುದು ಯಾವ ಪರತತ್ವವೂ ಅಲ್ಲ; ಕೇವಲ ವ್ಯವಹಾರ ಚಾತುರ್ಯದ ನೀತಿ ಮಾತ್ರ.

ಮುಡಿಯೊಳು ಪೊತ್ತು ಮುದ್ದಿಸಿದೊಡೇನಡಿಗಳಿಂ
ಪೊಡವಿಗಿಟ್ಟೊರಸಿದೊಡೇನು
ಒಡೆಯನಿಟ್ಟಂತಿರ್ಪುದೊಡವೆಗುಚಿತಮೆಂದು
ನಡೆವುದು ನಲ್ವೆಂಡಿರೊಲಿದು ||

ಅಂದಂದಿಗಿನಿಯನ ಮೈಯ್ಯಾರೈಕೆಯು
ನೆಂದೆಂದಿಗು ಬೇಸರದೆ
ಒಂದೇ ನಾವೆಯೊಳೇರಿದವರಂತೆ ಸವತಿಯು
ರೊಂದೆನಿಸಿರ್ಪುದೊಪ್ಪದೊಳು ||

ಸಮಾನ ಹಕ್ಕು ಬಾಧ್ಯತೆಗಳಿಗೆ ಹೋರಾಡುತ್ತಿರುವ ಇಂದಿನ ಹೆಣ್ಣು ಮಕ್ಕಳು ಎಷ್ಟು ಜನ ಇದನ್ನು ಪ್ರತಿಭಟಿಸದೆ ಒಪ್ಪಿಯಾರು ?

ಹೆಣ್ಣು ಗಂಡಿಗೆ ಕೊಡುವ ಉಪದೇಶವನ್ನು ನೋಡಿ—

ಆಯಿತಾಯಿತು ಎಂದಲ್ಲಗಳೆಯದೆ ತ
ನ್ನಾಯುವನವಳಿಗರುಹುಥೆ

ಆಯ ಬೀಯವನವಳೊಡನಾಳೋಚಿಸಿ
ಕೈಯಡಕದೊಳಿರಿಸುವುದು ||

ಗಂಡು ಒಂದುವೇಳೆ ಹೀಗೆ ಮರೆಮಾಚಿದರೆ,
ಅನುಗೊಳೆ ಪಾಲುನೀರುಗಳಂತಿನಿಯನು
ಮಿನಿಯೊಳು ಮೇತ ವೆನಿಪುದು ||

ಇದು, ಈಗಿನ ಕಾಲದಲ್ಲಿ, ಎಂದಾದರೂ ಸಾಧ್ಯವಾದೀತೇ ?

ಕೊನೆಯದಾಗಿ, ಹೊನ್ನಮ್ಮನು ತನ್ನ ಕಾವ್ಯದ ಪರಿಸಮಾಪ್ತಿಯಲ್ಲಿ ಹೇಳಿದ ಕೆಲವು ಪದ್ಯಗಳನ್ನು ಹೇಳಿ ಇದನ್ನು ಮುಗಿಸುತ್ತೇನೆ.

ತನ್ನ ಗುರುವನ್ನು ನೆನೆಸಿದ್ದಾಳೆ—

ಈ ಮಹಿಮೆಯೊಳೆಸೆವಳ ಸಿಂಗರಾರ್ಯನು
ದ್ದಾಮ ಕೃಪಾವೈಭವಕೆ
ಭೂಮಿಯೆನಿಸಿ ನೆಗಳಿದ ಮೈಮೆಯಿಂದಾ
ನೀ ಮಹಾಕೃತಿಯ ಪೇಳಿದೆನು.

ತನ್ನ ಕಾವ್ಯದಲ್ಲಿ ಹೊಸದೇನೂ ಇಲ್ಲ, ಹಳೆಯದನ್ನೇ ಮತ್ತೆ ತಿದ್ದಿ ಜನ ಮನದಲ್ಲಿ ನೆಲೆಯಾಗಿ ನಿಲ್ಲುವಂತೆ ಮಾಡಿದ್ದೇನೆ ಎಂದು ಹೇಳಿದ್ದಾಳೆ—

ಧರ್ಮದ ನೆಲಹು ಮರೆಯದಂತೆ ಕೃತಿಯಾಗಿ
ನಿರ್ಮಿಸಿ ನೆಲೆಗೊಳಿಸಿದೆನು ||

ಭರತವಾಕ್ಯವನ್ನೂ ಹೇಳಿದ್ದಾಳೆ—

ಮಳೆಯಕ್ಕೆ ಕಾಲಕಾಲಕೆ ದೇವರೊಲವಿಂದ
ಬೆಳೆಗೈಗೆ ಪೆರ್ಚುಗೆಯಕ್ಕೆ
ಇಳೆಯೊಳು ಪತಿ ಪುತ್ರ ಪೌತ್ರ ಸಂಪದದೊಡ
ನೊಳುವೆಂಡಿರೊಪ್ಪದಳಿರ್ಕೆ ||

ಇಷ್ಟು ಹೊತ್ತಿನವರೆಗೆ ಶಾಂತವಾಗಿ ಕುಳಿತು ನನ್ನ ಈ ನಾಲ್ಕು ಮಾತನ್ನು ಕೇಳಿದ್ದಕ್ಕೆ ನಾನು ನಿಮಗೆಲ್ಲರಿಗೂ ಕೃತಜ್ಞಳು. ಇಲ್ಲಿಗೆ ಬಂದು ನನಗೆ ಬಂದ ಎರಡು ಮಾತುಗಳನ್ನು ಆಡಲು ಅವಕಾಶ ಕಲ್ಪಿಸಿಕೊಟ್ಟದ್ದಕ್ಕಾಗಿ ಈ ಸಾಹಿತ್ಯ ಸಮ್ಮೇಳನದ ಕಾರ್ಯಕರ್ತರೆಲ್ಲರಿಗೂ ನಾನು ಮತ್ತೊಮ್ಮೆ ವಂದನೆಗಳರ್ಪಿಸುತ್ತೇನೆ. ನನ್ನ ಮಾತು ಕೆಲವರಿಗೆ ಕಟುವಾಗಿರಬಹುದು. ಆದರೆ ಅದು ಅನಿವಾರ್ಯ. ಅದಕ್ಕಾಗಿ ತಪ್ಪು ಭಾವಿಸಬಾರದೆಂದು ಸಭಿಕರಲ್ಲಿ ಮತ್ತೆ ಪ್ರಾರ್ಥಿಸಿಕೊಂಡು ನನ್ನ ಈ ಭಾಷಣವನ್ನು ಮುಗಿಸುತ್ತೇನೆ.

---

# 38ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ರಾಯಚೂರು

## ಮಹಿಳಾ ಗೋಷ್ಠಿಯಲ್ಲಿ

## ಶ್ರೀಮತಿ ಇಂದಿರಾಬಾಯಿ ಎಂ.ಎ., ಅವರ ಭಾಷಣ

26-12-1955

### ಕನ್ನಡ ಸಾಹಿತ್ಯಕ್ಕೆ ಸ್ತ್ರೀಯರ ಸೇವೆ

ಕನ್ನಡ ಸಾಹಿತ್ಯಕ್ಕೆ ಸ್ತ್ರೀಯರ ಸೇವೆ ಇಂತಹುದೇ, ಮತ್ತು ಈ ರೀತಿಯೇ ಆಗಬೇಕು ಎಂದು ನಿರ್ದಿಷ್ಟವಾಗಿ ಹೇಳಲು ಸಾಧ್ಯವಿಲ್ಲ. ಏಕೆಂದರೆ ಮನುಷ್ಯನು ತನ್ನ ಭಿನ್ನ ರುಚಿಗಳನ್ನು ಅನುಸರಿಸಿ ಯಾವುದೇ ಕೆಲಸವನ್ನು ಮಾಡುತ್ತಾನೆ. ಹೀಗಿರುವಾಗ ಅವನ ರುಚಿಗಳಿಗೆ ವಿರುದ್ಧವಾದ ಒಂದು ವಿಷಯವನ್ನು ಸೂಚಿಸಿ ಈ ಕ್ಷೇತ್ರದಲ್ಲಿಯೇ ಸಾಹಿತ್ಯಕ್ಕೆ ಸೇವೆಯನ್ನು ಸಲ್ಲಿಸು ಎಂದು ಹೇಳಿದರೆ ಆ ಸೇವೆ ಫಲರಹಿತವಾಗುತ್ತದೆ. ಆದರೂ ಈ ಸಂದರ್ಭದಲ್ಲಿ ಇಂದಿನ ಸ್ವತಂತ್ರಭಾರತದಲ್ಲಿ ಕನ್ನಡ ಮಹಿಳೆಯರು ಯಾವ ಪಾತ್ರವನ್ನು ವಹಿಸಬೇಕು ಎಂಬುದರ ಬಗ್ಗೆ ಒಂದೆರಡು ಮಾತುಗಳನ್ನು ಇಲ್ಲಿ ಹೇಳಬಹುದು.

'ಮಾತೃದೇವೋ ಭವ' ಎಂದು ಶ್ರುತಿಗಳು ಸಾರಿ ಹೇಳುತ್ತಿವೆ. ಇದರಿಂದ ಪ್ರಾಚೀನ ಕಾಲದಲ್ಲಿ ಮಹಿಳೆಯರಿಗೆ ಎಷ್ಟು ಉನ್ನತಸ್ಥಾನವು ದೊರೆತಿತ್ತು ಎಂಬುದು ಸ್ಪಷ್ಟವಾಗುತ್ತದೆ. ಇದರ ಜೊತೆಗೆ ಆರ್ಯಸಂಸ್ಕೃತಿಯ ಹಿರಿಮೆಯ ಕಲ್ಪನೆ ಕೂಡ ನಮಗೆ ಮನದಟ್ಟಾಗುತ್ತದೆ. ಆದರೆ ಈ ಹಿರಿಮೆ ಇತ್ತೀಚೆಗೆ ಕಣ್ಮರೆಯಾಗಿರುವುದು ಪರಕೀಯರ ಹಾವಳಿಯಿಂದ ಎಂಬುದು ಕೆಲವು ಕಾರಣಗಳಿಂದ ಎಲ್ಲರೂ ಅರಿತ ವಿಷಯವೇ ಆಗಿದೆ. ಈಗ ಒಂದು ಉದಾಹರಣೆಯನ್ನು ತೆಗೆದುಕೊಳ್ಳಬಹುದು. ವಿಧವೆಯರನ್ನು ವಿರೂಪಗೊಳಿಸುವ ಪದ್ಧತಿ ಅದರಂತೆ ಜನರನ್ನು ಮತಾಂತರಗೊಳಿಸುವ ಪದ್ಧತಿ ಮುಸಲ್ಮಾನರ ಕಾಲದಲ್ಲಿ ಇದ್ದುದು ಚರಿತ್ರೆಯಿಂದ ತಿಳಿದುಬರುತ್ತದೆ. ಈ ಪದ್ಧತಿ ಬ್ರಿಟಿಷರ ಕಾಲದಲ್ಲಿಯೂ ಮುಂದುವರಿಯಿತು. ಈ ತೆರನ ಪದ್ಧತಿಗಳ ಹಾವಳಿಯಿಂದ ಸ್ತ್ರೀಯರು ಹೊರಗೇ ಬಾರದಂತೆ ಸಮಾಜವು ಕಟ್ಟುಹಾಕಬೇಕಾಯಿತು. ಇಂತಹ ಹಲವಾರು ನಿದರ್ಶನಗಳಿಂದ ಸ್ತ್ರೀಯು ಅಂಧಕಾರದಲ್ಲಿ ಮುಳುಗಲು ದಾಸ್ಯವೇ ಕಾರಣವೆಂದು ತಿಳಿಯುತ್ತದೆ. ಹೀಗೆಲ್ಲ ಆಗುವ ಮೊದಲು ನಮ್ಮ ಮಹಿಳೆಯರು ವಿದ್ಯಾಪಾರಂಗತರಾಗಿದ್ದರೆನ್ನುವುದಕ್ಕೆ ಎಷ್ಟೋ ಆಧಾರಗಳಿವೆ. ವೀರ ರಮಣಿಯರೂ, ವಿಧವಿಧವಾದ ಸಾಹಿತ್ಯಗಳಲ್ಲಿ, ಕಲೆಗಳಲ್ಲಿ ನುರಿತ ರಮಣಿಯರೂ ನಮ್ಮ ಈ ಪವಿತ್ರ ಭಾರತದಲ್ಲಿ ಜನಿಸಿ ದಶದಿಕ್ಕುಗಳಲ್ಲೂ ಭಾರತದ ಕೀರ್ತಿಯನ್ನು ಹರಡಿದ್ದಾರೆ. ಜ್ಞಾನ ಜ್ಯೋತಿಯನ್ನು ಬೆಳಗಿದ್ದಾರೆ; ಸಾಹಿತ್ಯ ಸುಧೆಯನ್ನುಣಿಸಿದ್ದಾರೆ. ಅವರ ಆಶೀರ್ವಾದವೇ — ಅವರ ಆದರ್ಶವೇ — ಅವರ ಸ್ಫೂರ್ತಿಯೇ ನಮ್ಮನ್ನಿಂದು ಇಂತಹ ಸ್ಥಿತಿಯಲ್ಲೂ ಇಷ್ಟರಮಟ್ಟಿಗಾದರೂ ಇಟ್ಟಿದೆಯೆಂಬ ವಿಷಯವನ್ನು ನಾವೆಂದಿಗೂ ಮರೆಯಲಾಗದು.

ನಮ್ಮ ಈ ಭಾರತಭೂಮಿಯು ಅನಾದಿಕಾಲದಿಂದಲೂ ವಿದ್ಯೆಗೆ ವಾಸಸ್ಥಾನ ಎಂದು ಹೇಳಬಹುದು. ಅಷ್ಟೇಕೆ ಸರಸ್ವತೀದೇವಿಯ ವಾಸಸ್ಥಾನವೆಂದರೂ ಅತಿಶಯೋಕ್ತಿಯಾಗಲಾರದು. ಕನ್ನಡ ಭಾಷೆಯು ಉನ್ನತಸ್ಥಿತಿಯಲ್ಲಿದ್ದಾಗ ಅಂದಿನ ಪ್ರಜೆಗಳು ಭಾಷಾಭ್ಯಾಸ ಮಾಡಿ, ಕೀರ್ತಿ ಪಡೆದಿದ್ದ ಕಾಲದಲ್ಲಿ ಅನೇಕ ಮಹಿಳಾಮಣಿಗಳೂ ಕನ್ನಡ ಭಾಷೆಯನ್ನು ಅಭ್ಯಾಸ ಮಾಡಿಯೋ ಅಥವಾ ಮಾಡದೇ ಕೇವಲ ದೈವದತ್ತವಾದ ವರದಿಂದಲೋ ಶ್ರೇಷ್ಠರಾದ ಕವಿಯಿತ್ರಿಯರೆನಿಸಿ ಪ್ರಖ್ಯಾತರಾಗಿದ್ದರು ಎನ್ನುವುದಕ್ಕೆ ಸಾಕಾದಷ್ಟು ಆಧಾರವಿದೆ. ಆದರೆ ಕ್ರಮೇಣ ಬೇರೆ ಬೇರೆ ಮತದವರು ಆಗಾಗ್ಗೆ ನಮ್ಮ ದೇಶದ ಮೇಲೆ ದಂಡೆತ್ತಿ ಬಂದು, ನಮ್ಮ ನಾಡಿನ ಸಂಸ್ಕೃತಿಯನ್ನು ನಾಶಗೊಳಿಸಿದಾಗ, ದೇಶದಲ್ಲಿ ಪ್ರಚಾರದಲ್ಲಿದ್ದ ಭಾಷೆ ಸಾಹಿತ್ಯಗಳಿಗೂ ಎಷ್ಟೋ ನಷ್ಟವೊದಗಿತು. ಇಂತಹ ಘೋರಸಂಭವಗಳು ನಡೆದಾಗಲೂ ಕೂಡ ಮೇಘಗಳ ಮಧ್ಯೆ ಪ್ರಕಾಶಿಸುವ ಮಿಂಚಿನ ಗೊಂಚಲುಗಳಂತೆ ಅನೇಕ ಲಲನಾಮಣಿಗಳು – ವಿದುಷಿಯರು ತಮ್ಮ ಪಾಂಡಿತ್ಯವನ್ನು ನಮ್ಮ ಸಾಹಿತ್ಯಾಕಾಶದಲ್ಲಿ ಬೆಳಗಿದ್ದಾರೆ.

ಒಂದು ದೇಶದ ಸಂಸ್ಕೃತಿಯನ್ನರಿಯಬೇಕಾದರೆ ಮೊದಲು ನಾವು ಅಲ್ಲಿನ ಸಾಹಿತ್ಯವನ್ನು ಕೆದಕಿ ನೋಡುತ್ತೇವೆ. ಈ ಬಗೆಯ ಅಳತೆಗೋಲಿಗೆ ಕರ್ನಾಟಕವು ಬಹುಕಾಲಕ್ಕೆ ಮುಂಚೆಯೇ ನಾಗರಿಕತೆಯ ಅತ್ಯುನ್ನತ ಶಿಖರವನ್ನೇರಿತ್ತೆಂಬುದು ಚರಿತ್ರೆಯಿಂದ ವ್ಯಕ್ತವಾಗುತ್ತದೆ. ಇದಕ್ಕಾಗಿ ಅನೇಕ ಕನ್ನಡ ಅಭಿಮಾನಿಗಳು ಸ್ತ್ರೀ ಪುರುಷರೆಂಬ ಭೇದವಿಲ್ಲದೆ, ಬಡವರು–ಬಲ್ಲಿದವರು ಎಂಬ ತಾರತಮ್ಯವಿಲ್ಲದೆ, ಕೀಳು ಮೇಲೆಂಬ ಜಾತಿಯ ಸಂಕುಚಿತ ಭಾವನೆಯಿಲ್ಲದೆ ಸಾಹಿತ್ಯವೃಕ್ಷವನ್ನು ತಮ್ಮ ತನು–ಮನ–ಧನ–ಗಳೆಂಬ ಜಲದಿಂದ ಪೋಷಿಸಿದ್ದಾರೆ. ಈ ಎಲ್ಲ ವಿಷಯವನ್ನು ಕುರಿತು ಚರ್ಚಿಸುವುದಕ್ಕೆ ಬದಲು ನಾವು ಈ ಸಂದರ್ಭದಲ್ಲಿ ಪಕ್ಷಪಾತ ಹೃದಯಿಗಳಾಗಿ ಸಾಹಿತ್ಯ ಚರಿತ್ರೆಯಲ್ಲಿ ಮಿಂಚಿಹೋದ ಕೇವಲ ಮಹಿಳೆಯರ ಸಂಖ್ಯೆಯನ್ನೇ ಎಣಿಕೆಗಾಗಿ ತೆಗೆದುಕೊಳ್ಳೋಣ.

ಸುಮಾರು ಒಂಬತ್ತನೆಯ ಶತಮಾನದಿಂದ ಇಂದಿನವರೆಗೂ ಕನ್ನಡ ಸಾಹಿತ್ಯ ವಾಹಿನಿಯು ಅವ್ಯಾಹತವಾಗಿ ಹರಿದು ಬರುತ್ತಿದೆ. ಹೀಗೆ ಹರಿದು ಬರುತ್ತಿರುವ ಪ್ರವಾಹದ ಜೊತೆಗೆ ಅದೆಷ್ಟು ಜನ ಮಹಿಳೆಯರ ಹೆಸರುಗಳೂ ತೇಲಿಹೋಗಿಲ್ಲ? ಇಷ್ಟರಿಂದ ಮಾತ್ರಕ್ಕೆ ಅವರ ಹೆಸರುಗಳೂ, ಅವರ ಕೃತಿಗಳ ಅಸ್ಪಷ್ಟವಾದ ಚಿತ್ರಗಳೂ ಪ್ರವಾಹದ ರಭಸದೊಡನೆ ಕೊಚ್ಚಿಕೊಂಡು ಹೋಯಿತೆಂದು ಅರ್ಥವಲ್ಲ. ಹೇಗಾಗಲು ಅವರು ರಚಿಸಿದ ಕೃತಿಗಳು ಜಲಲಿಪಿಗಳಾಗದೆ ವಜ್ರಲಿಪಿಗಳು, ಶಿಲಾಲಿಪಿಗಳು ಆಗಿದ್ದವು. ಶಿಲೆಗಳಲ್ಲಿ ಪ್ರತಿಮೆಯನ್ನೋ ಅಥವಾ ಶಾಸನವನ್ನೋ ಕೊರೆದರೆ ಅದು ಹೇಗೆ ಮಾಸಿಹೋಗದೆ ಶಾಶ್ವತವಾಗಿ ಉಳಿಯುತ್ತದೆಯೋ ಅದರಂತೆ ಈ ಮಹಿಳೆಯರ ಹೆಸರುಗಳೂ ಅವರ ಕೃತಿಗಳೂ ಸಾಹಿತ್ಯ ಚರಿತ್ರೆಯಲ್ಲಿ ಶಾಶ್ವತವಾಗಿ ಇಂದಿಗೂ ಉಳಿದಿವೆ.

ಮೊಟ್ಟಮೊದಲು ನಮಗೆ ಸಾಹಿತ್ಯ ಕ್ಷೇತ್ರದಲ್ಲಿ ಪರಿಚಯವಾಗುವ ಮಹಿಳೆ ಕವಿಯಿತ್ರಿ ಎಂದರೆ ಕಂತಿ. 11ನೆಯ ಶತಮಾನದ ಕೊನೆಯ ಭಾಗ 12ನೆಯ ಶತಮಾನದ ಮೊದಲ ಭಾಗದಲ್ಲಿ ಬಾಳಿದ ಸುಪ್ರಸಿದ್ಧ ಕವಿ ಅಭಿನವ ಪಂಪನ ಸಮಕಾಲೀನಳು. 'ಅಪೂರ್ವಮೆನೆ ರಾಮಕಥೆಯುನಭಿವರ್ಣಿಸುವೆಂ' ಎಂದು 'ರಾಮಚಂದ್ರ ಚರಿತ ಪುರಾಣ'ದ ಬಗ್ಗೆ ಹೆಮ್ಮೆಯಿಂದ ಹೇಳಿಕೊಂಡ ಉದ್ದಾಮ ಕವಿ, ನಾಗಚಂದ್ರನ ಸಮ

ಕಾಲೀನಳು ಈ ಕಂತಿ ಎಂದು ಸಾಹಿತ್ಯ ಚರಿತ್ರೆಯಲ್ಲಿ ತಿಳಿದುಬರುವ ವಿಷಯ. 'ಅಭಿನವ ವಾಗ್ದೇವಿ' ಎಂದೂ ಪ್ರಖ್ಯಾತಳಾಗಿದ್ದಳು. ಈಕೆ ಕನ್ನಡ ಸಂಸ್ಕೃತ ಮಹಾಕವಿಗಧಿಪ ಪಂಪ ಕವಿಗೆ ಅವನು ಕೇಳಿದ ಸಾವಿರ ಪ್ರಶ್ನೆಗಳಿಗೆ ಯಥಾವತ್ತಾದ ಉತ್ತರವನ್ನು ಕೊಟ್ಟಳಂತೆ. ಇದರಿಂದ ಈಕೆಯನ್ನು ರಾಜಸಭೆಗೆ ಕರೆದೊಯ್ದು ವಿದ್ವತ್ಸಮೂಹದಲ್ಲಿ 'ಅಧಿಕ ಕವೀಶ್ವರಿಯಾದಳ್' ಎಂದು ವಿದ್ವಾಂಸರು ಕೊಂಡಾಡಿದರಂತೆ. ಹೀಗೆ ಇವಳ ಬಗ್ಗೆ ಒಂದು ದಂತಕಥೆಯಿದೆ. ಈ ಅಂಶವನ್ನು ಸಮರ್ಥಿಸುವಂತೆ 'ಕಂತಿ ಹಂಪರ ಸಮಸ್ಯೆಗಳು' ಎಂಬ ಕೆಲವು ಪದ್ಯಗಳು ನಮಗೆ ಸಾಹಿತ್ಯ ಚರಿತ್ರೆಯಲ್ಲಿ ಗೋಚರವಾಗುತ್ತವೆ. ಈ ಪದ್ಯಗಳಿಂದ ಈಕೆ ತನಗೆ ಕೇಳಿದ ಪ್ರಶ್ನೆಗಳಿಗೆ ಯಾವ ರೀತಿ ಸಮಾಧಾನವನ್ನು ಹೇಳಿದಳೆಂದೂ, ಮತ್ತು ಅಪೂರ್ಣವಾದ ಕೆಲವು ವಾಕ್ಯಗಳನ್ನು ತನ್ನ ಚಮತ್ಕೃತಿಯಿಂದ ಮತ್ತು ರಸವತ್ತಾದ ಮಾತುಗಳಿಂದ ಯಾವರೀತಿ ಪೂರ್ಣಗೊಳಿಸಿದಳೆಂದೂ ತಿಳಿಯುತ್ತದೆ.

ಇವಳ ತರುವಾಯ ನಮ್ಮ ಗಮನವನ್ನು ಸೆಳೆಯುವ ಮಹಿಳಾರತ್ನ ಅಕ್ಕಮಹಾದೇವಿ. ಸಾಹಿತ್ಯಾಂಬುಧಿಯ ಗರ್ಭದಲ್ಲಿ ಶ್ರೇಷ್ಠರತ್ನ. ಕಂತಿ ಕೇವಲ ಚತುರ ಕವಿತೆಗೆ ಮೊದಲನೆಯವಳಾಗಿದ್ದಳು. ಆದರೆ ಅಧ್ಯಾತ್ಮ ಮತ್ತು ಗದ್ಯ ಕವಿತ್ವ ಇವುಗಳ ಸಮ್ಮಿಳನಕ್ಕೆ ಅಕ್ಕಮಹಾದೇವಿಯೇ ಪ್ರಥಮ ಮಹಿಳಾರತ್ನ. ಸಾಂಪ್ರದಾಯಿಕ ಸಮಾಜದ ಸಂಕೋಲೆಗಳನ್ನು ಮುರಿದೊಗೆದು, ಲಗ್ನಸಂಸ್ಥೆಯನ್ನು ಅಲ್ಲಗಳೆದು, ಚೆನ್ನಮಲ್ಲಿಕಾರ್ಜುನನೆಂಬ ಲೋಕಪತಿಯನ್ನೇ ಪತಿಯಾಗಿ ವರಿಸಿ, ಅವಳು ಮಾಡಿದ ಉಗ್ರಸಾಧನೆ ಪಡೆದ ಸಿದ್ಧಿ ಅಮೋಘವಾದುದು. "ಸಾವಿಲ್ಲದ, ಕೇಡಿಲ್ಲದ, ಚೆಲುವಂಗಾನೊಲಿದೆನವ್ವ—ಈ ಸಾವ ಕೆಡುವ ಗಂಡರನೊಯ್ದು ಒಲೆಯೊಳಗಿಕ್ಕು," ಈ ವಚನದಿಂದ ಮತ್ತು "ಜಲದ ಮಂಟಪದ ಮೇಲೆ ಉರಿಯ ಚಪ್ಪರವನಿಕ್ಕಿ ಆಲಿಕಲ್ಲ ಹಸೆಯ ಹಾಸಿ ಕಾಲಿಲ್ಲದ ಹೆಂಡತಿಗೆ ತಲೆಯಿಲ್ಲದ ಗಂಡ ಬಂದು ಮದುವೆಯಾದ" ಎಂದು ಹೇಳಿದ ಇಂತಹ ಹಲವಾರು ವಚನಗಳಲ್ಲಿ ಅಧ್ಯಾತ್ಮ–ಶೃಂಗಾರದ ಅಸದೃಶವಾದ ಸ್ಥಾಯಿಭಾವವು ತನ್ನ ಎಲ್ಲ ಸಂಚಾರಿಭಾವಗಳೊಡನೆ ಬಂದಿದೆ. ಅಕ್ಕನ ಜ್ಞಾನ ಭಕ್ತಿಗಳ ಬಲದಿಂದ ಉಂಟಾದ ನಿಶ್ಚಿಂತೆ–ನಿರ್ಭೀತಿ, ಮಾನಸಿಕ ಧೈರ್ಯಗಳು ವಿಲಕ್ಷಣವಾದುವು. ಅವುಗಳಿಂದ ದೊರೆಯುವ ಸ್ಫೂರ್ತಿಯೂ ಮೇಲಾದುದು. ಅವಳ ಪ್ರಸಿದ್ಧವಾದ "ಬೆಟ್ಟದ ಮೇಲೊಂದು ಮನೆಯ ಮಾಡಿ ಮೃಗಗಳಿಗಂಜಿದಡೆಂತಯ್ಯಾ; ಸಮುದ್ರದ ತಡಿಯೊಳಗೊಂದು ಮನೆಯ ಮಾಡಿ ನೊರೆತೆರೆಗಳಿಗಂಜಿದಡೆಂತಯ್ಯಾ; ಸಂತೆಯೊಳಗೊಂದ ಮನೆಯ ಮಾಡಿ ಶಬ್ದಕ್ಕೆ ನಾಚಿದಡೆಂತಯ್ಯಾ" ಎಂಬೀ ಬಗೆಯ ವಚನಗಳು ಶಕ್ತಿಶಾಲಿಯಾದ ಚಿಕ್ಕ ಭಾವಗೀತೆಯಾಗಿದ್ದು ಚಿರಂತನ ಸ್ಫೂರ್ತಿಯ ಚಿಲುಮೆಯಾಗಿದೆ. ಅದರ ಜೊತೆಗೆ "ಹಸಿವಾದೊಡೆ ಭಿಕ್ಷಾನ್ನಗಳುಂಟು. ತೃಷೆಯಾದೊಡೆ ಕೆರೆಹಳ್ಳ ಬಾವಿಗಳುಂಟು. ಶಯನಕ್ಕೆ ಹಾಳುದೇಗುಲಗಳುಂಟು. ಚನ್ನಮಲ್ಲಿಕಾರ್ಜುನಯ್ಯ ಆತ್ಮಸಂಗಾತಕ್ಕೆ ನೀನುಂಟು. ಆರೂ ಇಲ್ಲದವಳೆಂದು ಅಳಲುಗೊಳಬೇಡ ಕಂಡೆಯಾ . . . ಏನು ಮಾಡಿದರೆಯೂ ನಾನಂಜುವಳಲ್ಲ. ತರಗೆಲೆಯ ಮೇಲಿದ್ದು ನಾಸಿಹೆನು. ಸುರಗಿಯ ಮೇಲೊರಗಿ ನಾಸಿಹೆನು . . . ." ಹೀಗೆ ಹೇಳಿರುವಳಲ್ಲದೆ ಭಗವಂತನು ಭಕ್ತರಿಗೆ ಕೊಡುವ ತೊಂದರೆಗಳೂ ಹಿತಕರವಾದುವು ಎಂದು ಹೀಗೆ. ಹೇಳಿದ್ದಾಳೆ—"ಕಿಡಿಕಿಡಿ ಕೆದರಿದಡೆ ಎನಗೆ ಹಸಿವು ತೃಷೆ ಅಡಗಿತೆಂಬೆನು. ಮುಗಿಲು ಹರಿದು ಬಿದ್ದರೆ ಎನಗೆ ಮಜ್ಜನಕ್ಕೆರೆದರೆಂಬೆನು. ಗಿರಿ ಮೇಲೆ ಬಿದ್ದರೆ ಎನಗೆ ಪುಷ್ಪವೆಂಬೆನು.

ಚೆನ್ನಮಲ್ಲಿಕಾರ್ಜುನಯ್ಯ ಶಿರಹರಿದು ಬಿದ್ದರೆ ಪ್ರಾಣನಿಮಗರ್ಪಿತವೆಂಬೆನು." ಈ ವಚನಗಳಲ್ಲಿ ಅವಳ ಅದ್ಭುತ ಧೈರ್ಯವನ್ನೂ ಆಧ್ಯಾತ್ಮ ಭಾವವನ್ನೂ ಮನಗಾಣಬಹುದು.

ಹೀಗೆ ವ್ಯಕ್ತಿ ವೈಶಿಷ್ಟ್ಯದಿಂದಲೂ, ವಚನ ಮಹಿಮೆಯಿಂದಲೂ, ಮೇಲಾದ ಶಿವಶರಣೆಯೆಂದು ಸಾಹಿತ್ಯಾಂಬರದಲ್ಲಿ ರಾರಾಜಿಸಿದ ಉಜ್ವಲತಾರೆ ಅಕ್ಕಮಹಾದೇವಿ. ಇವಳಿಂದ, ಇವಳ ಕೃತಿಗಳಿಂದ ಆದುದು ಕೇವಲ ಅರಮನೆ– ನೆರಮನೆಗಳ ಉದ್ಧಾರವಲ್ಲ; ಇಡಿಯ ಮಾನವಕುಲದ ಉದ್ಧಾರ! ಅಕ್ಕಮಹಾದೇವಿ ಒಂದು ಜೀವ, ಒಂದು ದೇಹ ಎಂದು ಭಾವಿಸಿದರೆ ಅದು ನಮ್ಮ ಸಣ್ಣ ಭಾವನೆಯಾಗುತ್ತದೆ. ಅನುಭವಿಗಳ ದೊಡ್ಡ ಭಾವನೆಗಳಲ್ಲಿ ಹೇಳುವುದಾದರೆ ಆ ಜೀವ ಕೇವಲ ಜೀವವಲ್ಲ, ಜ್ಯೋತಿ ಎನ್ನಬೇಕು; ಆ ದೇಹ ಕೇವಲ ದೇಹವಲ್ಲ–ಹಣತೆಯೆನ್ನಬೇಕು. ಮಹಾದೇವಿಯಂತಹ ಅಕ್ಕ ಅವಳ ಸಮಕಾಲಿಕ ವ್ಯಕ್ತಿಗಳಿಗೆ ನಿಜವಾದ ಅಕ್ಕನಾಗಿ ಬಾಳಿದಳು, ಇವಳ ಬಾಳುವೆಯ ಬೆಳಕಿನಲ್ಲಿ ಅದೆಷ್ಟು ಜನ ಅಂದಿನ ತಂಗಿಯರು ತಮ್ಮ ದಾರಿಯನ್ನು ತಾವು ಕಂಡುಕೊಂಡಿಲ್ಲ! ಈ ಹೊತ್ತು ಧರ್ಮ, ಮತ, ತತ್ತ್ವ, ನೀತಿ, ಆಧ್ಯಾತ್ಮಿಕ ಅನುಭಾವ ಇವುಗಳ ಪುನರ್ಯೋಜನೆಯಲ್ಲಿ ದಾರಿಗೆಟ್ಟ ಕನ್ನಡಜನ ಮತ್ತೆ ಇಂತಹ ಅಕ್ಕಂದಿರ ಹುಟ್ಟಿಗಾಗಿ ಕಾದಿದೆಯೆಂದು ಹೇಳಿದರೆ ಎಲ್ಲರೂ ಒಪ್ಪತಕ್ಕ ಮಾತು.

ಈಕೆಯ ತರುವಾಯ ಗೃಹಿಣಿಯರಿಗೆ ಆದರ್ಶವೆನಿಸಿದ 'ಹದಿಬದೆಯ ಧರ್ಮ'ದ ಕರ್ತೃ,– ಸಂಚಿಯ ಹೊನ್ನಮ್ಮ ನಮ್ಮ ದೃಷ್ಟಿಗೆ ಗೋಚರಳಾಗುತ್ತಾಳೆ. ಈಕೆ ಚಿಕ್ಕದೇವರಾಜನ ಅಂತಃಪುರದಲ್ಲಿ ಸಂಚಿಯ ಊಳಿಗದಲ್ಲಿದ್ದವಳು. ಈಕೆಯ ಪಾಂಡಿತ್ಯವನ್ನು ಗ್ರಹಿಸಿದ ರಾಜ ತನ್ನ ಅರಸಿಗೆ ಈಕೆಯಿಂದ ಕಾವ್ಯವನ್ನು ಬರೆಯಿಸುವುದಾಗಿ ಹೇಳಿದನಂತೆ. ಅದರಂತೆ ರಾಣಿಯ ಆಜ್ಞೆಯ ಮೇರೆಗೆ ತಾನು ಈ ಗ್ರಂಥವನ್ನು ರಚಿಸಿರುವುದಾಗಿ ಹೇಳಿದ್ದಾಳೆ. ಈ ಗ್ರಂಥವನ್ನು ಬರೆಯಲು ವ್ಯಾಸಂಗಬಲದಿಂದ ಅರ್ಹತೆಪಡೆದಳೋ, ಅಂಥ ಜೀವನವನ್ನು ನಡೆಸಿದಳೋ ಎಂಬುದು ಸ್ಪಷ್ಟವಾಗಿಲ್ಲ. ಆದರೂ "ಹದಿಬದೆಯ ಧರ್ಮ" ಎಂದು ಸತೀಧರ್ಮವನ್ನು ಬೋಧಿಸುವ ಈ ಗ್ರಂಥ ಕನ್ನಡಕ್ಕೆ ಹೊಚ್ಚ ಹೊಸದು. "ಪದಿನೆಂಟು ಬಣ್ಣನೆಯೆಂದು ಬವಣಿಗೊಂಡು ಪದಗೆಟ್ಟು ಬಯಲ ಬಣ್ಣಿಸದೆ, ಮುದದೊಡನೆ ಇಹಪರ ಏಳ್ಗೆವಡೆಯೆ ಹದಿಬದೆಯ ಧರ್ಮವನ ಬಣ್ಣಿಪೆನು" ಎಂದು ಧೈರ್ಯವಾಗಿ ಹೇಳಿದ್ದಾಳೆ. ಇವಳ ಕೆಲವು ಅಭಿಪ್ರಾಯಗಳು ಈಗಿನ ಕಾಲದ ಕೆಲವರಿಗೆ ಸರಿದೋರದೇ ಇದ್ದರೂ ಇರಬಹುದು. ಆದರೂ "ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ: ಪೆಣ್ಣಲ್ಲವೆ ಪೊರೆದವಳು; ಪೆಣ್ಣು ಪೆಣ್ಣೆಂದು ಏತಕೆ ಬೀಳುಗಳೆವರು ಕಣ್ಣು ಕಾಣದ ಗಾವಿಲರು" ಎಂದು ನುಡಿದ ಹೊನ್ನಮ್ಮ ಹೆಣ್ಣುಜನ್ಮದ ಉತ್ಕೃಷ್ಟ ನ್ಯಾಯವಾದಿ. ಇದರಂತೆ "ಕುವರನಾದೊಡೆ ಬಂದ ಗುಣವೇನು ಅದರಿಂದೆ ಕುವರಿಯಾದೊಡೆ ಬಂದ ಕುಂದೇನು" ಎಂಬ ರೂಢಿ ವಿರುದ್ಧವಾದ ಹೊಸ ಮಾತುಗಳನ್ನೂ ಹೇಳಿದ್ದಾಳೆ. ಅಂತೂ ಈಕೆ ಸುಲಲಿತವಾದ ಮಾತಿನಲ್ಲಿ ಹಲವು ನೀತಿಗಳನ್ನು ಹೇಳಿರುವ ರೀತಿ ನೋಡಿದರೆ ಎಂತಹವರೂ ಮುಗ್ಧರಾಗುತ್ತಾರೆ–'ಹದಿಬದೆಯ ಧರ್ಮ'ದ ಶೈಲಿ ತಿರುಮಲಾರ್ಯ–ಸಿಂಗಾರ್ಯರ ಪ್ರಭಾವದಿಂದಲೂ, ಹೊನ್ನಮ್ಮನ ಸ್ವಂತ ಸತ್ವದಿಂದಲೂ ಮಾದರಿಯ ಅಚ್ಚಗನ್ನಡವಾಗಿದೆ; "ಎಲ್ಲರುಂ ಅರಿವಂತೆ ಎಳ ಮಾತುಗಳಿಂದ" ಹೇಳಿದ ಸೊಲ್ಲಾಗಿದೆ. "ಈಕೆಯ ಗ್ರಂಥ ಓದಲು ಸುಲಭವಾಗಿದ್ದರೂ ಮರೆಯಲು ಸುಲಭವಲ್ಲ" ಎಂದು ಈಕೆಯ ಗ್ರಂಥವನ್ನು ಸಂಗ್ರಹ ಮಾಡಿದ

ಶ್ರೀಮತಿ ಡಿ. ಚಂಪಾಬಾಯಿಯವರು ಹೇಳಿದ ಮೆಚ್ಚಿಗೆಯ ಮಾತು ಸತ್ಯವಾಗಿದೆ. ಹೊನ್ನಮ್ಮ ನೀಡಿದ ಈ ಗೃಹಿಣಿಯರ ಕೈಪಿಡಿ ಕನ್ನಡ ಸಾಹಿತ್ಯಕ್ಕೆ ಚಿರವಾದ ತೊಡುಗೆ ಎಂದು ನಿಸ್ಸಂದೇಹವಾಗಿ ಹೇಳಬಹುದು. ಒಟ್ಟಿನಲ್ಲಿ ಹೊನ್ನಮ್ಮನ "ಹದಿಬದೆಯ ಧರ್ಮ" ಒಂದು ಚೆಲುವಾದ ತಿಳಿಗನ್ನಡದ ಲಲಿತ ಗ್ರಂಥ; ಸರ್ವ ಜನಗ್ರಾಹ್ಯವಾದ ಹೊತ್ತಿಗೆ.

ಸಂಚಿಯ ಹೊನ್ನಮ್ಮನ ತರುವಾಯ ಸ್ವಲ್ಪ ಮುಂದಿನ ಕಾಲದಲ್ಲಿ ಆಗಿಹೋದ ಇನ್ನೊಬ್ಬ ಕವಯಿತ್ರಿಯೆಂದರೆ ಹೆಳವನ ಕಟ್ಟೆ ಗಿರಿಯಮ್ಮ ಎಂಬುವಳು. ಹೊನ್ನಮ್ಮ ತನ್ನಲ್ಲಿದ್ದ ಶಕ್ತಿಯನ್ನು ಗುರು ಸಹಾಯದಿಂದ ಸಾಧನೆಮಾಡಿ ಬೆಳೆಸಿಕೊಂಡರೆ ಈ ಗಿರಿಯಮ್ಮ ದೇವೋನ್ಮಾದದಲ್ಲಿ ಹುಟ್ಟಿ ಬೆಳೆದು ಆವೇಶಬಲದಿಂದ ತನ್ನ ಕೃತಿಗಳನ್ನು ರಚಿಸಿದಳೆಂದು ಸಾಹಿತ್ಯ ಚರಿತ್ರೆಯಿಂದ ತಿಳಿದು ಬರುತ್ತದೆ. ವಿವಾಹಿತೆಯಾದರೂ, ವೈರಾಗ್ಯಶೀಲಳಾಗಿ ಕೃಷ್ಣಭಕ್ತಿಯಲ್ಲಿ ತಲ್ಲೀನಳಾಗಿ ಅವಳು ಬಾಳಿದಳು; ಹಲವು ಹವಾಡಗಳನ್ನೂ ಮಾಡಿದಳೆಂದು ಖ್ಯಾತಿಯಿದೆ. ಚಂದ್ರಹಾಸನ ಕಥೆ, ಸೀತಾ ಕಲ್ಯಾಣ, ಮುಂತಾದುವು ಇವಳ ಕೃತಿಗಳು. ಇವಳ ಸ್ಥಾನವನ್ನು ನಿರ್ಣಯಿಸುವುದಾದರೆ ಇವಳು ಸಾಹಿತ್ಯ ಕ್ಷೇತ್ರದಲ್ಲಿ ಮುಟ್ಟಿದ್ದ ನೆಲೆ ಅತ್ಯಂತ ಉನ್ನತವಾದುದು ಎಂದು ಹೇಳಬಹುದು. ಇಲ್ಲಿಗಾಗಲೇ ಹದಿನೆಂಟನೆಯ ಶತಮಾನದ ಕೊನೆಯ ಭಾಗಕ್ಕೆ ಬಂದಂತಾಯಿತು.

ಕನ್ನಡ ಸಾಹಿತ್ಯ ಚರಿತ್ರೆಯಲ್ಲಿ, ಈಗ ಉದಹರಿಸಿದ ಹೆಸರುಗಳಷ್ಟೇ ಮಹಿಳೆಯರು ಸಾಹಿತ್ಯಕ್ಕೆ ಸೇವೆ ಸಲ್ಲಿಸಿದ್ದಾರೆಂದು ಸಂಕುಚಿತ ಭಾವನೆಯಿಂದ ಹೇಳಿದರೆ ಅದು ತಪ್ಪಾದೀತು. ಈ ಮಹಿಳಾಮಣಿಗಳ ಮಾಲೆಯಲ್ಲಿ ಇನ್ನೂ ಹಲವಾರು ಸಣ್ಣಪುಟ್ಟ ಅಣಿ ಮುತ್ತುಗಳೂ ಶೋಭಿಸಿವೆ.

ಇನ್ನು ಆಧುನಿಕ ಯುಗ; ಸಾರ್ವಜನಿಕ ಯುಗದ ವಿಚಾರವನ್ನು ತೆಗೆದು ಕೊಳ್ಳೋಣ. ಈವರೆಗೂ ಕೇವಲ ಕಾವ್ಯಕನ್ನಿಕೆಯರಾಗಿಯೇ ಮೆರೆದಿದ್ದರು ಮಹಿಳೆಯರು. ಆದರೆ ಈ ಸ್ವತಂತ್ರ ಯುಗದಲ್ಲಿ ಸಾಹಿತ್ಯದ ನಾನಾಮುಖಗಳಾದ ಕಥೆ, ಕಾದಂಬರಿ, ಪ್ರಹಸನ, ಮುಂತಾದ ಸಾಹಿತ್ಯ ಕ್ಷೇತ್ರಗಳಲ್ಲಿಯೂ ಮಹಿಳೆಯರು ದುಡಿದು ತಮ್ಮ ಪಾತ್ರಗಳನ್ನು ಬೆಳಗಿದ್ದಾರೆ. ಈ ಸಂದರ್ಭದಲ್ಲಿ ನಮ್ಮ ಹಲಕೆಲವು ಅಕ್ಕ ತಂಗಿಯರನ್ನು ಸ್ಮರಿಸುವುದು ಅತ್ಯಗತ್ಯ. ಸಾಹಿತ್ಯ ಸಂಗೀತಗಳಲ್ಲಿ ಪರಿಣತರಾದ ತಿರುಮಲೆ ರಾಜಮ್ಮ, ಒಳ್ಳೆಯ ಕಥೆ–ಕಾದಂಬರಿಕಾರರೆಂದು ಪ್ರಸಿದ್ಧರಾದ ಉಷಾದೇವಿ, ತ್ರಿವೇಣಿ, ಅನುಪಮಾ, ಉತ್ತಮ ಸಂಗ್ರಹಕಾರರೆಂದು ಖ್ಯಾತಿಹೊಂದಿದ ಡಿ. ಚಂಪಾಬಾಯಿಯವರು, ಶ್ರೇಷ್ಠ ಅನುವಾದಕರೆಂದು ಪ್ರಖ್ಯಾತರಾದ ಸಾವಿತ್ರಮ್ಮ ಈ ಮುಂತಾದವರ ಕೃತಿಗಳು ಎಲ್ಲ ಜನಮನವನ್ನು ಆಕರ್ಷಿಸಿವೆ. ಇವರ ಜೊತೆಗೆ ಸಾಹಿತ್ಯ ಕ್ಷೇತ್ರದಲ್ಲಿ ಸತತವಾಗಿ ದುಡಿಯುತ್ತಿರುವ ಆರ್. ಕಲ್ಯಾಣಮ್ಮ, ಎಂ. ಆರ್. ಲಕ್ಷಮ್ಮ, ಜಯದೇವಿ ತಾಯಿ ಲಿಗಾಡೆ, ಜಯಲಕ್ಷ್ಮಿ ಆರ್. ಶ್ರೀನಿವಾಸನ್ ಇವರನ್ನು ಈ ಸಂದರ್ಭದಲ್ಲಿ ಸ್ಮರಿಸಬೇಕು, ಆದರೆ ಹೀಗೆ ಹೆಸರಿಸುತ್ತಾ ಹೋದರೆ ಈ ಪಟ್ಟಿಗೆ ಕೊನೆಮೊದಲಿಲ್ಲವಾಗುತ್ತದೆ. ಆದರೂ ಇಷ್ಟುಮಾತ್ರ ಹೇಳಬಹುದು–ಇವರು ನಮ್ಮ ಸಾಹಿತ್ಯ ಮಾತೆಗೆ ತಮ್ಮ ಸೇವೆಯ ಮೂಲಕ ದಿವ್ಯ ಕಾಣಿಕೆಯನ್ನು ಅರ್ಪಿಸಿದ್ದಾರೆ.

ಇಷ್ಟಾದರೂ ಕನ್ನಡ ಸಾಹಿತ್ಯಕ್ಕೆ ಸ್ತ್ರೀಯರಿಂದ ಒದಗಬೇಕಾದಷ್ಟು ಸೇವೆ ತೃಪ್ತಿಕರವಾಗಿಲ್ಲವೆಂದು ಹೇಳಲು ತುಂಬ ವಿಷಾದವೆನಿಸುತ್ತದೆ. ಪುರುಷರಿಂದ ಎಷ್ಟು ಸೇವಾಕಾರ್ಯ ನಡೆಯುತ್ತಿದೆಯೋ ಅಷ್ಟು ಸ್ತ್ರೀಯರಿಂದ ನಡೆಯುತ್ತಿಲ್ಲ. ಇದಕ್ಕೆ ಸ್ತ್ರೀ ಹುಟ್ಟಿನಿಂದಲೇ ಅಬಲೆಯೆಂದೂ, ಅಸ್ವಂತಂತ್ರಳೆಂದೂ ಹೇಳುವ ಒಂದು ಅಡ್ಡಮಾತು ನಮಗೆ ಅಡ್ಡಿಯಾಗಿ ಬರುತ್ತದೆ. ಇಂತಹ ಸಮಯದಲ್ಲಿ ವೇದೋಪನಿಷತ್ತುಗಳು ನಮ್ಮ ಸಹಾಯಕ್ಕೆ ಬರುತ್ತವೆ. ವೇದಗಳಲ್ಲಿ 'ಮಾತೃದೇವೋಭವ' ಎಂದು ಸ್ತ್ರೀಗೇ ಮೊದಲನೆಯ ಸ್ಥಾನ. ಇಷ್ಟೇಕೆ? ವಿದ್ಯಾಧಿದೇವತೆಯಾದ ಸರಸ್ವತಿಯಾದರೂ ನಮ್ಮ ಗುಂಪಿಗೇ ಸೇರಿದವಳಲ್ಲವೇ? ಸ್ತ್ರೀ ಕೇವಲ ಅಬಲೆಯಲ್ಲವೆಂದೂ ಸಮಯ ಬಂದರೆ ಅವಳು ಪ್ರಬಲೆಯೂ ಆಗಬಲ್ಲಳೆಂಬ ವಿಷಯವನ್ನು ತಿಳಿಸುವ ಎಷ್ಟೋ ಅಂಶಗಳು ಚರಿತ್ರೆಯಿಂದ ತಿಳಿದು ಬರುತ್ತವೆ. ಹೀಗಿರುವಾಗ ಸ್ತ್ರೀ ತಾನು ಪುರುಷನೊಡನೆ ಸರಿಸಮನಾಗಿ ನಿಂತು ಕಾರ್ಯಪೂರ್ಣತೆಗಾಗಿ ಹೆಣಗಲು ಅಸಮರ್ಥಳು ಎಂದು ಭಾವಿಸಿದರೆ ಅದು ದೋಷವಾದೀತು.

ಕೆಲವು ಅಂಶಗಳನ್ನು ವ್ಯಕ್ತಪಡಿಸಲು ಪುರುಷಪ್ರಯತ್ನಕ್ಕಿಂತಲೂ ಸ್ತ್ರೀ ಪ್ರಯತ್ನವೇ ಸಮಂಜಸವಾಗಿ ತೋರುತ್ತದೆ. ಉದಾಹರಣೆಗಾಗಿ ಕಾದಂಬರಿಗಳಲ್ಲಿ ಯಾವುದಾದರೂ ಒಂದು ಹೆಣ್ಣಿನ ಪಾತ್ರವನ್ನು ನಿರ್ಮಿಸಬೇಕಾದಲ್ಲಿ, ಆ ಪಾತ್ರದ ಗುಣದೋಷ ಅನುಭವ, ಇವುಗಳನ್ನು ಸರಿಯಾದ ರೀತಿಯಲ್ಲಿ ಚಿತ್ರಿಸುವ ಶಕ್ತಿ, ಕುಶಲತೆ ಪುರುಷನಿಗಿಂತಲೂ ಸ್ತ್ರೀಯಲ್ಲೇ ಹೆಚ್ಚಾಗಿ ಎದ್ದು ಕಾಣುತ್ತದೆ. ಹೆಣ್ಣಿನ ಹೃದಯವನ್ನು, ಕಷ್ಟವನ್ನು, ಸಹಾನುಭೂತಿಯಿಂದ ನೋಡಿ ಅರಿತಿರುವ ವ್ಯಕ್ತಿಯೆಂದರೆ ಮತ್ತೊಂದು ಹೆಣ್ಣೆ. ಇಂತಹ ವಿಷಯಗಳಲ್ಲಿ ಪುರುಷ ಹೆಚ್ಚು ಯಶಸ್ವಿಯಾಗಲಾರ. ಆದ್ದರಿಂದ ಹೆಣ್ಣಿನ ಜಟಿಲ ಸಮಸ್ಯೆಗಳನ್ನು ದೂರೀಕರಿಸುವಂತಹ ಪರಿಹಾರಗಳನ್ನೊಳಗೊಂಡ ಕಥೆಗಳೋ ಕಾದಂಬರಿಗಳೋ ನಮ್ಮಿಂದ ನಿರ್ಮಾಣವಾದರೆ ಆಗ ಅವುಗಳಿಂದ ಸಮಾಜಕ್ಕೆ ಹೆಚ್ಚು ಉಪಯೋಗವಾಗಬಲ್ಲವು.

ಇನ್ನು ಜೀವನಚರಿತ್ರೆ. ಜೀವನಚರಿತ್ರೆಗಳನ್ನೊಳಗೊಂಡ ಗ್ರಂಥಗಳು ಈಚೀಚೆಗೆ ವಿಪುಲವಾಗಿ ನಮ್ಮ ಕಣ್ಣಿಗೆ ಬೀಳುತ್ತಿವೆ. ಆದರೆ ಇವುಗಳಲ್ಲೆಲ್ಲ ವೀರಮಹಿಳೆಯರ, ಪ್ರಖ್ಯಾತ ತರುಣಿಯರ ಜೀವನಚರಿತ್ರೆಗಳ ಸಂಖ್ಯೆ ಅತಿ ವಿರಳ. ಈ ಕಾರ್ಯವೂ ನಮ್ಮಿಂದಲೇ ಆಗಬೇಕು.

ಇದರಂತೆ ಅನ್ಯಭಾಷೆಯಲ್ಲಿ ದೊರೆಯುವ ಉತ್ತಮ ಲೇಖಕ ಲೇಖಕಿಯರ ಕೃತಿಗಳ ಅನುವಾದವೂ ನಮ್ಮಿಂದ ಆಗಬೇಕು. ಈ ಎಲ್ಲ ಸಾಹಿತ್ಯಕ್ಷೇತ್ರಗಳಲ್ಲಿ ಮಹಿಳೆ ತನ್ನ ಅಲ್ಪಸ್ವಲ್ಪ ಸೇವೆಯನ್ನು ಸಲ್ಲಿಸುತ್ತ ಮುಂದರಿದಿದ್ದಾಳೆ. ಆದರೆ ವಿಮರ್ಶಾಕ್ಷೇತ್ರದಲ್ಲಿ ಮಾತ್ರ ಇನ್ನು ಹಿಂದೇ ಉಳಿದಿದ್ದಾಳೆ. ಸ್ತ್ರೀ ಸಹಜವಾಗಿ ಸೂಕ್ಷ್ಮಬುದ್ಧಿಯುಳ್ಳವಳೆಂದೂ, ಹೆಚ್ಚು ಗ್ರಾಹಕಶಕ್ತಿಯುಳ್ಳವಳೆಂದೂ ಹೇಳುವ ಒಂದು ಜನಸಮ್ಮತವಾದ ಪ್ರತೀತಿಯಿದೆ. ಇದು ದಿಟವಾಗಬೇಕು.

ವಿಮರ್ಶಾತ್ಮಕವಾದ ಲೇಖನಗಳು ಬೆರಳಿನಿಂದ ಎಣಿಸಹೋದರೂ ಸಿಗದೇಹೋಗುವಷ್ಟು ಅಲ್ಪಸಂಖ್ಯೆಯಲ್ಲಿದೆ ನಮ್ಮ ಮಹಿಳಾ ರಾಜ್ಯದಲ್ಲಿ. ಮುಂದಿನ ಸಾಹಿತ್ಯದಲ್ಲಿ ಸಮನ್ವಯ, ಸರ್ವೋದಯ, ಪೂರ್ಣದೃಷ್ಟಿಗಳ ಸಮ್ಮಿಲನವು ರೂಪತಾಳಬೇಕೆಂದು ಶ್ರೀ ಕೆ. ವಿ. ಪುಟ್ಟಪ್ಪನವರು ಹೇಳಿದ್ದಾರೆ. ಇದಕ್ಕಾಗಿ ಎಲ್ಲ ಜನ ಉತ್ತಮ ಕೃತಿಗಳ ನಿರ್ಮಾ

ಣದಿಂದ, ಉತ್ತಮ ವಿಮರ್ಶನೆಯಿಂದ, ಉತ್ತಮ ಕಾವ್ಯವಾಚನದಿಂದ ಲೋಕದ ತಿಳಿವನ್ನೂ, ಜನತೆಯ ರುಚಿಯನ್ನು ಜನಾಂಗದ ಗುರಿಯನ್ನೂ ಸರಿಪಡಿಸಬೇಕು; ತಿದ್ದಬೇಕು; ಮೇಲಕ್ಕೆ ಎತ್ತಬೇಕು. ಇದು ಕೇವಲ ಪುರುಷರಾಜ್ಯಕ್ಕೆ ಸಂಬಂಧಿಸಿದ ವಿಷಯವಲ್ಲ; ಮಹಿಳಾ ರಾಜ್ಯದಲ್ಲೂ ಈ ಪರಿವರ್ತನೆ ಮೈದೋರಬೇಕು.

ಈಗ ಇಂದಿನ ಪರಿಸ್ಥಿತಿಯಲ್ಲಿ ಜನಾಂಗವು ಅಖಂಡ ಶಾಂತಿಗಾಗಿ ದುಡಿಯುತ್ತ ತನ್ನ ಸರ್ವತೋಮುಖವಾದ ಪ್ರಯತ್ನಗಳನ್ನು ಮಾಡುತ್ತಿದೆ. ಇಂತಹ ಪ್ರಸಂಗದಲ್ಲಿ ಶಾಂತಿಸಾಧನೆಗೆಂದೇ ಕೃತಿನಿರ್ಮಾಣವಾಗುವುದು ಮೇಲು ; ಎಂದರೆ ಸಾಹಿತಿ ತನ್ನದಲ್ಲದ ಹೊರಗಿನ ಪ್ರಯೋಜನಕ್ಕೆ ದುಡಿಯಬೇಕಾಗುವುದು. ಶಕ್ಯವಾದರೆ ಇಂತಹ ಉಪಯುಕ್ತವಾದ ಗ್ರಂಥಗಳ ಬೆಳಕು ಮೂಡಲಿ; ಇಲ್ಲವಾದರೆ ಇಂತಹ ವಿರಸವಿರೋಧಗಳನ್ನು ಬೆಳೆಸುವಂತಹ ಗ್ರಂಥಗಳು ಮಾತ್ರ ಬೇಡ. ಈ ಹೊತ್ತಿನ ಲೋಕಜೀವನದ ಒತ್ತಡದಲ್ಲಿ ನೂರು ಕೂಗುಗಳು—ಯಾವ ರೀತಿ–ನೀತಿ ಶಾಂತಿಸಾಧಕವೋ, ಯಾವ ರೀತಿ ನೀತಿ ಜನಾಂಗದ ವೈಜ್ಞಾನಿಕಸಂಪತ್ತನ್ನು ಹೆಚ್ಚಿಸುತ್ತದೆಯೋ ಅಂತಹ ಕೃತಿಗಳು ತಲೆದೋರಬೇಕು.

ಕೊನೆಯದಾಗಿ ಒಂದು ಮಾತು. ಇಂತಹ ಸಂದರ್ಭದಲ್ಲಿ ಪುನಃ ಈ ಆದರ್ಶ, ಧರ್ಮಪಕ್ಷಪಾತ, ನಮ್ಮ ಕೃತಿಗಳಲ್ಲಿ ಬೆಳೆಯಬಲ್ಲುವಾದರೆ ನಮ್ಮ ಸಂಪ್ರದಾಯ ಚರಿತಾರ್ಥವಾದೀತು. ಶುದ್ಧ ಸಾಹಿತ್ಯ ಕೃತಿಗಳು ಹುಟ್ಟದಿದ್ದರೆ ಬಿಡಲಿ, ಯುದ್ಧದ ಹಾನಿಯನ್ನು ಕುರಿತೋ ಅಥವಾ ಲೋಕಶಾಂತಿಯ ಪ್ರಯೋಜನವನ್ನು ಕುರಿತೋ ತಿಳುವಳಿಕೆಯ ಗ್ರಂಥಗಳು ನಮ್ಮಲ್ಲಿ ಹುಟ್ಟಬೇಕು; ಬೆಳೆಯಬೇಕು. ಮನಸ್ಸು ಲೋಕಹಿತಕ್ಕಾಗಿ ಮೃದುವಾಗಿ ಬಲಿಯಬೇಕು.

ಇಂದಿನ ಸ್ವಂತಂತ್ರ ಭಾರತವನ್ನು ಸರ್ವತೋಮುಖವಾಗಿ ಅಭಿವೃದ್ಧಿಗೊಳಿಸಲು ಕರ್ನಾಟಕವು ಒಂದು ವಿಶೇಷ ಪಾತ್ರವನ್ನು ವಹಿಸಬೇಕು. ಈ ಸಂದರ್ಭದಲ್ಲಿ ಕನ್ನಡ ಮಹಿಳೆಯರಾದ ನಾವು ನಮ್ಮ ಅಲ್ಪಸ್ವಲ್ಪ ಅಳಿಲು ಸೇವೆಯನ್ನು ಮಾಡಿ ಕೃತಾರ್ಥರಾಗಬೇಕೆಂದುದೇ ನನ್ನ ಹೆಬ್ಬಯಕೆ !

**ಸಿರಿಗನ್ನಡಂ ಗೆಲ್ಗೆ**



# 38ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ರಾಯಚೂರು




## ಮಹಿಳಾ ಗೋಷ್ಠಿಯಲ್ಲಿ
## ಶ್ರೀಮತಿ ವಿಮಲಾಬಾಯಿ ಮೇಲ್ಕೋಟೆಯವರ ಭಾಷಣ

26-12-1955

### ಸಾಹಿತ್ಯ ಮತ್ತು ಸಂಸ್ಕೃತಿ ಕ್ಷೇತ್ರಗಳಲ್ಲಿ ಸ್ತ್ರೀಯರ ಪಾತ್ರ

ಸಾಹಿತ್ಯ ಮತ್ತು ಸಂಸ್ಕೃತಿ ಬಿಂಬ ಮತ್ತು ಪ್ರತಿ ಬಿಂಬಗಳಿದ್ದಂತೆ. ಸಾಹಿತ್ಯವು ಮನುಷ್ಯನಲ್ಲಿರುವ ಸಂಸ್ಕೃತಿಯ ಮಟ್ಟವನ್ನು ಎತ್ತಿ ತೋರಿಸಿಕೊಡುವ ಕೈಪಿಡಿ. ಸಾಹಿತಿ ಸುಸಂಸ್ಕೃತ ಸಮಾಜದ ನಾಯಕ. ಅಸಂಸ್ಕೃತ ಸಮಾಜದ ರೀತಿನೀತಿಗಳನ್ನು ಪ್ರತಿ ಬಿಂಬಿಸುವ ಸಾಹಿತ್ಯವಿರುವುದಿಲ್ಲವೆಂದು ನನ್ನ ಭಾವನೆಯಲ್ಲ. ಆದರೆ ಅಸಂಸ್ಕೃತ ಸಮಾಜ ದಿಂದ ಪ್ರಪಂಚಕ್ಕೆ ಹೇಗೆ ಲಾಭವಿರುವುದಿಲ್ಲವೊ ಅಸಂಸ್ಕೃತ ಸಾಹಿತ್ಯದಿಂದಲೂ ಪ್ರಪಂಚಕ್ಕೆ ಲಾಭವಾಗದು. ಏಕೆಂದರೆ ಸಾಹಿತ್ಯ ಜೀವನದ ಪ್ರತಿಬಿಂಬ. ಜೀವನಕ್ಕೆ ಯಾವುದು ಪೋಷಕವೊ ಸಾಹಿತ್ಯಕ್ಕೂ ಅದೇ ಪೋಷಕ. ಆದುದರಿಂದ ನಮ್ಮ ಗಮನ ದಲ್ಲಿರಬೇಕಾದುದು ಸಮಾಜಕ್ಕೆ ಪೋಷಕವಾದ ಅಂಶ.

ಮಾನವನ ಚರಿತ್ರೆಯನ್ನು ನೋಡಿದರೆ ಸಂಸ್ಕೃತಿಯನ್ನು ಆತನು ಆನುವಂಶಿಕ ವಾಗಿ ತಂದ ಗುಣವಲ್ಲ. ದೇಶಕಾಲದ ಪ್ರಭಾವವಾಗಿ ಸ್ವಾಭಿರುಚಿಗೆ ತಕ್ಕಂತೆ. ಆತನು ಸಮಾಜ ಜೀವನಕ್ಕೆ ತನ್ನನ್ನು ಅಳವಡಿಸಿಕೊಂಡ ರೀತಿ ಅದು ಎಂದು ನಮಗೆ ಗೊತ್ತಾಗು ವುದು. ಸಾಮಾಜಿಕ ಜೀವನವು ನಿಕಟಗೊಂಡಂತೆ ಮನುಷ್ಯನ ಅಳವಡಣೆ ಜಟಿಲವಾಗುತ್ತ ನಡೆಯುತ್ತದೆ. ಸ್ವಾರ್ಥ ಮತ್ತು ಪರಾರ್ಥಗಳ ಸಂಘರ್ಷಣೆಯಲ್ಲಿ ಸ್ವಾರ್ಥಕ್ಕೆ ಪ್ರಾಧಾನ್ಯ ವಿದ್ದರೆ ಆಸುರೀ ಸಂಪತ್ತೆಂತಲೂ ಪರಾರ್ಥಕ್ಕೆ ಪ್ರಾಧಾನ್ಯವಿದ್ದರೆ ದೈವೀ ಸಂಪತ್ತೆಂತಲೂ ಹೇಳುವುದುಂಟು. ಏಕೆಂದರೆ ಪರಾರ್ಥದ ಮೇಲೆಯೆ ಸಮಾಜ ಜೀವನ ನಿಂತಿರುತ್ತದೆ. ಇಂಥ ಪರಾರ್ಥ ಜೀವನವನ್ನು ಬೆಳಸಿಕೊಂಡು ಬರುವ ಗುಣಗಳಿಗೆಯೆ ಸಂಸ್ಕೃತಿಯೆಂದು ಹೇಳಲಾಗುವುದು. ಸಂಸ್ಕೃತಿ ಸಾಹಿತ್ಯದ ಮೇಲೆ ನಿಂತಿದೆ. ಸಾಹಿತ್ಯ ಇಂಥ ಸಂಸ್ಕೃ ತಿಯ ವಾಹಕ.

ಮೇಲಿನ ಈ ಪೀಠಿಕೆಯನ್ನು ನೋಡಿದರೆ ಸಾಹಿತ್ಯ ಸಂಸ್ಕೃತಿಗಳಲ್ಲಿ ಭೇದವಿಲ್ಲ. ಒಂದು ಮತ್ತೊಂದರ ಪೋಷಕವೆಂದು ಅರ್ಥವಾಗುವುದು. ಉದಾಹರಣೆಗೆ: ಸಾಹಿತ್ಯದ ಗುರಿಯನ್ನು ನೃಪತುಂಗನು ತನ್ನ "ಕವಿರಾಜ ಮಾರ್ಗ"ದಲ್ಲಿ ಹೀಗೆ ಹೇಳಿದ್ದಾನೆ:—

ಪಾಪಮಿದು ಪುಣ್ಯಮಿದು ಹಿತ
ರೂಪಮಿದಹಿತಗತ ಪ್ರಕಾರಮಿದು

ದುಃಖೋಪಾತ್ತಮಿದೆಂದರಿಪುಗು
ಮಾ ಪರಮ ಕವಿ ಪ್ರಧಾನರಾ ಕಾವ್ಯಂಗಳ್

ಈ ಗುಣಗಳನ್ನು ಜೀವನದಲ್ಲಿ ಅನುಸರಿಸಿಕೊಂಡು ಬರುವುದೇ ಸಂಸ್ಕೃತಿಯ ಧರ್ಮ. ಹೀಗಾಗಿ ಸಾಹಿತ್ಯವು ಸಿದ್ಧಾಂತವಾದರೆ ಸಂಸ್ಕೃತಿ ಆಚಾರವಾಗುವುದು.

ಇಷ್ಟು ಹೇಳಿದ ಮೇಲೆ ಇನ್ನು ಈ ಕ್ಷೇತ್ರದಲ್ಲಿ ಹೆಣ್ಣುಮಕ್ಕಳ ಸ್ಥಾನವಾವುದೆಂಬುದನ್ನು ಪರ್ಯಾಲೋಚಿಸೋಣ. ಲೋಕ ಎಷ್ಟು ಮುಂದೆ ಹೋಗಿದೆಯೆಂದರೆ ಯಾವುದಾದರೊಂದು ಸಮಸ್ಯೆಯನ್ನು ಆಲೋಚಿಸುವಾಗ ಇದರಲ್ಲಿ ಗಂಡುಮಕ್ಕಳ ಭಾಗವಾವುದು ಮತ್ತು ಹೆಣ್ಣುಮಕ್ಕಳ ಭಾಗವಾವುದು ಎಂಬುದನ್ನು ವಿಂಗಡಿಸಿ ಹೇಳುವುದು ಇಬ್ಬರಿಗೂ ಅಪಕಾರವಾಗಿ ಕಂಡುಬರಬಹುದು. ಗಂಡು ಮತ್ತು ಹೆಣ್ಣು ಆಕಾರದಲ್ಲಿ ಭಿನ್ನವಾಗಿ ಕಂಡು ಬಂದರೂ ಮಾನವತೆಯ ಮೂಲಧರ್ಮದಲ್ಲಿ ಇವರಿಬ್ಬರಲ್ಲಿ ವ್ಯತ್ಯಾಸವಿಲ್ಲ. ದೇಹ ಧರ್ಮದಿಂದ ಇವರ ಕಾರ್ಯಕೌಶಲಗಳಲ್ಲಿ ಅಲ್ಪ ಸ್ವಲ್ಪ ವೈಲಕ್ಷಣ್ಯ ಕಂಡುಬಂದರೂ ಮನೋಧರ್ಮ ಅಬಾಧಿತವಾಗಿ ಒಂದೇ ಎಂಬುದನ್ನು ಎಲ್ಲರೂ ಒಪ್ಪುವರು. ಏಕೆ ಮಾರ್ದವ, ಪ್ರೇಮ, ದಯೆ, ಸಹಾನುಭೂತಿ ಇವು ಮಾತೃಧರ್ಮವೆಂದು ಹೇಳಲಾಗುವುದು. ಸಂಸ್ಕೃತಿಗೆ ಬೇಕಾದ ಮೂಲ ಗುಣಧರ್ಮಗಳಿವು. ಈ ಗುಣಧರ್ಮಗಳನ್ನನುಸರಿಸಿಯೇ ಪುರುಷರಲ್ಲಿಯೂ ಕೂಡ ಸುಸಂಸ್ಕೃತರು ಮತ್ತು ಅಸಂಸ್ಕೃತರೆಂದು ವಿಂಗಡಿಸಿ ಹೇಳಲಾಗುವುದು. ಹೀಗಿದ್ದ ಮೇಲೆ ದೈವೀಸಂಪತ್ತಿಗೆ ಸ್ತ್ರೀ ಮಾತೃಕೆಯಂದಂತಾಯಿತು. ಅವಳಿಗೆ ಸಾಹಿತ್ಯ ಮತ್ತು ಸಂಸ್ಕೃತಿಯ ಕ್ಷೇತ್ರದಲ್ಲಿ ಅಗ್ರಸ್ಥಾನವಿದೆಯೆಂಬುದಕ್ಕೆ ಸಂಶಯವೇ ಇಲ್ಲ. ಸಾಹಿತ್ಯಕ್ಕೆ ಅಧಿದೈವ ಸರಸ್ವತಿ ಆಕೆ ಹೆಣ್ಣುಮಗಳಲ್ಲದೆ ಮತ್ತೇನು? ಹೆಂಗರುಳಿಲ್ಲದೆ ಸಾಹಿತ್ಯವು ಹುಟ್ಟುವುದು ಹೇಗೆ? ಕ್ರೌಂಚ ದಂಪತಿಯ ವಿಯೋಗದಿಂದ ವಾಲ್ಮೀಕಿಯಲ್ಲಿ ಹೆಂಗರುಳು ಹುಟ್ಟದಿದ್ದರೆ ರಾಮಾಯಣವು ಹುಟ್ಟುತ್ತಿತ್ತೆ? ಲೋಕಕ್ಕೆ ಆದಿ ಕಾವ್ಯವು ಲಭಿಸುತ್ತಿತ್ತೇ? ವ್ಯಥಿತ ಹೃದಯದ ಮೂರ್ತಿಸ್ವರೂಪಳು ಸ್ತ್ರೀ. ಆದುದರಿಂದ ಕಾವ್ಯವನ್ನು ಕಾವ್ಯದೇವಿಯೆಂದು ಕರೆಯಲಾಗುತ್ತದೆ.

ಸಾಹಿತ್ಯ ಕ್ಷೇತ್ರದಲ್ಲಿ ಪ್ರಾಚೀನ ಕಾಲದಿಂದಲೂ ಹೆಣ್ಣುಮಕ್ಕಳು ದುಡಿದಿದ್ದಾರೆ. ವೈದಿಕ ಯುಗಕ್ಕೆ ಹೋದರೂ ನಾವು ಮೈತ್ರೇಯಿ, ಗಾರ್ಗೀ ಅವರ ಹೆಸರನ್ನು ಕೇಳುತ್ತೇವೆ. ಅವರ ಹೆಸರಿನಲ್ಲಿಯೇ ಋಕ್ಕುಗಳಿವೆ ಎಂದ ಮೇಲೆ ಸಾಹಿತ್ಯ ಕ್ಷೇತ್ರದಲ್ಲಿ ಪುರುಷರ ಜೊತೆಗೆ ಸ್ತ್ರೀಯರು ಎಂದಿನಿಂದಲೂ ಭಾಗವಹಿಸುತ್ತ ಬಂದಿದ್ದಾರೆಂದಂತಾಯಿತು. ಚಾರಿತ್ರ್ಯ ಯುಗಕ್ಕೆ ಬಂದರೆ ಕನ್ನಡ ದೇಶದಲ್ಲಿ ಸ್ತ್ರೀ ಲೇಖಿಕೆಯರು ಇರಲಿಲ್ಲವೆಂದು ಹೇಳುವಂತಿಲ್ಲ. ಜೈನ ಯುಗದಲ್ಲಿ ನೋಡುವುದಾದರೆ ಕಂತಿಯ ಹೆಸರು ಸುಪ್ರಸಿದ್ಧವಾಗಿಯೆ ಇದೆ. ಮಧ್ಯ ಯುಗದಲ್ಲಿಯೇ ಅಕ್ಕ ಮಹಾದೇವಿ ಕನ್ನಡ ಸಾಹಿತ್ಯಾಕಾಶದ ಧ್ರುವತಾರೆಯಾಗಿ ಮೆರೆದಿದ್ದಾಳೆ. ಈಕೆಯ ಜೊತೆಗೆ, ನೀಲಾಂಬೆ ನಾಗಲಾಂಬೆಯರೂ ಈ ಕ್ಷೇತ್ರದಲ್ಲಿ ದುಡಿದುದಕ್ಕೆ ನಿದರ್ಶನಗಳಿವೆ. ದಾಸ ಸಾಹಿತ್ಯದಲ್ಲಿ ಹೆಳವನಕಟ್ಟೆ ಗಿರಿಯಮ್ಮನಪದಗಳು. ಆ ಮೇಲೆ ಮೈಸೂರು ಅರಮನೆಯಲ್ಲಿ ಸಂಚಿ ಹೊನ್ನಮ್ಮ ಸಾಹಿತ್ಯ ಸೇವೆ ಮಾಡಿದುದು ಎಲ್ಲರಿಗೂ ಗೊತ್ತಿದ್ದ ಮಾತು. ಹದಿಬದೆಯ ಧರ್ಮ ನಾರೀಲೋಕಕ್ಕೆ ಕೀರ್ತಿತರುವ ಕೃತಿಯಾಗಿದೆ. ಆಕೆಯ ಮಾತಿನಲ್ಲಿಯೇ ಹೇಳುವುದಾದರೆ:

ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ।
ಪೆಣ್ಣಲ್ಲವೆ ಪೊರೆದವಳು॥
ಪೆಣ್ಣು ಪೆಣ್ಣೆಂದೇತಕೆ ಬೀಳುಗಳೆವರು।
ಕಣ್ಣು ಕಾಣದ ಗಾವಿಲರು॥

ಹೊಸಗನ್ನಡ ಕಾಲಕ್ಕೆ ಬಂದರೆ ಅನೇಕ ಅಕ್ಕತಂಗೆಯರು ಕನ್ನಡ ಸಾಹಿತ್ಯ ರಚನೆಯಲ್ಲಿ ಭಾಗವಹಿಸುತ್ತಿರುವುದನ್ನು ನೋಡಿ ನಾವು ಹೆಮ್ಮೆ ಪಡೆದಿರಲಾರೆವು. ಶ್ರೀಮತಿ ರಾಜಮ್ಮ ತಾತಾಚಾರ್ಯ ಅವರು ಹಿರಿಯ ಲೇಖಿಕೆಯರಲೊಬ್ಬರು. ಇವರ ತಪಸ್ವಿನಿಯನ್ನು ಓದದ ಕನ್ನಡಿಗನಿಲ್ಲ. ಕಾದಂಬರಿಯ ಕ್ಷೇತ್ರದಲ್ಲಿಯೂ ಇವರು ದುಡಿದಿದ್ದಾರೆ. ಈ ಪ್ರಸಂಗದಲ್ಲಿ ನಂಜನಗೂಡಿನ ಸತಿ ಹಿತೈಷಿಣೀ ಗ್ರಂಥಮಾಲೆಯ ಚಟವಟಿಕೆಗಳನ್ನು ನಾವು ಸ್ಮರಿಸಬಹುದು. ಅಲ್ಲಿಂದ ಮುಂದೆ ಶ್ರೀಮತಿ ಕಲ್ಯಾಣಮ್ಮನವರು ಸರಸ್ವತಿ ಪತ್ರಿಕೆಯನ್ನು ಸಂಪಾದಿಸಿ ಇಂದಿಗೂ ಕನ್ನಡಿಗರಿಗೆ ಮಾಡುತ್ತಿರುವ ಸೇವೆಯನ್ನು ಕೃತಜ್ಞತೆಯಿಂದ ನಾವು ಸ್ಮರಿಸಬೇಕು. ಇವರಲ್ಲದೆ ಅನೇಕ ತರುಣಿಯರು ಸಾಹಿತ್ಯ ಕ್ಷೇತ್ರದಲ್ಲಿ ಭಿನ್ನಭಿನ್ನ ಲೇಖನಗಳಿಂದ ಹೆಸರು ಪಡೆಯುತ್ತಿದ್ದಾರೆ. ದಿವಂಗತ ಗೌರಮ್ಮನವರು ಚಿಕ್ಕ ವಯಸ್ಸಿನಲ್ಲಿಯೇ ಸಾವಿಗೆ ತುತ್ತಾದುದು ಕನ್ನಡ ಸಣ್ಣ ಕತೆಗಳಿಗೆ ಎಂಥ ಪೆಟ್ಟು ಬಿದ್ದಿತೆಂಬುದನ್ನು ತೋರಿಸುವುದು. ಅವರು ಬದುಕಿದ್ದರೆ ಇನ್ನೂ ಎಷ್ಟೋ ಸುಂದರವಾದ ಸಣ್ಣ ಕತೆಗಳು ಬೆಳಕಿಗೆ ಬರುತ್ತಿದ್ದುವು. ಕಾದಂಬರಿ ಕ್ಷೇತ್ರದಲ್ಲಿ ತ್ರಿವೇಣಿ, ಅನುಪಮಾ, ಉಷಾ, ಶ್ಯಾಮಲಾ, ಶಾಂತಾಮಾಳವಾಡ, ಕಾತ್ಯಾಯಿನಿ, ಡಿ. ಚಂಪಕಮಾಲಾ, ಜಯದೇವಿ ತಾಯಿ ಲಿಗಾಡೆ, ಜಯಲಕ್ಷ್ಮಿ ಆರ್. ಶ್ರೀನಿವಾಸನ್—ಮುಂತಾದ ನಮ್ಮ ಅಕ್ಕ ತಂಗೆಯರ ಹೆಸರನ್ನು ನಾವು ಸ್ಮರಿಸದಿರೆವು. ನಮ್ಮ ಹೈದರಾಬಾದಿನಲ್ಲಿಯೇ ಅಧ್ಯಾಪಕಿಯರಾಗಿ ಕೆಲಸ ಮಾಡುತ್ತಿರುವ ಶ್ರೀಮತಿ ಲಲಿತಾಂಬಾ ಅವರ ಕಾದಂಬರಿ ಲೇಖನ ದಿನದಿನಕ್ಕೆ ಪ್ರಗತಿ ಪಡೆಯುತ್ತಿರುವುದು ನಮಗೆಲ್ಲ ಹೆಮ್ಮೆತರುವ ವಿಷಯವಾಗಿದೆ.

ಕನ್ನಡ ಸಾಹಿತ್ಯದ ಗಾತ್ರವನ್ನು ನೋಡಿದರೆ ಸ್ತ್ರೀಯರ ಪಾತ್ರ ಅದರಲ್ಲಿ ಸ್ವಲ್ಪೆ ಎಂದು ಖೇದದಿಂದ ಹೇಳಬೇಕಾಗುತ್ತದೆ. ನೂರು ಜನ ಗಂಡಸರು ಲೇಖಕರಾಗಿದ್ದರೆ ಒಬ್ಬ ಹೆಣ್ಣು ಮಗಳು ಲೇಖಿಕೆ ಇರುವಳೋ ಇಲ್ಲವೋ ಎನ್ನುವ ಸಂದೇಹ ಬರುತ್ತದೆ. ಕಾರಣವಿಲ್ಲದೆ ಇಲ್ಲ. ಕಾಲಗತಿಯ ಫಲವಾಗಿ ಹೆಣ್ಣು ಮಕ್ಕಳಿಗೆ ಶಿಕ್ಷಣ ವ್ಯಾಸಂಗಗಳ ಸೌಕರ್ಯಗಳಿಲ್ಲದಿದ್ದುದು ಅವರು ಹೆಚ್ಚಾಗಿ ಕೌಟುಂಬಿಕ ಜೀವನಕ್ಕೆಯೆ ತಮ್ಮನ್ನು ತೆತ್ತು ಸಾಮಾಜಿಕ ಚಟವಟಿಕೆಗಳಲ್ಲಿ ಭಾಗವಹಿಸಲು ಅವರಿಗೆ ಅವಕಾಶಗಳು ಹೇರಳವಾಗಿ ದೊರೆಯದಿದ್ದುದರಿಂದ ಗಂಡುಮಕ್ಕಳಷ್ಟು ಸಂಖ್ಯೆಯಲ್ಲಿ ಹೆಣ್ಣು ಮಕ್ಕಳು ಸಾಹಿತ್ಯವನ್ನು ಸೃಷ್ಟಿಸಲಿಲ್ಲ. ಇಷ್ಟರಿಂದ ಸಾಹಿತ್ಯ ಸೃಷ್ಟಿಯ ಯೋಗ್ಯತೆ ಅವರಿಗಿರಲಿಲ್ಲವೆಂದು ಹೇಳುವುದು ತಪ್ಪು. ಸುದೈವದಿಂದ ಇಂದು ಶಿಕ್ಷಣ ಸೌಕರ್ಯಗಳು, ಸಾಮಾಜಿಕ ಪರಿಸ್ಥಿತಿಗಳು ಉತ್ತಮಗೊಂಡಿವೆ. ಭಾವಲೋಕದಲ್ಲೆ ಬಾಳುವ ಹೆಣ್ಣು ಮಕ್ಕಳಿಗೆ ಈ ಸದವಕಾಶದಿಂದ ಹೆಚ್ಚು ಪ್ರಯೋಜನವಾಗಿ ಮುಂಬರುವ ದಿನಗಳಲ್ಲಿ ಅತ್ಯುತ್ಕೃಷ್ಟವಾದ ಸಾಹಿತ್ಯ ಅವರಿಂದ ನಿರ್ಮಿಸಲಾಗುವುದೆಂದು ಹೇಳುವಲ್ಲಿ ನನಗೇನೂ ಅಧೈರ್ಯವಾಗದು. ಪುಟ್ಟಪ್ಪನವರಂಥ,

ಜೇಂದ್ರಿಯವರಂಥ, ಮಾಸ್ತಿಯವರಂಥ ಮತ್ತು ಗುಂಡಪ್ಪನವರಂಥ ಯೋಗ್ಯತೆಯುಳ್ಳ ಕವಯಿತ್ರಿ ಕನ್ನಡದಲ್ಲಿ ಉದಿಸಿ ಬರಲಿರುವಳೆಂದು ನಾನು ಶುಭ ಶಕುನ ನುಡಿವೆನು.

ಸಂಸ್ಕೃತಿ ಪ್ರಸಾರದಲ್ಲಿ ಸ್ತ್ರೀಯರಿಗಿರುವ ಪಾತ್ರವಾವುದೆಂಬುದನ್ನು ವಿಚಾರಿಸಿದರೆ ಈ ಕ್ಷೇತ್ರದಲ್ಲೂ ಅವರಿಗೆ ಮಹತ್ವದ ಸ್ಥಾನವಿದೆಯೆಂಬುದು ಗೊತ್ತಾಗುವುದು. ಇಂಗ್ಲೀಷಿನಲ್ಲಿ ಒಂದು ಗಾದೆಯಿದೆ. ತೊಟ್ಟಿಲ ತೂಗುವ ಕೈ ಲೋಕವನ್ನಾಳುವುದು. ಈ ಮಾತಿನಿಂದ ಸಾಮಾಜಿಕ ಜೀವನದಲ್ಲಿ ಹೆಣ್ಣು ಮಕ್ಕಳಿಗಿರವ ಸ್ಥಾನವಾವುದೆಂಬುದು ಸ್ಪಷ್ಟವಿದೆ. ಎಳೆ ಮಕ್ಕಳು ತಾಯಿಯಿಂದಲೇ ಮೊದಲು ಶಿಕ್ಷಣ ಪಡೆವರು. ತಾಯಿಯ ನಡತೆ ಮಕ್ಕಳಿಗೆ ಮಾದರಿ. ಆಕೆಯ ಮಾತು ಮಕ್ಕಳಿಗೆ ವೇದ. ಅಂತೆಯೆ ತಾಯಿಯ ಅಡಿಯ ಕೆಳಗೆ ಸ್ವರ್ಗವಿದೆಯೆಂದು ನಮ್ಮ ಹಿಂದಿನ ದ್ರಷ್ಟಾರರು ಕಂಡುಹಿಡಿದಿದ್ದಾರೆ. 'ಯತ್ರ ನಾರ್ಯಸ್ತು ಪೂಜ್ಯಂತೇ ರಮಂತೇ ತತ್ರ ದೇವತಾಃ ಎಂಬ ಉಕ್ತಿಯಿಂದ ಸ್ತ್ರೀಯ ಹಿರಿಮೆ ವ್ಯಕ್ತವಾಗುವುದು ಸ್ವಭಾವದಿಂದ ಸ್ತ್ರೀಯರು ಸೇವಾಶೀಲವುಳ್ಳವರು. ಆದುದರಿಂದ ಸಮಾಜದ ಉದ್ಧರಣದಲ್ಲಿ ಅವರ ಕೈ ಮೇಲು. ಸಮಾಜ ಸೇವೆಗೆ ಆವಶ್ಯಕವಾದ ಗುಣ ಶೀಲಗಳು ಯತ್ನವಿಲ್ಲದೆ ಸ್ತ್ರೀಗೆ ನಿಸರ್ಗವಾಗಿ ಲಭಿಸಿವೆ. ಆದುದರಿಂದ ಸಂಸ್ಕೃತಿ ಪ್ರಚಾರ ಕಾರ್ಯದಲ್ಲಿ ಆಕೆಗೆ ಹೆಚ್ಚು ಶ್ರಮವಾಗುವುದಿಲ್ಲ. ಗಂಡು ಮಕ್ಕಳಿಗೆ ಈ ಕಾರ್ಯಕ್ಕಾಗಿ ಹೆಚ್ಚಿನ ಅಳವಡಣೆಯು ಆವಶ್ಯಕತೆಯಿದೆ. ಸ್ತ್ರೀಗಾದರೆ ತನ್ನ ವ್ಯಕ್ತಿತ್ವವನ್ನು ತಿಳಿಸಿಕೊಂಡು ಕೆಲಸಮಾಡುವುದು ಸಹಜವಾಗಿ ಬಂದುಬಿಟ್ಟದೆ. ಹೀಗಿರುವುದರಿಂದ ಸಂಸ್ಕೃತಿ ಕ್ಷೇತ್ರದಲ್ಲಿ ದುಡಿಯಲು ಗಂಡುಮಕ್ಕಳಿಗಿಂತ ಆಕೆಗೆ ಅರ್ಹತೆ ಹೆಚ್ಚಿದೆಯೆಂದು ನಾನು ಭಾವಿಸುವೆನು. ಬಳಲುವ ರೋಗಿಗಳ ಶುಷ್ರೂಷೆ, ಚಿಕ್ಕಮಕ್ಕಳ ಪೋಷಣೆ, ವೃದ್ಧರ ಸೇವಾಧುರೀಣತೆ ಹೆಣ್ಣು ಮಕ್ಕಳಿಗೆ ಅಧಿಗತವಾದಷ್ಟು ಗಂಡು ಮಕ್ಕಳ ಹಿಡಿತಕ್ಕೆ ಸಿಕ್ಕಿಲ್ಲ. ಇದರಿಂದಲೇ ಹೆಣ್ಣು ಮಕ್ಕಳು ಸಂಸ್ಕೃತಿಯ ಸ್ವಯಂಸೇವಕಿಯರು.

ಕಲೆಯಕ್ಷೇತ್ರದಲ್ಲಿ ಇವರು ಮಾಡಬಹುದಾದ ಕಾರ್ಯವನ್ನು ವಿಚಾರಿಸವುದಾದರೆ ಗಾಯನಕಲೆಯಲ್ಲಿ, ನೃತ್ಯಕಲೆಯಲ್ಲಿ, ಚಿತ್ರಣದಲ್ಲಿ ಮತ್ತು ಗಮಕದಲ್ಲಿ ಸ್ತ್ರೀಯರಿಗೆ ಪ್ರಶಸ್ತವಾದ ಸ್ಥಾನವಿದೆ. ಶಿಲ್ಪಕಾರ್ಯ ಹೆಚ್ಚು ಶ್ರಮದ ಮೂಲಕ ಇವರಿಂದ ನಿರ್ವಹಿಸುವುದು ಕಷ್ಟವಾದೀತು. ವಾಸ್ತುಶಿಲ್ಪಕ್ಕೆ ಈ ಮಾತು ಅನ್ವಿತವಾದರೂ ಇತರ ಶಿಲ್ಪಕಾರ್ಯದಲ್ಲಿ ಹೆಣ್ಣುಮಕ್ಕಳೇ ಮುಂದುವರಿದಿದ್ದಾರೆ. ಉದಾಹರಣೆಗೆ ವಸ್ತ್ರಕಲೆ, ರಂಗೋಲಿಕಲೆ, ಕಸೂತಿಕಲೆ, ನೆಯ್ಗೆ ಮುಂತಾದ ಕೈಗಾರಿಕೆಗಳು. ಹೆಣ್ಣುಮಗಳು ಸ್ವಭಾವದಿಂದ ಕಲಾಕುಶಲಳು. ಆದುದರಿಂದ ಈ ಎಲ್ಲ ಕಲೆಗಳನ್ನೂ ಮುಂದರಿಸಿಕೊಂಡು ಬರುವಲ್ಲಿ ಆಕೆಗೆ ಹೆಚ್ಚಿನ ಹೊಣೆಯಿದೆ. ಕಲೆ ಸಂಸ್ಕೃತಿಯ ವಿಳಿಗ್ಗೆಯೆಂದು ಹೇಳಬಹುದು. ಹೆಣ್ಣುಮಕ್ಕಳು ಮೇಲೆ ನಿರೂಪಿತವಾದ ಈ ಎಲ್ಲ ಕಲೆಗಳನ್ನೂ ಬೆಳೆಯಿಸುವುದರಲ್ಲಿ ಪಾಲುಗೊಳ್ಳುವುದು ಆವಶ್ಯಕ.

ಧರ್ಮ ಆತ್ಮವಿಕಸನದ ಕೈಪಿಡಿ. ಸ್ತ್ರೀ ನಿಸರ್ಗದಿಂದ ಧರ್ಮಚಾರಿಣಿಯಾಗಿದ್ದಾಳೆ. ಅಂತೆಯೆ ಸಮಾಜ ಜೀವನಕ್ಕೆ ಆವಶ್ಯಕವಾದ ಎಲ್ಲ ನೀತಿಗಳು ಈಕೆಯಲ್ಲಿ ಮನೆ ಮಾಡಿರುತ್ತವೆ. ಆಧ್ಯಾತ್ಮದ ಮನೋಧರ್ಮದಿಂದ ಕೂಡಿದ ಹೆಣ್ಣು ಮಗಳು ಸಂಸ್ಕೃತಿ

ಕ್ಷೇತ್ರದಲ್ಲಿ ಆದರ್ಶಳಾಗುತ್ತಾಳೆ. ಶಿಶು ಸಂಗೋಪನದಲ್ಲಿ, ಶೀಲ ಸಂವರ್ಧನದಲ್ಲಿ ಹೆಣ್ಣು ಮಗಳು ತನ್ನ ಕಾಣಿಕೆಯನ್ನು ಸಲ್ಲಿಸಲು ಹೇರಳವಾದ ಅವಕಾಶಗಳಿವೆ. ಶಿಕ್ಷಣದ ಕ್ಷೇತ್ರಕ್ಕೆ ಬಂದರೆ ಹೆಣ್ಣು ಮಗಳು ಯಶಸ್ವಿಯಾದ ಬೋಧಕಳು. ಸಾಹಿತ್ಯ ಪ್ರಚಾರದಲ್ಲೂ ಹೆಣ್ಣು ಮಕ್ಕಳು ದುಡಿಯುತ್ತಿದ್ದಾರೆ. ಇಂದಿನ ಸಾಹಿತ್ಯವನ್ನು ನಡೆಸಿಕೊಂಡು ಬರುವುದಲ್ಲೂ ಅವರು ಉತ್ತರವಾದಿಗಳಾಗಿದ್ದಾರೆ. ಸಾವಿರಾರು ಪದ ಸುಳಾದಿಗಳು ಹೆಣ್ಣು ಮಕ್ಕಳಿಗೆ ಮುಖೋದ್ಗತವಾಗಿವೆ.

ಗ್ರಾಮಜೀವನಕ್ಕೆ ಬಂದರೂ ಇಲ್ಲಿಯೂ ಹೆಣ್ಣುಮಕ್ಕಳಿಗೆ ಸೇವೆ ಸಲ್ಲಿಸಲು ಸದವಕಾಶ ಬೇಕಾದಷ್ಟಿವೆ. ಹೀಗಾಗಿ ಸಂಸ್ಕೃತಿ ಕ್ಷೇತ್ರದ ಎಲ್ಲ ಭಾಗಗಳಲ್ಲಿ ಹೆಣ್ಣುಮಕ್ಕಳು ದುಡಿಯಲು ಅವಕಾಶವಿದೆ. ಅವರು ದುಡಿಯದ ವಿನಾ ಸಮಾಜಕ್ಕೆ ಮೋಕ್ಷವಿಲ್ಲ. ನಿರಾಡಂಬರ ಜೀವಿಗಳಾಗಿ ನಿಸ್ವಾರ್ಥ ಬುದ್ಧಿಯಿಂದ ಲೋಕಜೀವನವನ್ನು ಹಸನಗೊಳಿಸುವುದೇ ಎಲ್ಲರ ಧ್ಯೇಯವಾಗಿದೆ. ಈ ಧ್ಯೇಯವನ್ನು ಸಾಧಿಸುವಲ್ಲಿ ಗಂಡುಮಕ್ಕಳ ಮೇಲಿದ್ದಷ್ಟು ಹೊಣೆಯು ಹೆಣ್ಣುಮಕ್ಕಳ ಮೇಲೆಯಿದೆ. ಆದುದರಿಂದ ಹೆಣ್ಣುಮಕ್ಕಳು ಈ ಹೊಣೆಯನ್ನು ನಿರ್ವಹಿಸಲು ಟೊಂಕ ಕಟ್ಟಬೇಕು.



---

# 38ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ರಾಯಚೂರು

## ಮಹಿಳಾ ಗೋಷ್ಠಿಯಲ್ಲಿ ಶ್ರೀಮತಿ ತ್ರಿವೇಣಿ ಅವರ ಭಾಷಣ
## 26-12-1955

### ಸ್ತ್ರೀಯರ ಸಾಹಿತ್ಯ ಸೇವೆ ಮತ್ತು ಅವರ ಸಮಸ್ಯೆಗಳು

ಅಧ್ಯಕ್ಷಿಣಿಯರೆ, ಸೋದರ ಸೋದರಿಯರೆ,

ಇದುವರೆಗೂ ತಾವುಗಳು ಸಾಹಿತ್ಯ ಪ್ರಪಂಚದಲ್ಲಿ ಹೆಸರು ಪಡೆದಿರುವ ಶ್ರೇಷ್ಠ ಬರಹಗಾರರ ಉತ್ತಮ ಭಾಷಣಗಳನ್ನು ಕೇಳಿರುವಿರಿ. ಅವರ ನಡುವೆ ನಾನು ಮಾತನಾಡುವುದೆಂದರೆ ಅದಕ್ಕೆ ಕೊಂಚ ಧೈರ್ಯಬೇಕು. ಈ ಸಂದರ್ಭದಲ್ಲಿ ಭಾಷಣ ಮಾಡಲು ನಾನು ಹಿಂಜರಿದಾಗ "ಬರೆಯುವವರಿಗೆ ಮಾತನಾಡುವುದು ಕಷ್ಟವಿಲ್ಲ" ಎಂದು ಯಾರೋ ತಿಳಿಸಿದರು. ಆದರೆ ನನ್ನ ಮಟ್ಟಿಗೆ ಹತ್ತು ಕಾದಂಬರಿ ಬರೆಯಬಹುದು. ಆದರೆ ಒಂದು ಮಾತನಾಡುವುದು ಕಷ್ಟ ಎಂದು ತೋರುತ್ತದೆ.

ಈ ದಿನ ನಾನು ಸ್ತ್ರೀಯರ ಸಾಹಿತ್ಯ ಸೇವೆ ಮತ್ತು ಅವರ ಸಮಸ್ಯೆಗಳು ಎಂಬ ವಿಷಯದಮೇಲೆ ನನಗೆ ತಿಳಿದ ಎರಡು ಮಾತುಗಳನ್ನು ಓದಲು ಬಯಸುತ್ತೇನೆ. ಮೊದನೆಯದಾಗಿ ಸಾಹಿತ್ಯ ಪ್ರಪಂಚದಲ್ಲಿ ಮಹಿಳೆಯರ ಅಗತ್ಯವಿದೆಯೇ ಎಂಬ ಪ್ರಶ್ನೆ ಏಳಬಹುದು. ಸಾಹಿತ್ಯ ಸೇವೆಯಲ್ಲಿ ಪುರುಷರೆಷ್ಟು ತಮ್ಮ ಕರ್ತವ್ಯವನ್ನು ಸಲ್ಲಿಸುತ್ತಿದ್ದಾರೋ ಅದಕ್ಕಿಂತಲೂ ಮಿಗಿಲಾದ ಕೆಲಸವನ್ನು ಸ್ತ್ರೀಯರು ಮಾಡಬೇಕಾಗಿದೆ. ಮಹನೀಯರು ಸಾಹಿತ್ಯ ಸೇವೆ ಮಾಡಲು ಮುಂದುವರೆದಿರುವಷ್ಟು, ಅವರಿಗಿರುವ ಉತ್ಸಾಹ, ಚಟುವಟಿಕೆಗಳನ್ನು ಸ್ತ್ರೀಯರು ತೋರಿಸುತ್ತಿಲ್ಲವೆಂದು ಬಹಳ ವಿಷಾದದಿಂದ ಒಪ್ಪಿಕೊಳ್ಳಬೇಕಾಗಿದೆ. ಇದಕ್ಕೆ ಕಾರಣಗಳಿಲ್ಲದೇ ಇಲ್ಲ. ಸಾಹಿತ್ಯ ಸೇವೆ ಮಾಡಲು ವಿದ್ಯೆ ಇರಲೇಬೇಕೆಂದು ಹೇಳದಿದ್ದರೂ, ಸಾಹಿತ್ಯ ಸೇವೆಯಲ್ಲಿ ವಿದ್ಯೆಯ ಪಾತ್ರ ಬಹಳ ಪ್ರಧಾನವಾದುದು. ಹಿಂದೆ ಒಬ್ಬಿಬ್ಬರು ಕೆಲಸ ಮಾಡುತ್ತಿದ್ದ ಕಡೆ ಈಗ ಹತ್ತು ಜನ ಸ್ತ್ರೀಯರು ಕೆಲಸ ಮಾಡಲು ಮುಂದೆ ಬಂದಿದ್ದಾರೆ. ಇದು ಪ್ರಗತಿಯ ಸೂಚನೆ. ಆದರೂ ಈ ಸಾಹಿತ್ಯ ಕ್ಷೇತ್ರದಲ್ಲಿ ಸ್ತ್ರೀಯರು ಇನ್ನೂ ಮುಂದುವರಿಯಬೇಕು. ಈಗ ವಿದ್ಯಾವತಿಯರ ಸಂಖ್ಯೆ ಹೆಚ್ಚಿದೆ. ಆದರೂ ನಿರೀಕ್ಷಿಸಿದಷ್ಟು ಸೇವೆ ಮಹಿಳೆಯರಿಂದ ಆಗಿಲ್ಲ. ಇದಕ್ಕೆ ಕಾರಣಗಳಿವೆ. ಸಾಧಾರಣವಾಗಿ ಮಹಿಳೆಯರು ವಿಧ್ಯಾರ್ಥಿನಿಯರಾಗಿದ್ದಾಗ ಪರೀಕ್ಷೆಯಲ್ಲಿ ತೇರ್ಗಡೆ ಹೊಂದುವುದು ಮಾತ್ರ ಅವರ ಏಕೈಕ ಗುರಿಯಾಗಿರುತ್ತದೆ. ಪರೀಕ್ಷೆಯಲ್ಲಿ ತೇರ್ಗಡೆ ಹೊಂದಿ ವಿದ್ಯಾಭ್ಯಾಸ ಒಂದು ಮಟ್ಟಕ್ಕೆ ಬಂದಮೇಲೆ ಆಕೆ ದಾಂಪತ್ಯ ಜೀವನದಲ್ಲಿ ಕಾಲಿಡುತ್ತಾಳೆ. ಅಲ್ಲಿಂದ ಸಂಸಾರದ ಸಂಪೂರ್ಣ ಜವಾಬ್ದಾರಿ ಆಕೆಯ ಹೆಗಲಮೇಲೆ ಬೀಳುತ್ತದೆ. ಸಂಸಾರದ ತಾಪತ್ರಯಗಳು, ಮಕ್ಕಳ ಪಾಲನೆ, ಮನೆಗೆಲಸ ಇವುಗಳ ನಡುವೆ ಆಕೆಗೆ ದಿನ ಪತ್ರಿಕೆಗಳನ್ನು ಓದಲು ಸಮಯಸಿಕ್ಕಿದರೆ ಅದು ಮಹಾಭಾಗ್ಯ. ಆದರೆ ನಿಜವಾಗಿಯೂ ಬರೆಯುವ ಶಕ್ತಿ ಇದ್ದುವಾದರೆ ಸಾಹಿತ್ಯ ಸೇವೆ ಮಾಡುವ ಹಂಬಲಿದ್ದರೆ ಆಕೆ ಎಂತಹ ಕಷ್ಟಗಳನ್ನಾದರೂ ಎದುರಿಸಿಯಾಳು. ಮಕ್ಕಳ ಪಾಲನೆ, ತುಲಸೀ ಪೂಜೆ, ಗೌರಿ ಪೂಜೆಯಷ್ಟೇ ಸಾಹಿತ್ಯ ದೇವಿಯ ಆರಾಧನೆಯೂ ಪವಿತ್ರವಾದುದು, ಅಗತ್ಯವಾದುದು ಎಂಬ ಭಾವನೆ

ಅವರಲ್ಲಿ ಬೇರೂರಿದುದೇ ಆದರೆ ಆಕೆಯನ್ನು ಯಾವ ತೊಂದರೆ, ಕಷ್ಟ ಕಾರ್ಪಣ್ಯಗಳೂ ತಡೆದು ನಿಲ್ಲಿಸಲಾರವು. ಯಾವ ಸಾಹಿತ್ಯದಲ್ಲಿ ಮಹಿಳೆ ಪಾತ್ರ ವಹಿಸುವುದಿಲ್ಲವೋ ಆ ಸಾಹಿತ್ಯ ಅಪೂರ್ಣವಾದುದು. ಪುರುಷರು ಮಹಿಳೆಯರ ಸಮಸ್ಯೆ, ಜೀವನ, ಅಂತರಂಗ ವನ್ನು ವಿಧವಿಧವಾಗಿ ವರ್ಣಿಸಿ ಬರೆಯಬಹುದು. ಆದರೆ ಸ್ತ್ರೀ, ಜೀವನವನ್ನು ತನ್ನದೇ ಆದ ದೃಷ್ಟಿಯಿಂದ ನೋಡುತ್ತಾಳೆ. ಹೆಂಗಸಿನ ಮನಸ್ಸಿನ ಸೂಕ್ಷ್ಮತೆಯ ಅರಿವು ಹೆಂಗಸಿಗೆ ಮಾತ್ರವಿರುತ್ತದೆ. ಆಕೆಯ ಮನಸ್ಸು, ಬದುಕಿನ ಆದರ್ಶ, ಜೀವನವನ್ನು ನೋಡುವ ಬಗೆ ಸಂಪೂರ್ಣ ಭಿನ್ನವಾದುದು. ಆದುದರಿಂದ ಪುರುಷರು ಮಾತ್ರ ಸಾಹಿತ್ಯ ಸೇವೆ ಮಾಡಿದರೆ ನಾವು ಜೀವನದ ಒಂದು ಮುಖವನ್ನು ಮಾತ್ರ ನೋಡಬಹುದು. ಜೀವನದ ಮತ್ತೊಂದು ಕೋಮಲ, ಸುಂದರ ಮುಖವನ್ನು ಸ್ತ್ರೀಯರು ಮಾತ್ರ ಜಗತ್ತಿಗೆ ತೋರಿಸ ಬಲ್ಲರು. ಆದುದರಿಂದ ಸಾಹಿತ್ಯ ಸೇವೆಯಲ್ಲಿ ಸ್ತ್ರೀಯರು ಭಾಗವಹಿಸಿ ತಮ್ಮ ಜೀವನದ ಅನೇಕ ಸಮಸ್ಯೆಗಳನ್ನು ಸಮಾಜದ, ಪ್ರಪಂಚದ ಮುಂದಿಟ್ಟು ನಮ್ಮ ಬದುಕು ಹೀಗಿದೆ, ನಿಮಗೆ ಯಾವುದು ಅಲ್ಪವೋ ಅದು ನಮಗೆ ಮಹತ್ವಪೂರ್ಣವಾದುದು. ಯಾವುದು ನಿಮಗೆ ಆಟವೋ ಅದು ನಮಗೆ ಹೋರಾಟ ಎಂದು ತೋರಿಸಿದರೆ ಆಗ ಪುರುಷರು ಸ್ವಲ್ಪಮಟ್ಟಿ ಗಾದರೂ ಸ್ತ್ರೀಯರನ್ನು ಅರಿತು 'ಬಿಳಿ ಕಾಗೆಯನ್ನಾದರೂ ನೋಡಬಹುದು. ಆದರೆ ಹೆಂಗಸಿನ ಅಂತರಂಗವನ್ನು ಕಂಡವರಿಲ್ಲ' ಎಂಬ ನಾಣ್ನುಡಿಯನ್ನು ಮರೆಯಬಹುದು.

ಸ್ತ್ರೀಯ ಹೊರಗಿನ ಪ್ರಪಂಚ ತೀರಾ ಚಿಕ್ಕದು. ಆಕೆ ಮನೆಯಿಂದ ಹೊರಗೇ ಹೆಚ್ಚು ಕಾಲಕಳೆಯುವವಳಲ್ಲ. ಗಂಡಸಿನಂತೆ ಹತ್ತಾರು ಬಗೆಯ ವ್ಯಕ್ತಿಗಳೊಡನೆ ಬೆರೆಯುವ ಸಂಭವವಿಲ್ಲ. ಆದರೂ ಆಕೆ ತನ್ನ ಮನೆಯಲ್ಲಿಯೇ ಉಳಿದು ಸಂಸಾರದಲ್ಲಿ ಪ್ರತಿ ನಿತ್ಯವೂ ಉದ್ಭವವಾಗುವ ಹಲವಾರು ಸಮಸ್ಯೆಗಳನ್ನು ನೋಡಿ, ನಿರೀಕ್ಷಣೆಯಿಂದ, ಕಲ್ಪನೆಯಿಂದ, ತನಗೆ ತೋರುವ ಪರಿಹಾರವನ್ನು ಸೂಚಿಸಬಹುದು. ಶ್ರೀಮತಿ ಅನುಪಮಾರವರು ತಮ್ಮ 'ಸಂಕೋಲೆಯಿಂದ' ಕಾದಂಬರಿಯಲ್ಲಿ ಪತಿಯ ದುರ್ನಡತೆಯಿಂದಾಗಿ ಬಾಳನ್ನು ಬರಿದು ಮಾಡಿಕೊಂಡು, ಅವನು ತನ್ನನ್ನು ತ್ಯಜಿಸಿ ಹೋದರೂ, ಆತ ತನಗೆ ಶಾಶ್ವತವಾಗಿ ಬಿಟ್ಟು ಹೋಗಿದ್ದ ಹಲವಾರು ಖಾಯಿಲೆಗಳನ್ನು ಅನುಭವಿಸುತ್ತಾ ಆಸ್ಪತ್ರೆಯಲ್ಲಿ ಅನಾಥಳಾಗಿ ಮಲಗಿ ಇತರರ ಟೀಕೆ, ವ್ಯಂಗ್ಯ ನಗೆಗೆ ಗುರಿಯಾಗಿ ಕೇಡಿಗೆ ಬಾಳನ್ನು ನೀಗುವ ದಾರುಣ ಚಿತ್ರವನ್ನು ಕೊಟ್ಟಿದ್ದಾರೆ. ತಾಯಿಯ ಪ್ರೇಮ, ತಾಯ್ತನದ ಮೇಲೆ, ವಿಧವಾ ವಿವಾಹದ ಮೇಲೆ, ಹೆಂಗಸರ ಶೀಲದ ಮೇಲೆ ಅವಿವಾಹಿತ ತರುಣಿಯರ ಸಮಸ್ಯೆಯ ಮೇಲೆ, ಕೆಲಸ ಮಾಡುವ ಹೆಂಗಸರ ಮೇಲೆ ಪುರುಷರು ಯಾವ ರೀತಿ ಬರೆದರೂ, ತಮ್ಮ ಸಮಸ್ಯೆಗಳನ್ನು ತಮ್ಮ ದೃಷ್ಟಿಕೋನದಿಂದ ನೋಡಿ ಬರೆದರೆ ಆಗ ಮಾತ್ರ ಸ್ಪಷ್ಟವಾದ ಚಿತ್ರ ಇತರರಲ್ಲಿ ಮೂಡಲು ಸಾಧ್ಯ.

ಸಂಸಾರದಲ್ಲಿ ಗಂಡು, ಹೆಣ್ಣಿನ ಪಾತ್ರ ಎಷ್ಟು ಮುಖ್ಯವೋ ಅಂತೆಯೇ ಸಾಹಿತ್ಯ ದಲ್ಲಿಯೂ ಇಬ್ಬರದೂ ಪ್ರಧಾನ ಪಾತ್ರ. ಭಾವನೆ ಹೆಣ್ಣಿನಲ್ಲಿ ಮೂಡಿ ಆಕೆ ಕೊನೆಯ ವರೆಗೂ ಅದಕ್ಕಾಗಿ ಶ್ರಮಿಸಿದುದೇ ಆದರೆ ನಾವು ಮಹಿಳೆಯರಲ್ಲಿಯೂ ಶ್ರೀರಂಗರನ್ನೂ ಮೀರಿಸುವ ನಾಟಕಕಾರರನ್ನು, ಕಾರಂತರನ್ನು ಮೀರಿಸುವ ಕಾದಂಬರಿಕಾರರನ್ನು, ಬೇಂದ್ರೆಯವರನ್ನು ಮೀರಿಸುವ ಕವಯಿತ್ರಿಯರನ್ನು ಕಾಣಬಹುದು. ಆ ದಿನ ಬೇಗನೆ ಬರಲಿ.

---

# ಮೂವತ್ತೆಂಟನೆಯ ಕನ್ನಡ ಸಾಹಿತ್ಯ ಸಮ್ಮೇಳನ

## ರಾಯಚೂರು

### ಲೇಖಕ ಗೋಷ್ಠಿಯ ಅಧ್ಯಕ್ಷ ಭಾಷಣ

27-12-1955

ಅಧ್ಯಕ್ಷರು : ಶ್ರೀ ನಿರಂಜನ ಅವರು




### ವಿಚಾರ ಸಾಹಿತ್ಯ

**ಸಮ್ಮೇಳನಾಧ್ಯಕ್ಷ ಶ್ರೀರಂಗರೇ, ನೆರೆದಿರುವ ಲೇಖಕ ಬಾಂಧವರೇ, ಸಾಹಿತ್ಯಪ್ರಿಯರೇ,**

ಈ ಲೇಖಕಗೋಷ್ಠಿಯ ಅಧ್ಯಕ್ಷನಾಗಬೇಕೆಂಬ ಕರೆಯೋಲೆ ಬಂದಾಗ, ಕಳುಹಿದವರ ಅಜಾಗರೂಕತೆಯಿಂದ ಅಪ್ಪಿತಪ್ಪಿ ಇದು ನನ್ನೆಡೆಗೆ ಬಂದಿರಲಾರದಷ್ಟೆ—ಎಂಬ ಸಂದೇಹ ನನ್ನನ್ನು ಕ್ಷಣಕಾಲ ಕಾಡಿತು. ಆದರೆ, ಓಲೆಯಲ್ಲಿದ್ದ ಸುಸ್ಪಷ್ಟವಾದ ಒಕ್ಕಣೆ ಕಂಡು ನಾನು ಅಸಹಾಯನಾದೆ. ಬಳಿಕ, ಇದು ಕಾಲಧರ್ಮದ ಚಿಹ್ನೆ ಇರಬಹುದೆಂದು ನನ್ನನ್ನು ನಾನೇ ಸಮಾಧಾನಪಡಿಸಿದೆ. ಸಮ್ಮೇಳನಾಧ್ಯಕ್ಷರ ನೇತೃತ್ವದಲ್ಲಿ ಕಾರ್ಯಕಲಾಪಗಳೆಲ್ಲ ನಡೆಯುವಾಗ ಮರಿಸಮ್ಮೇಳನಗಳ ಆವಶ್ಯಕತೆಯಾದರೂ ಏನು?—ಎಂದು ಆಕ್ಷೇಪಿಸಿದವನು ನಾನು. ಹೀಗಿದ್ದರೂ ನನ್ನನ್ನೆ ಹಿಡಿದುತರುವ ಎದೆಗಾರಿಕೆಯನ್ನು ಸಮ್ಮೇಳನದ ಸಂಘಟಕರು ತೋರಿದ್ದಾರೆ. ಅವರು ಅಭಿನಂದನೆಗೆ ಅರ್ಹರು ಎನ್ನಲೆ?

ನನ್ನ ಆಯ್ಕೆಯನ್ನು ಕುರಿತು ನಾನೇ ಟೀಕಿಸತೊಡಗುವುದು ಆಭಾಸವೆನಿಸೀತು. ಈ ಆಯ್ಕೆಯ ಮೂಲಕ ಕನ್ನಡ ಸಾಹಿತ್ಯಲೋಕದ ಯುವ ಜನಾಂಗವನ್ನೆ ಗೌರವಿಸಲಾಗಿದೆ—ಎಂಬ ದೊಡ್ಡ ಮಾತೊಂದನ್ನು ಹೇಳಲು ಮನಸಾಗುತ್ತಿದೆ. ಹಾಗೆ ಹೇಳುವುದರಿಂದ, ನನ್ನ ಹೊಣೆಗಾರಿಕೆಯನ್ನು ನಾನು ಹೆಚ್ಚಿಸಿಕೊಂಡಂತೆ ನನಗೆ ನಾನೇ ಜವಾಬ್ದಾರನಾಗಿರುವ ಸುಲಭ ಕೆಲಸದ ಬದಲು, ಇತರರ ಪರವಾಗಿಯೂ ಮಾತನಾಡುವ ಹೊಣೆಯನ್ನು ಹೊರವುದು ಇದೆಲ್ಲಿಯ ಗೋಳು?

ಸ್ವಾಗತ ಸಮಿತಿಯವರು, 'ನಿಮ್ಮ ಭಾಷಣವನ್ನು ಬರೆದು ಕಳುಹಿಸಿ' ಎಂದು ಒಂದು ಪತ್ರದಲ್ಲಿ ಬರೆದರು. ಇನ್ನೊಂದು ಪತ್ರದಲ್ಲಿ, 'ನಿಮ್ಮ ಲೇಖನ ಬೇಗನೆ ಬರಲಿ' ಎಂದರು. ಬೇಕಾಗಿರುವುದು ಭಾಷಣವೆ ಲೇಖನವೆ ಎಂದು ನಾನು ತಬಿಬ್ಬಾಗಲಿಲ್ಲ. ಬರೆಹಗಾರನ ಭಾಷಣ, ಲೇಖನದಂತೆಯೆ ಇರಬೇಕಾದುದು ನ್ಯಾಯ ತಾನೆ?

ಅಮೆರಿಕದ ಸಾಹಿತಿ ಅರ್ನೆಸ್ಟ್ ಹೆಮಿಂಗ್‌ವೇ, 'ಬರೆಹಗಾರ ಎಂದಿಗೂ ಭಾಷಣಕಾರನಾಗಬಾರದು' ಎಂದಿದ್ದಾರೆ. ಇದನ್ನು ಒಪ್ಪಿಕೊಳ್ಳುವ ಆಸೆ. ಆದರೂ, ಲೇಖನಿ ಬರೆವುದನ್ನು ನಾಲಗೆ ಒರೆದರೆ ತಪ್ಪೇನು?—ಎಂಬ ತರ್ಕ. ಹೀಗಾಗಿ, ಬರೆಹಗಾರ

ಭಾಷಣಕಾರನಲ್ಲ ಎಂಬುದನ್ನೊಪ್ಪಿಕೊಂಡು ಆತ ಭಾಷಣವನ್ನೇನಾದರೂ ಮಾಡಿದರೆ ಅದು ಲೇಖನದಂತಿರಬೇಕು ಎಂಬ ತೀರ್ಮಾನಕ್ಕೆ ನಾನು ಬಂದಿದ್ದೇನೆ.

## ಯಾವುದು ವಿಚಾರ ಸಾಹಿತ್ಯ ?

ವಿಚಾರ ಸಾಹಿತ್ಯವನ್ನು ಕುರಿತು ಲೇಖಕ ಗೋಷ್ಠಿಯ ಅಧ್ಯಕ್ಷಭಾಷಣ ನಡೆಯ ಬೇಕೆಂದು ನನಗೆ ಮುನ್ಸೂಚನೆ ದೊರೆತಿದೆ. ಹೀಗೆ ವಿಷಯವನ್ನು ನಿರ್ದಿಷ್ಟಗೊಳಿಸಿರುವುದು, ಮಾತನಾಡುವವರ ಹಾಗೂ ಕೇಳುವವರ ಇಬ್ಬರ ಆರೋಗ್ಯದ ದೃಷ್ಟಿಯಿಂದಲೂ ಒಳ್ಳೆಯದೇ ಎಂಬುದರಲ್ಲಿ ಸಂದೇಹವಿಲ್ಲ.

ವಿಚಾರ ಸಾಹಿತ್ಯವೆಂದು ವಾಙ್ಮಯದ ಯಾವ ಅಂಗವನ್ನು ಕುರಿತು ಮಾತನಾಡಲಿ? ಪ್ರಾಚೀನ ಕನ್ನಡ ಸಾಹಿತ್ಯದ ಬೂಜು ಹಿಡಿದಿರುವ ಗ್ರಂಥಭಂಡಾರವನ್ನು ತೆರೆದು, ಅಲಂಕಾರ ಗ್ರಂಥಗಳು ವ್ಯಾಕರಣ ಗ್ರಂಥಗಳು ಗಣಿತಶಾಸ್ತ್ರ ಪಾಕಶಾಸ್ತ್ರ ಕಾಮಶಾಸ್ತ್ರ ವೈದ್ಯಶಾಸ್ತ್ರಗಳನ್ನೆತ್ತಿಕೊಳ್ಳಲೆ? ಇದನ್ನೇ ಗತವೈಭವವೆಂದು ಕರೆದು ಇಹವನ್ನೆ ಮರೆತು ಬಿಡುವುದು ಎಷ್ಟು ಸುಖಕರ! ಅಥವಾ, ಆಧುನಿಕ ಕನ್ನಡ ಸಾಹಿತ್ಯದಲ್ಲಿ ವಿಜ್ಞಾನ ತತ್ತ್ವಜ್ಞಾನ ಇತಿಹಾಸ ಮತ್ತಿತರ ವಿಷಯಗಳಮೇಲೆ ಅಲ್ಲೊಂದು ಇಲ್ಲೊಂದು ಪ್ರಕಟವಾಗಿರುವ ಪುಸ್ತಕಗಳನ್ನು ಕುರಿತು ವ್ಯಾಖ್ಯಾನ ಕೊಡಲೆ? ಅಂತಹ ಕೃತಿಗಳ ಯಾದಿಯೊಂದನ್ನು ಸಿದ್ಧಗೊಳಿಸಿ ನಿಮ್ಮ ಮುಂದಿಡಲೆ? ಇಲ್ಲವೆ, ಪಾಶ್ಚಾತ್ಯ ದಾರ್ಶನಿಕರ ವಿವಿಧ ಶಾಸ್ತ್ರ ಪಾರಂಗತರ ನಾಮಾವಳಿಯನ್ನು ಜಪಿಸಿ ಶ್ರೋತೃಗಳನ್ನು ದಂಗುಬಡಿಸುವ ವಿಫಲಯತ್ನವನ್ನು ಮಾಡಲೆ?

ಮಾರಾಟಕ್ಕಿರುವ ಕನ್ನಡ ಪುಸ್ತಕಗಳ ಕ್ರಯಪಟ್ಟಿಯನ್ನು ನಮ್ಮ ಪ್ರಕಾಶಕರು ಆಗಾಗ್ಗೆ ಸಿದ್ಧಪಡಿಸುವುದುಂಟು. ಅದರಲ್ಲಿ ಮೊದಲು ಕಾಣಿಸುವ ಶೀರ್ಷಿಕೆ— ಕಾದಂಬರಿ. ಅನಂತರ— ಸಣ್ಣಕತೆ. ಬಳಿಕ— ನಾಟಕ. ಅದಾದಮೇಲೆ— ಕವಿತೆ. ಕೊನೆಯದಾಗಿ— ಇನ್ನಿತರ. ಆ 'ಇನ್ನಿತರ'ದಲ್ಲಿ, ಹರಟೆ ಪ್ರಬಂಧಗಳ ಜತೆಗೆ ಜ್ಞಾನಸಾಹಿತ್ಯವನ್ನೂ ಕಾಣುವೆವು. ಪುಸ್ತಕಗಳ ಮೊತ್ತದಲ್ಲಿ ಆ ಸಾಹಿತ್ಯದ ಪ್ರಮಾಣ ಅತ್ಯಲ್ಪ. ಸಾಮಾನ್ಯವಾಗಿ ನಾವು ವಿಚಾರ ಸಾಹಿತ್ಯವೆನ್ನುವುದು ಆ ಅಲ್ಪ ಪ್ರಮಾಣವನ್ನೇ. ಆದರೆ, ಆ ರೀತಿಯಾದ ವರ್ಗೀಕರಣವನ್ನು ಸರಿಯೆಂದು ಒಪ್ಪಿಕೊಳ್ಳುವುದು ನನಗೆ ಇಷ್ಟವಿಲ್ಲ.

ವಿಚಾರ ಸಾಹಿತ್ಯ ಎನ್ನುವುದರ ವಿಪುಲ ಅರ್ಥವೇನು ಹಾಗಾದರೆ?

ಮನೋರಂಜನೆಯೊಂದೇ ಸೃಷ್ಟಿ ಸಾಹಿತ್ಯದ ಗುರಿ ಎಂದು ವಾದಿಸುವವರುಂಟು. ಅವರ ದೃಷ್ಟಿಯಲ್ಲಿ ಕತೆ-ಕಾದಂಬರಿ, ಕಾಲಹರಣದ ಸಾಧನಮಾತ್ರ. ದಿನದಿಂದ ದಿನಕ್ಕೆ ಹೆಚ್ಚು ಹೆಚ್ಚು ದುರ್ಬಲವಾಗುತ್ತಿರುವ ಆ ಪ್ರತಿಪಾದನೆಯನ್ನು ಒಪ್ಪದಿರುವವರಲ್ಲಿ ನಾನೊಬ್ಬ. ಸೃಷ್ಟಿ ಸಾಹಿತ್ಯದಲ್ಲೂ ವಿಚಾರದ ಅಂಶವಿದ್ದೇ ತೀರಬೇಕು, ವಿಚಾರದ ಅಂಶವೂ ಕಲೆಯ ಅಂಶವೂ ಸಮಸಮನಾಗಿರಬೇಕು— ಸಮರಸ ಹೊಂದಿರಬೇಕು, ಎನ್ನುವ ಅಭಿಪ್ರಾಯ ನನ್ನದು.

ವಿಚಾರ ಸಾಹಿತ್ಯ ಎನ್ನುವುದಕ್ಕೆ ವ್ಯಾಪಕವಾದ ಅರ್ಥವನ್ನು ಕಲ್ಪಿಸುವುದು ಅಗತ್ಯ. ವಿಚಾರಶೀಲವಾದ, ವಿಚಾರವನ್ನುಳ್ಳ, ಸಾಹಿತ್ಯವೆಲ್ಲಾ ವಿಚಾರ ಸಾಹಿತ್ಯವೇ.

## 3

## ಸತ್ಯ ಮತ್ತು ಸೌಂದರ್ಯ

ಜ್ಞಾನಿಯನ್ನು ಸತ್ಯಾನ್ವೇಷಕನೆನ್ನುತ್ತಾರೆ. ಸೌಂದರ್ಯೋಪಾಸಕನೆನ್ನಿಸಿಕೊಳ್ಳುವವನು ಕಲಾವಿದ, — ಬರೆಹಗಾರ. ಸತ್ಯಾನ್ವೇಷಣೆಯೂ ಸೌಂದರ್ಯೋಪಾಸನೆಯೂ ವಿಭಿನ್ನ ಎಂಬ ಸಾಮಾನ್ಯ ಅಭಿಪ್ರಾಯವೊಂದು ರೂಢಿಯಲ್ಲಿದೆ. ಇದು ಸರಿಯೆ ವಿಚಾರ ಮಾಡೋಣ.

ವಿಜ್ಞಾನಿಗಿರುವುದು ಬಹಿರ್ಮುಖದೃಷ್ಟಿ. ಸುತ್ತಲಿನ ವಸ್ತುಸ್ಥಿತಿಯಲ್ಲಿ ಆತ ಸತ್ಯವನ್ನು ಅರಸುತ್ತಾನೆ. ಹಾಗೆಯೇ ಸೌಂದರ್ಯದ ಉಪಾಸನೆ ಕೂಡಾ. 'ಸುಂದರ' ಎಂಬ ಅನುಭವವಾಗುವುದು ಯಾವುದನ್ನೋ ಕಂಡಾಗ, ಹೊರಗಿನ ಯಾವುದನ್ನೋ ಕುರಿತು ನಮ್ಮ ಅಂತರಂಗ ಪ್ರತಿಕ್ರಿಯೆಯನ್ನು ವ್ಯಕ್ತಪಡಿಸಿದಾಗ. ಹೀಗೆ, ಸತ್ಯ ಮತ್ತು ಸೌಂದರ್ಯ – ಎರಡನ್ನೂ ನಾವು ಕಾಣುವುದು ನಮ್ಮ ಸುತ್ತುಮುತ್ತಲಿನ ಇರುವಿಕೆಯಲ್ಲಿ. ಆ ಇರುವಿಕೆಯೇ ನಮ್ಮಲ್ಲಿ ಅರಿವನ್ನುಂಟುಮಾಡುವ ಪ್ರೇರಕ ಶಕ್ತಿ, – ನಿರ್ಣಾಯಕ ಶಕ್ತಿ. ಹೀಗೆ ತಿಳಿದುಕೊಳ್ಳುವುದರ ಬದಲು, ವಿಜ್ಞಾನವು ಬಹಿರಂಗಕ್ಕೆ ಸಂಬಂಧಿಸಿದ್ದೆಂದೂ ಕಲೆ ಅಂತರಂಗಕ್ಕೆ ಸಂಬಂಧಿಸಿದ್ದೆಂದೂ ಮಾಡುವ ವಾದ ಬುಡವಿಲ್ಲದ್ದು. ಮೆದುಳನ್ನೆಲ್ಲ ವಿಜ್ಞಾನಿಗಳ ಗುತ್ತಿಗೆಯಾಗಿ ಮಾಡಿ, ಹೃದಯ ಮಾತ್ರ ನಮ್ಮ ಬಂಡವಾಳ ಎನ್ನೋಣವೆ? ಅಂತಹ ತ್ಯಾಗಬುದ್ಧಿಯಿಂದ ಅಪಹಾಸ್ಯಕ್ಕೆ ಕಾರಣರಾದೇವು, ಅಷ್ಟೆ.

ಆಂಗ್ಲ ಮಹಾಕವಿ ಕೀಟ್ಸ್, "ಸೌಂದರ್ಯವು ಸತ್ಯ, ಸತ್ಯವು ಸೌಂದರ್ಯ" ಎಂದ. ಆತ ಆಡಿರುವ ಮಾತು ಸಾರ್ವಕಾಲಿಕವಾದದ್ದು.

ವಿಜ್ಞಾನಿ ಅರಸುವ ಅಂಶವೂ ಕಲಾವಿದ ಕಾಣುವ ಅಂಶವೂ ವಸ್ತುಸ್ಥಿತಿಯಲ್ಲೇ ವಾಸ್ತವತೆಯಲ್ಲೇ ಅಡಕವಾಗಿವೆ. ಎಲ್ಲ ವಾಸ್ತವತೆಯ ಮೂಲವೇ ಸಮಾಜ. ಹೀಗಾಗಿ, ವಿಜ್ಞಾನಿಯ ಕೆಲಸವೇ ಇರಲಿ, ಕಲಾವಿದನ ಕೆಲಸವೇ ಇರಲಿ, ಆ ಸೃಷ್ಟಿಯೆಲ್ಲ ಸಾಮಾಜಿಕವಾದುದು.

ಒಂದು ಶತಮಾನದ ಹಿಂದೆ ರಷ್ಯಾದೇಶದ ಮಹಾ ವಿಮರ್ಶಕ ಬೆಲಿನ್ಸ್ಕಿ ಕಲೆ ಮತ್ತು ವಿಜ್ಞಾನಗಳಿಗೆ ಸಂಬಂಧಿಸಿ ಬರೆದ ಮಾತುಗಳು ಹೀಗಿವೆ :

> "... ಕಲೆಯೂ ವಿಜ್ಞಾನವೂ ಒಂದೇ ಅಲ್ಲವೆಂಬುದನ್ನು ಜನರು ಬಲ್ಲರು. ಆದರೆ, ತಿರುಳಿಗೆ ಸಂಬಂಧಿಸಿ ವ್ಯತ್ಯಾಸವಿಲ್ಲವೆಂಬುದೂ ವ್ಯತ್ಯಾಸವಿರುವುದು ವಸ್ತುವನ್ನು ವಿಸ್ತರಿಸುವ ವಿಧಾನದಲ್ಲಿ ಮಾತ್ರವೆಂಬುದೂ ಅವರಿಗೆ ತಿಳಿಯದು. ತತ್ತ್ವಜ್ಞಾನಿ ಯುಕ್ತಿಸರಣಿಯಲ್ಲಿ ಮಾತನಾಡುತ್ತಾನೆ; ಕವಿ ಪ್ರತಿಮೆಗಳು ಮತ್ತು ಚಿತ್ರಗಳ ರೂಪದಲ್ಲಿ ಮಾತನಾಡುತ್ತಾನೆ. ಆದರೆ, ಇಬ್ಬರೂ ಹೇಳುವ ವಿಷಯ ಮಾತ್ರ ಒಂದೇ. ರಾಜಕೀಯ ಅರ್ಥಶಾಸ್ತ್ರಜ್ಞ ಅಂಕಿಸಂಖ್ಯೆಗಳೊಡನೆ ಸನ್ನದ್ಧನಾಗಿ, ಸಮಾಜದಲ್ಲಿ ಇಂತಹ ಇಂತಹ ವರ್ಗದ ಸ್ಥಿತಿಗತಿ ಇಂತಹ ಇಂತಹ ಕಾರಣಗಳಿಗಾಗಿ ಸುಧಾರಿಸಿದೆಯೆಂದೋ ಕೆಟ್ಟಿದೆಯೆಂದೋ ಸಿದ್ಧಪಡಿಸಿ ತೋರಿಸುತ್ತಾನೆ. ಕವಿ, ಬದುಕಿನ ಮುಖ್ಯವಾದ ಕಣ್ಣಿಗೆ ಕಟ್ಟುವ ವರ್ಣನೆಯಿಂದ, ಪ್ರಾಮಾಣಿಕವಾದ ಚಿತ್ರವನ್ನು ಕೊಟ್ಟು ಓದುಗರ ಮನಸ್ಸನ್ನು ಪ್ರಚೋದಿಸಿ, ಸಮಾಜದಲ್ಲಿ ಇಂತಹ ಇಂತಹ ವರ್ಗದ ಸ್ಥಿತಿಗತಿ ಇಂತಹ ಇಂತಹ ಕಾರಣಗಳಿಗಾಗಿ ಸುಧಾರಿಸಿದೆಯೆಂದೋ ಕೆಟ್ಟಿದೆಯೆಂದೋ

ಆ ಮನಸ್ಸಿನಲ್ಲಿ ಸ್ಪಷ್ಟವಾಗಿ ಮೂಡಿಸುತ್ತಾನೆ. ಒಬ್ಬಾತ ಸಿದ್ಧಪಡಿಸಿ ಕೊಟ್ಟರೆ, ಇನ್ನೊಬ್ಬ ತೋರಿಸಿಕೊಡುತ್ತಾನೆ. ಆದರೆ ಇಬ್ಬರೂ ಮನಗಾಣಿಸಿ ಕೊಡುವುದು ಸತ್ಯವನ್ನೇ, ಒಬ್ಬ ತರ್ಕಬದ್ಧವಾದ ಲೆಕ್ಕಾಚಾರದಿಂದ, ಇನ್ನೊಬ್ಬ ಚಿತ್ರಗಳ ಮೂಲಕ. ಮೊದಲಿನದನ್ನು ತಿಳಿದುಕೊಳ್ಳುವವರ ಸಂಖ್ಯೆ ಮಾತ್ರ ಬಲು ಸ್ವಲ್ಪ. ಎರಡನೆಯದು ಎಲ್ಲರಿಗೂ ಅರ್ಥವಾಗುತ್ತದೆ. ಸಮಾಜವು ಅತಿ ಹೆಚ್ಚು ಹಾಗೂ ಅತ್ಯಂತ ಪವಿತ್ರ ಆಸಕ್ತಿಯನ್ನು ವಹಿಸುವುದು ತನ್ನ ಸ್ವಂತದ ಕಲ್ಯಾಣದಲ್ಲಿ. ಸಮಾಜದ ಸದಸ್ಯರೆಲ್ಲರೂ ಆ ಆಸಕ್ತಿಯನ್ನು ತೋರಿಸುತ್ತಾರೆ. ಆ ಕಲ್ಯಾಣ ಸಾಧನೆಯ ಹಾದಿಯು ತಿಳಿವಳಿಕೆ. ಕಲೆಯು ವಿಜ್ಞಾನದಷ್ಟೇ ಚೆನ್ನಾಗಿ ಆ ತಿಳಿವಳಿಕೆಯನ್ನು ಹೆಚ್ಚಿಸಬಲ್ಲುದು. ಇಲ್ಲಿ ವಿಜ್ಞಾನ ಮತ್ತು ಕಲೆ ಎರಡೂ ಏಕಪ್ರಕಾರವಾಗಿ ಅವಶ್ಯವಾಗಿವೆ. ಕಲೆಗಿಂತ ವಿಜ್ಞಾನ ಹೆಚ್ಚು ಮಹತ್ವದ್ದಾಗುವುದು ಇಲ್ಲವೆ ವಿಜ್ಞಾನಕ್ಕಿಂತ ಕಲೆ ಹೆಚ್ಚು ಮಹತ್ವದ್ದಾಗುವುದು ಸಾಧ್ಯವಿಲ್ಲ."

ಸ್ವತಃ ನಮ್ಮನ್ನೂ ಒಳಗೊಂಡ ಸಮಾಜದ ಕಲ್ಯಾಣವೆ, ಲೋಕ ಕಲ್ಯಾಣವೆ, ನಮ್ಮೆಲ್ಲರ ಗುರಿ ಎಂಬುದನ್ನು ಒಪ್ಪಿಕೊಳ್ಳಬಹುದಲ್ಲವೆ? 'ಅಖಿಳ ಭುವನ ಹಿತಂಗಳ'ನು ಸಾಹಿತ್ಯ ಸಾಧಿಸಬೇಕು—ಎಂದ ನೃಪತುಂಗ, ಏಳು ಶತಮಾನಗಳಿಗೆ ಹಿಂದೆಯೇ. ಅಥವಾ, ಈ ಶತಮಾನದಲ್ಲೇ ಮಹಾಪ್ರಭೃತ್ತಿ ಕೈಲಾಸಂ ಹೇಳಿದಹಾಗೆ, "ಸಾಹಿತ್ಯ ಆಗಲಿ, ವಿಜ್ಞಾನ ಆಗಲಿ, ಯಾರು ಯಾವ ದಾರೀನೆ ಹಿಡೀಲಿ, ನಾವು ಹುಟ್ಟಿದ ಸಮಾಜಕ್ಕೆ ಸಲ್ಲಿಸ್ಬೇಕಾದ ಋಣ—ಸಮಾಜ ಸೇವೆ . . ."

ಸತ್ಯ ಸೌಂದರ್ಯಗಳೆರಡೂ ದೊರೆಯುವುದು ಸುತ್ತಲಿನ ಇರುವಿಕೆಯಿಂದಲೇ ಎಂದು ಮನಗಂಡ ನಾವು, ರೂಪಗಳು ಭಿನ್ನವಾದರೂ ವಿಜ್ಞಾನ ಮತ್ತು ಸಾಹಿತ್ಯಗಳ ಗುರಿಯೊಂದೇ ಎಂಬ ಮತವನ್ನು ಸ್ವೀಕರಿಸಿದ ಹಾಗಾಯಿತು.

ಗುರಿಯೊಂದೇ. ದಾರಿಗಳು ಬೇರೆಬೇರೆ. ಆದರೂ ಸಾಧನೆಯ ಮಾರ್ಗದಲ್ಲಿ ಬಳಸುವ ಅಂಶಗಳು ಮಾತ್ರ ಸಮಾನವಾದುವು: ನಮ್ಮ ಆವರಣ, ಅದರಿಂದ ಹುಟ್ಟಿದ ತಿಳಿವಳಿಕೆ, ನಾವು ಉಸಿರಾಡುತ್ತಿರುವ ವ್ಯಾಪಕವಾದ ಬದುಕು.

ಕಳೆದ ಕೆಲ ಶತಮಾನಗಳಿಂದೀಚೆಗೆ ವಿಜ್ಞಾನ ಸಾಧಿಸಿರುವ ಪ್ರಗತಿ ಅದ್ಭುತ ವಾದುದು. ಕಲ್ಲುಕಲ್ಲುಗಳ ಚಕಮುಕಿಯಿಂದ ಕಿಡಿ ಹುಟ್ಟಿಸಿದ ಆ ಹಿರಿಯನಿಂದ, ಸರ್ವ ಸಂಹಾರಕ ಮಾರಣಾಸ್ತ್ರದವರೆಗೆ ಸಾಗಿ ಬಂದಿರುವ ಹಾದಿಯ ಕಲ್ಪನೆಯೇ ರೋಮಾಂಚ ಕಾರಿಯಾಗಿದೆ. ಕಾಲಕಾಲಕ್ಕೂ ವೈಜ್ಞಾನಿಕ ಸಂಶೋಧನೆಗಳು ಸಾಮಾಜಿಕ ಪರಿವರ್ತನೆ ಗಳಿಗೆ ಕಾರಣವಾದವು. ಯಂತ್ರಯುಗ, ಮಹತ್ಸಾಧನೆಗಳಿಗೆ ಪೈಪೋಟಿ–ಯುದ್ಧಗಳಿಗೆ ಮಾತೃಕೆಯಾಯಿತು. ಬದುಕು ಹಸನಾಯಿತು, ಅಸಹನೀಯವೂ ಆಯಿತು. ಮಾನವನ 'ವಿದ್ಯಾಕುಸುಮಪರಾಗ'ವಾದ 'ಶೀಲಸೌಭಾಗ್ಯ'ವಾದ ಸಂಸ್ಕೃತಿ, ಬೇರೆಬೇರೆ ಕಡೆ ಬೇರೆ ಬೇರೆ ರೂಪ ತಳೆಯಿತು.

ಹೊಲದ ಬಿತ್ತನೆಯ ಕಾಲದಲ್ಲೂ ಕುಯಿಲಿನ ಕಾಲದಲ್ಲೂ ಹಾಡು ಹುಟ್ಟಿ ಬಂತು, ಹಿಂದೆ. ರಾಗಿ ಬೀಸುವತಂಗಿ, ತೊಟ್ಟಿಲು ತೂಗುವ ತಾಯಿ, ದೋಣಿ ದಾಟಿಸುವ ಅಂಬಿಗ–ಹೀಗೆ ದುಡಿಮೆಯ ಜತೆಯಲ್ಲೇ ಸಾಹಿತ್ಯ ಸೃಷ್ಟಿ. ಯಾವಾಗಲೂ ಅಷ್ಟೆ. ಪ್ರಕೃತಿಯನ್ನು

ಬದಲಾಯಿಸುವ ಮಾನವನ ಹೋರಾಟದಿಂದಲೇ ಅಮರಗಾನದ ಜನನ. ಸಾಹಿತ್ಯ, ಆಯಾ ಕಾಲದ ವಾಸ್ತವತೆಯ ಪ್ರತಿರೂಪ-ಕಲಾತ್ಮಕ ಪ್ರತ್ಯುತ್ಪಾದನೆ. ಅಲ್ಲದೆ, ಇರುವಿಕೆಯ ಚಿತ್ರಣದಲ್ಲಿ ಬಯಕೆಯ ಬರುವಿಕೆಯ ಸೊಗಸಾದ ಬಣ್ಣಗಳ ಸಂಯೋಜನೆ ಕೂಡಾ. ವಿಜ್ಞಾನದ ಮಾಯಾಬಾಜಾರಿನಲ್ಲಿ ಸಾಹಿತ್ಯ ಎಂದೂ ಸೋತುದಿಲ್ಲ. ಬಹ್ವಂಶ ಸಾಹಿತ್ಯ, ಯಾವಾಗಲೂ ಆಯಾ ಕಾಲಧರ್ಮದ ಪ್ರತೀಕವೇ. ಬಲಗೊಳ್ಳುತ್ತಿರುವ ಅಥವಾ ಕುಸಿಯುತ್ತಿರುವ ಸಮಾಜದ, ಬದಲಾಗುತ್ತಿರುವ ಮಾನವ ಸಂಬಂಧಗಳ, ಚಿತ್ರಣ.

ವಿಜ್ಞಾನ ಬದುಕಿನ ಮಹಾಪರಿವರ್ತಕವೆಂಬುದರಲ್ಲಿ ಸಂದೇಹವಿಲ್ಲ. ಆ ವಿಶೇಷ ಜ್ಞಾನ, ಸಂಶೋಧನೆಗಳು, ಶೋಧನೆಗಳು, ನಮ್ಮನ್ನು ನಾವೇ ಸರಿಯಾಗಿ ಕಂಡುಕೊಳ್ಳಲು ಸಹಾಯಕವಾಗಿವೆ. ನಮ್ಮ ಸ್ತ್ರೀಪುರುಷರನ್ನು ಅರಿತುಕೊಳ್ಳಲು, ಸಮಾಜವನ್ನು ವಿಭಜಿಸಿ ನೋಡಲು, ಏನು ಯಾಕೆಗಳಿಗೆ ಸಮಾಧಾನಕರ ಉತ್ತರ ಪಡೆಯಲು ನೆರವಾಗಿವೆ.

ಹದಿನೈದನೆಯ ಶತಮಾನದ ಇಟಲಿಯ ಲಿಯೊನಾರ್ಡೊ ದ ವಿಂಚಿ ಅಪ್ರತಿಮ ಚಿತ್ರಕಾರನಾಗಿದ್ದ; ಆ ಕಾಲದ ಪ್ರಖ್ಯಾತ ವಿಜ್ಞಾನಿಯೂ ಆಗಿದ್ದ. ಅಂತಹ ಇತ್ತಂಡ ಬೃಹತ್ ಸಾಧನೆ ಎಲ್ಲಾ ಕಲಾವಿದರಿಗೂ ಬರೆಹಗಾರರಿಗೂ ಸಾಧ್ಯವಾಗದು ನಿಜ. ಆದರೆ ಪ್ರತಿಯೊಬ್ಬನೂ ತನ್ನ ಜ್ಞಾನಸಂಪತ್ತನ್ನು ಬೆಳೆಸಿಕೊಳ್ಳಲು, ಅಡ್ಡಿ ಮಾಡುವವರು ಯಾರು? ವಿಜ್ಞಾನದ ತತ್ತ್ವಜ್ಞಾನದ ಅರ್ಥಶಾಸ್ತ್ರದ ರಾಜ್ಯಶಾಸ್ತ್ರದ ವಿವಿಧ ಶಾಸ್ತ್ರಗಳ ತಿರುಳನ್ನು ಸ್ವಾಧೀನಪಡಿಸಿಕೊಂಡು, ತನ್ನ ಅನುಭವದ ಜ್ಞಾನದ ಆಳವನ್ನೂ ವಿಸ್ತಾರವನ್ನೂ ಹೆಚ್ಚಿಸದೇ ಇದ್ದರೆ, ಬರೆಹಗಾರ ಬೆಲೆಬಾಳುವ ಕೃತಿಯನ್ನು ಹೇಗೆ ತಾನೇ ರಚಿಸಬಲ್ಲ?

ಆಂಗ್ಲ ಸಾಹಿತ್ಯದ ಪುರಾತನ ಕಾದಂಬರಿಕಾರನಾದ ಫೀಲ್ಡಿಂಗ್, ಸಾಹಿತ್ಯದಲ್ಲಿನ ತನ್ನ ಆರಾಧ್ಯ ಮೂರ್ತಿಗಳಾದ ಹೋಮರ್ ಮತ್ತು ಮಿಲ್ಟನ್ನರನ್ನು ಕುರಿತು ಹೇಳುತ್ತಾ, "ಅವರು ತಮ್ಮ ಕಾಲದ ವಿದ್ವತ್ತನ್ನೆಲ್ಲ ಕರಗತ ಮಾಡಿಕೊಂಡಿದ್ದರು; ಸಮಾಜದ ಎಲ್ಲಾ ಹಂತಗಳ ಜನರೊಡನೆಯೂ ಸರಿಸಮಾನರಾಗಿದ್ದರು," ಎಂದಿದ್ದಾನೆ. ಹೋಮರ್ ಮಿಲ್ಟನರಿಗಿದ್ದುದು ಅಪೇಕ್ಷಣೀಯ ಗುಣಗಳೇ. ಬರೆಹಗಾರ, ತನ್ನ ಕಾಲದ ಸಮಸ್ಯೆಗಳ ಸಾರವನ್ನು ಕಂಡು ಹಿಡಿಯುವುದು, ಸಾಮಾಜಿಕ ಸಾಂಸ್ಕೃತಿಕ ರೂಪುರೇಖಗಳನ್ನು ಗುರುತಿಸಿಕೊಳ್ಳುವುದು, ಎಲ್ಲ ಹಂತಗಳ ಜನರೊಡನೆಯೂ ಸಮಾನನಾಗಿರಲು ಸಮರ್ಥನಾಗುವುದು, ಅತ್ಯಂತ ಸ್ವಾಗತಾರ್ಹವಾದ ಆವಶ್ಯಕತೆ.

ಈ ಪ್ರಪಂಚದಲ್ಲಿ ಸಹಸ್ರ ವಸ್ತುಗಳು ಕಣ್ಣಿಗೆ ಕಾಣಿಸುತ್ತವೆ. ಕಾಣಿಸದೆ ಇರುವ ವಸ್ತುಗಳ ಸಂಖ್ಯೆಯೂ ಸಹಸ್ರವೇ. ಇವುಗಳಲ್ಲೆಲ್ಲಾ ಸತ್ಯವೆಷ್ಟು, ಮಿಥ್ಯವೆಷ್ಟು? ಪ್ರತಿಯೊಬ್ಬನೂ — ಮುಖ್ಯವಾಗಿ ಬರೆಹಗಾರ — ಇದನ್ನು ತಿಳಿಯುವುದಗತ್ಯ. ಶತಮಾನಗಳಿಂದ ಬೆಳೆದುಬಂದಿರುವ ವಿಚಾರಗಳು, ಹೊಸದಾಗಿ ಹುಟ್ಟಿರುವ ವಿಚಾರಗಳು, ವೈಜ್ಞಾನಿಕ ಸಂಶೋಧನೆಗಳು, ಇವೆಲ್ಲವೂ ಆ ಕಾರ್ಯದಲ್ಲಿ ಬರೆಹಗಾರನಿಗೆ ನೆರವಾಗುತ್ತವೆ. ಸತ್ಯದ ನೆರವಿನಿಂದ ಜಗತ್ತನ್ನೇ ಬದಲಾಯಿಸುತ್ತಾನೆ ಮಾನವ. ಜತೆಯಲ್ಲೇ ತಾನೂ ಬದಲಾಗುತ್ತಾನೆ. ಸೌಂದರ್ಯೋಪಾಸಕನಾದ ಬರೆಹಗಾರ ಅಂತಹ ಸತ್ಯವನ್ನು

ತಿಳಿದುಕೊಂಡಾಗ, ಆತನ ಲೇಖನಿ ಸತ್ಯದ ಬಲದಿಂದ ಜಗತ್ತನ್ನು ಸುಂದರಗೊಳಿಸುವ ಮಹಾಕಾರ್ಯಕ್ಕೆ ಮುಡುಪಾಗುತ್ತದೆ.

## ಬರೆಹಗಾರನ ದೃಷ್ಟಿ

ಆಳವಾದ ಅನುಭವವೂ ಸೂಕ್ಷ್ಮವಾದ ನಿರೀಕ್ಷಣ ಸಾಮರ್ಥ್ಯವೂ ಇರುವ ಲೇಖಕನಿಂದಲೇ ಒಳ್ಳೆಯ ಸಾಹಿತ್ಯಸೃಷ್ಟಿ ಸಾಧ್ಯ. ಪ್ರತಿಯೊಬ್ಬ ಬರೆಹಗಾರನೂ ವಿಚಾರಶೀಲನಾಗಲೇಬೇಕು ಎಂದು ಅಪೇಕ್ಷಿಸುವ ನಾವು, ಸಾಹಿತ್ಯ ಸೃಷ್ಟಿಯ ಮಹಾಯಜ್ಞದಲ್ಲಿ ಆತ ತೋರಬೇಕಾದ ಹಿರಿಯ ಗುಣಗಳನ್ನು ಕುರಿತು ಪ್ರಸ್ತಾಪ ಮಾಡೋಣ.

ಬರೆಹಗಾರ ತನ್ನ ಸಾಹಿತ್ಯದ ಭವ್ಯಪರಂಪರೆಯ ನಿಜವಾದ ವಾರಸುದಾರನಾಗಬೇಕೆಂಬ ವಿಷಯವಾಗಿ ಭಿನ್ನಾಭಿಪ್ರಾಯವಿರಲಾರದು. ಗತಕಾಲವನ್ನೆಲ್ಲ ಅಲ್ಲಗಳೆಯುವ ಪ್ರವೃತ್ತಿ ಆತ್ಮಘಾತುಕವಾದುದೇ ಸರಿ. ನಿನ್ನೆಯ ನೆನೆಗೊಬ್ಬರದೊಳಗೆ ಬೇರುಬಿಡದ ಗಿಡ, ನಾಳೆಯ ಮಾತೇಕೆ—ಇವತ್ತಿನ ಒಂದು ಹೊತ್ತನ್ನೂ ಕಮರದೆ ಕಳೆಯದು. ನಮ್ಮ ನಾಡಿನ ಬರೆಹಗಾರರಿಗಿರುವ ಪರಂಪರೆ ಯಾವುದು? ಪ್ರಾಚೀನ ಕನ್ನಡ ಸಾಹಿತ್ಯದ್ದು ಮಾತ್ರ ಎನ್ನೋಣವೆ? ಹಾಗೆ ಹೇಳುವುದು ಸರಿಯಾಗಲಾರದು. ಸಂಸ್ಕೃತವೂ ನಮ್ಮದೇ. ಉರ್ದೂ—ಬಂಗಾಳಿ ಭಾಷೆಗಳೂ ನಮ್ಮವೇ. ಅಷ್ಟೇಕೆ, ಪ್ರಪಂಚದ ಎಲ್ಲಾ ಭಾಷೆಗಳಲ್ಲೂ ಸೃಷ್ಟಿಯಾಗುವ ಸಾಹಿತ್ಯ, ಎಲ್ಲಾ ಜನರಿಗೂ ಸೇರಿದ ಸೊತ್ತು. ಬರೆಹಗಾರ ಪ್ರಪಂಚದ ಯಾವ ಮೂಲೆಯಲ್ಲೇ ಇರಲಿ, ವಿಶ್ವ ಸಾಹಿತ್ಯದೆಲ್ಲ ಭವ್ಯತೆಗೂ ಆತ ಹಕ್ಕುದಾರ. ನಮ್ಮ ಪ್ರವಾಹದ ಉಗಮವಾಗುವುದೇನೋ ತಲಕಾವೇರಿಯಿಂದಲೇ. ಆದರೆ ಮುಂದುವರಿದಂತೆ ಹತ್ತುದಿಕ್ಕಿನ ನೀರು ನಮ್ಮನ್ನು ಸೇರಿಯೇ ತೀರಬೇಕು.

ಭಾರತದ ಹಿರಿಯ ತತ್ತ್ವವೇತ್ತರಾದ ಸರ್ವಪಳ್ಳಿ ರಾಧಾಕೃಷ್ಣನ್, "ಪೌರಸ್ತ್ಯ ಮತಗಳು ಮತ್ತು ಪಾಶ್ಚಾತ್ಯ ಚಿಂತನೆ" ಎಂಬ ತಮ್ಮ ಗ್ರಂಥದಲ್ಲಿ ಹೀಗೆ ಹೇಳಿದ್ದಾರೆ:—

> "ನಮ್ಮಲ್ಲಿ ಕೆಲವರು, ಬಾಹ್ಯಪ್ರಭಾವಗಳನ್ನೆಲ್ಲ ಇದಿರಿಸಬೇಕೆನ್ನುತ್ತಾರೆ. ಹಾಗೆ ಮಾಡಲು ಮೂರ್ಖ ಅಭಿಮಾನವೇ ಕಾರಣ. ಮಾನವ ಕುಟುಂಬದ ಒಂದು ಶಾಖೆ ಆಧ್ಯಾತ್ಮಿಕ ಪ್ರಗತಿಯನ್ನೋ ವೈಜ್ಞಾನಿಕ ಪ್ರಗತಿಯನ್ನೋ ಸಾಧಿಸುತ್ತದೆಂದಿಟ್ಟುಕೊಳ್ಳಿ. ಆ ಪ್ರಗತಿಯನ್ನು ಆ ಶಾಖೆಯು ತನಗೋಸ್ಕರ ಮಾತ್ರ ಸಾಧಿಸಿಲ್ಲ. ಇಡೀ ಮಾನವ ಕೋಟಿಗಾಗಿ ಸಾಧಿಸಿದೆ."

ಅಧ್ಯಾತ್ಮಕ್ಕೂ ವಿಜ್ಞಾನಕ್ಕೂ ಅನ್ವಯಿಸುವ ಈ ಮಾತು, ಸಾಹಿತ್ಯದಪಾಲಿಗೂ ಅಷ್ಟೇ ಸತ್ಯವಾದುದೆಂದು ಬೇರೆ ಹೇಳಬೇಕಾಗಿಲ್ಲ.

ಹೀಗೆ, ಮಾನವಸೃಷ್ಟಿಯಾದ ಸಾಹಿತ್ಯಲೋಕದಲ್ಲಿ ಹಿರಿದಾದುದೆಲ್ಲವನ್ನೂ ಭವ್ಯವಾದುದೆಲ್ಲವನ್ನೂ ಸೂರೆಗೊಳ್ಳುವುದು ಬರೆಹಗಾರನ ಕರ್ತವ್ಯ.

ವಿಶ್ವಸಾಹಿತ್ಯದಲ್ಲಿ, ಒಟ್ಟಿನಲ್ಲಿ ಅತ್ಯಂತ ಪ್ರಧಾನವಾಗಿ ಎದ್ದುಕಾಣಿಸುವ ಅಂಶ ಯಾವುದು? ಕಾಲಧರ್ಮವನ್ನು ಪ್ರತಿಬಿಂಬಿಸಿದ, ಬದುಕಿನಿಂದ ಚಿಮ್ಮಿದ, ಮಾನವರನ್ನು ಕುರಿತು ಓದುಗರ ಬೋಧೆಯನ್ನು ಹೆಚ್ಚಿಸಿದ ಸಾಹಿತ್ಯ ಮಾತ್ರವೇ ಚಿರಕಾಲ ಬದುಕುವ ಸಾಮರ್ಥ್ಯವನ್ನು ಗಳಿಸಿದೆ. ಆ ಸಾಹಿತ್ಯ ವಾಹಿನಿಯೇ ವಾಸ್ತವವಾದದ ಪರಂಪರೆ.

ಎಲ್ಲಾ ಜನರೂ ಸುಖಿಗಳಾಗಬೇಕು ಎಂದು ಬಯಸುವ ಬರೆಹಗಾರ—ಸೂಕ್ಷ್ಮ ಸ್ಪರ್ಶಿಯೂ ಸಂವೇದನಾಜೀವಿಯೂ ಆದ ಬುದ್ಧಿಜೀವಿ—ಬದುಕನ್ನು, ಅಂದರೆ ತನ್ನ ಕೃತಿಗಳ ಸಹಸ್ರ ಪಾತ್ರಗಳನ್ನು, ಅವರ ಚಲನವಲನವನ್ನು, ನೋಡುವ ದೃಷ್ಟಿ ಮಾನವೀಯವಾಗುವುದು ಸ್ವಾಭಾವಿಕ. ಅದು, ಸುಂದರವಾದುದೆಲ್ಲವನ್ನೂ ಆರಾಧಿಸುವ, ಹೊಲಸಾದುದೆಲ್ಲವನ್ನೂ ದ್ವೇಷಿಸುವ, ಮಾನವೀಯತೆ. ಕಂಬನಿಯನ್ನು ಕೈಯಿಂದೊರೆಸಿ ತುಟಿಗಳು ಮುಗುಳುನಗುವಂತೆ ಮಾಡುವ ಸಚೇತನ ಮಾನವೀಯತೆ. ಅಂತಹ ಕಲಾವಿದ, ಬಲು ಸುಲಭವಾಗಿ ಮಾನವ ಹೃದಯಗಳಿಗೆ ಲಗ್ಗೆ ಇಡುವ ರಣಾಗ್ರೇಸರ. ಹಾಗೆ ಲಗ್ಗೆ ಇಡುವಾಗ ಆತನ ದೃಷ್ಟಿಯೆಲ್ಲ ಮೆದುಳಿನ ಕಡೆಗೇ. ಅಲ್ಲಿ ವಿಜಯಪತಾಕೆ ಹಾರಿದಾಗಲೇ ಆತ ತೃಪ್ತ.

ನಾವು ಸೃಷ್ಟಿಸುವ ಕೃತಿಯನ್ನೋದಿ ಇನ್ನೊಂದು ಜೀವನದ ಆತ್ಮ ಸಂಸ್ಕಾರವಾಯಿತೆನ್ನುವುದಕ್ಕಿಂತ ಹೆಚ್ಚಿನ ಉಡುಗೊರೆ ಬರೆಹಗಾರನಿಗೆ ಇನ್ನೇನು ಬೇಕು?

ಸಾಹಿತ್ಯ ಸೃಷ್ಟಿಗೆ ವಿಷಯದಾರಿದ್ರ್ಯ ಎನ್ನುವುದು ಇಲ್ಲವೇ ಇಲ್ಲ. ಹೃದಯ ಬಡವಾದ ಮೆದುಳು ಜಡವಾದ ಬರೆಹಗಾರನಿಗೆ ಮಾತ್ರ ಅಂತಹ ಸಂಕಟ. ಬದುಕಿನಿಂದ ಎಂದೂ ವಿಮುಖನಾಗದ, ಸದಾ ಜಾಗೃತನಾದ, ಬರೆಹಗಾರನಿಗೆ ಸಾವಿರ ಕಣ್ಣು; ಕಾಣಸಿಗುವುದು ಸಾವಿರ ನೋಟ. ಅವನ ಲೇಖನಿ ಅಮರ. ಆತ ಅದನ್ನು ಅದ್ದಿ ಬರೆಯುವುದು ಸಾಹಿತ್ಯಾಮೃತದ ಅಕ್ಷಯ ಪಾತ್ರೆಯಲ್ಲೇ.

ಆದರೆ ಇನ್ನೊಂದು ದೃಷ್ಟಿಯ ಬರೆಹಗಾರರೂ ಇರುವುದನ್ನು ನಾವು ಬಲ್ಲೆವು. ಮಾಡುವುದೇನೋ ಸಾಹಿತ್ಯ ಜಪ. ಆರಾಧನೆ ಮಾತ್ರ ಧನಲಕ್ಷ್ಮಿಯ ಗುಡಿಯಲ್ಲೇ. ಕಾಲದ ಪರೀಕ್ಷೆಯಲ್ಲಿ ಎಂದೂ ಜಯಿಸದಂತಹ ಕ್ಷಣಿಕಬಾಳ್ವೆಯ ಕೃತಿಗಳು ಅಂಥವರಿಂದ ಸೃಷ್ಟಿಯಾಗಬಲ್ಲುವು.

ವಿಶಾಲವೂ ಮಾನವೀಯವೂ ನ್ಯಾಯಪಕ್ಷಪಾತಿಯೂ ಆದ ದೃಷ್ಟಿ ಇರಬೇಕು ಬರೆಹಗಾರನಿಗೆ. ಆತ ಯಾವುದೇ ಜಡತತ್ತ್ವದ ಕಣ್‌ಪಟ್ಟಿ ಕಟ್ಟಿದ ಸವಾರಿ ಕುದುರೆಯಾಗುವುದು ಸಾಧ್ಯವೇ ಇಲ್ಲ. ಇದೇ ಕೊನೆಯಲ್ಲ, ಯಾವುದರಲ್ಲೂ ಇದೇ ಕೊನೆ ಎಂಬುದಿಲ್ಲ—ಎನ್ನುವುದನ್ನು ಆತ ಸದಾ ನೆನಪಿಡಬೇಕು. ಜನರ ಮನೋರಾಜ್ಯದ ಅಧಿಪತಿಯಾದ ತಾನು ನಿರಂಕುಶಮತಿ ಎಂಬ ಭಾವನೆ ಬರೆಹಗಾರನಲ್ಲಿ ಎಂದು ಮೂಡಿತೋ ಅಂದಿಗೆ ಆತನ ಅಧಃಪತನವಾದಂತೆಯೇ. ತಾನು ಸಮಾಜದ ಒಬ್ಬ ಜವಾಬ್ದಾರನಾದ ಸದಸ್ಯ, ಜನಪದದ ವಿನೀತಕಿಂಕರ, ಎಂಬ ಅಭಿಪ್ರಾಯ ಬರೆಹಗಾರನಲ್ಲಿ ಬಲಗೊಂಡಷ್ಟೂ ಆತನ ದೃಷ್ಟಿ ಹೆಚ್ಚು ನಿಚ್ಚಳವಾಗುವುದು, ನಿರ್ಮಲವಾಗುವುದು; ಸೃಷ್ಟಿ ಪವಿತ್ರವಾಗುವುದು.

ಬರೆಹಗಾರನಿಗೆ ಅತ್ಯಗತ್ಯವಾಗಿ ಇರಬೇಕಾದ ಇನ್ನೊಂದು ಅಂಶ—ಇತಿಹಾಸದ ನೋಟ. ನಿನ್ನೆಯ ಜನ ಇತಿಹಾಸ ರಚಿಸಿದರು. ಈ ದಿನ ನಮ್ಮ ಕಣ್ಣೆದುರಲ್ಲೇ ಇತಿಹಾಸದ ರಚನೆಯಾಗುತ್ತಿದೆ. ನಾಳೆಯ ದಿನ ಬದುಕಿನ ರೂಪ ಮತ್ತೆ ಬದಲಾಗಲಿದೆ. ಈ ಪರಿವರ್ತನೆಯ ಪ್ರವಾಹದ ನೀರವನ್ನು ಗುರುತಿಸುವ ಸಾಮರ್ಥ್ಯ, ಲೇಖಕನ ಪಾಲಿನ ಐಶ್ವರ್ಯವೇ ಸರಿ. ಗತಕಾಲದ ಪ್ರತಿನಿಧಿಯಾಗಿ, ವರ್ತಮಾನಕಾಲದ ಕಷ್ಟಸುಖಗಳಲ್ಲಿ

ಪಾಲುಗಾರನಾಗಿ, ಭವಿಷ್ಯತ್ಕಾಲದ ಪರಿಕಾರನಾಗುವುದು ಬರೆಹಗಾರ ನಿರ್ವಹಿಸಬೇಕಾದ ಚಾರಿತ್ರಿಕ ಪಾತ್ರ.

ವಿಚಾರವಂತನಾದ ಲೇಖಕ ಯಾವುದೇ ರಾಜಕೀಯ ನೀತಿಯ ಪ್ರಚಾರಕನಾಗ ಬೇಕೆ? — ಎಂದು ಯಾರಾದರೂ ಕೇಳಬಹುದು. ನೂರು ಎಳೆಗಳಿಂದ ಬದುಕಿಗೆ ಬಂಧಿತ ನಾಗಿರುವ ಧೀಮಂತ ಬರೆಹಗಾರ, ಜನರ ಇರುವಿಕೆಯನ್ನೇ ನಿರ್ಧರಿಸುವ, ತೋರಿಕೆಗೆ ಸರ್ವಶಕ್ತವಾಗಿಯೇ ಇರುವ, ರಾಜಕೀಯದಿಂದ ನಿರ್ಲಿಪ್ತನಾಗುವುದು ಸಾಧ್ಯವೇ ಇಲ್ಲ. ಆದರೆ ಆತ, ಯಾವುದೇ ರಾಜಕೀಯ ಪಕ್ಷದ ವಿವಿಧ ನೀತಿಗಳನ್ನು ಸಾಹಿತ್ಯದಲ್ಲಿ ಪ್ರತಿ ಪಾದಿಸತೊಡಗುವುದು ಖಂಡಿತವಾಗಿಯೂ ತಪ್ಪು. ಹಿಂದೆ ಸ್ವಾತಂತ್ರ್ಯಸಮರದಲ್ಲಿ ಜನರೊಡನೆ ಬೆರೆತು ಎಷ್ಟೋ ಬರೆಹಗಾರರು ಹೋರಾಡಿದರು. ಮುಂದೆ, ಜನರ ಒಲವಿನ ದುರುಪಯೋಗವನ್ನು ಕೆಲ ಸ್ವಾತಂತ್ರ್ಯನಾಯಕರು ಮಾಡಿದಾಗ, ಆ ಬರೆಹಗಾರರೇ ಅವರನ್ನು ಬಯಲಿಗೆಳೆದರು. ನ್ಯಾಯ ಎಲ್ಲಿಯೇ ಇರಲಿ, ಅದನ್ನು ನಾವು ಸಮರ್ಥಿಸ ಬೇಕು. ಅನ್ಯಾಯ ಎಲ್ಲಿಯೇ ಇರಲಿ, ಅದನ್ನು ನಾವು ಖಂಡಿಸಬೇಕು. ಅದೇ ಸರಿ ಯಾದ ದೃಷ್ಟಿ.

ಕೃತಿರಚನೆಯಲ್ಲಿ ಬರೆಹಗಾರ ಗಮನಿಸಬೇಕಾದ ಅಂಶಗಳನ್ನು ಕುರಿತು ಮಹರ್ಷಿ ಟಾಲ್‌ಸ್ಟಾಯ್ ಒಂದೆಡೆ ಹೀಗೆ ಹೇಳಿದ್ದಾರೆ.

"ಮೊದಲನೆಯದಾಗಿ, ತಾನು ಆರಿಸಿಕೊಂಡಿರುವ ವಸ್ತುವನ್ನು ಕುರಿತು ಸ್ಪಷ್ಟವಾದ, ಅಂದರೆ ನೈತಿಕವಾದ, ದೃಷ್ಟಿ ಗ್ರಂಥಕರ್ತನಿಗಿರಬೇಕು.

"ಎರಡನೆಯದಾಗಿ, ಉಚ್ಚಾರದ ಸ್ಪಷ್ಟತೆ ಅಥವಾ ರಚನಾ ಸೌಂದರ್ಯ— ಇವೆರಡೂ ಒಂದೆ.

"ಮೂರನೆಯದಾಗಿ, ಪ್ರಾಮಾಣಿಕತೆ; ಅಂದರೆ, ತಾನು ಮುಂದಿಡುತ್ತಿರುವ ವಿಷಯವನ್ನು ಕುರಿತು ಪ್ರಾಮಾಣಿಕವಾದ ಒಲವು ಅಥವಾ ದ್ವೇಷ."

ವಿಶ್ವಸಾಹಿತ್ಯಕ್ಕೆ ಮಹೋನ್ನತ ಕೃತಿಗಳ ಕಾಣಿಕೆಯನ್ನು ನೀಡಿದ ಟಾಲ್‌ಸ್ಟಾಯ್‌ಯ ಈ ಮಾತುಗಳು ಗಮನಾರ್ಹವೇ ಸರಿ.

## ಕಾವ್ಯ ಮೀಮಾಂಸೆಯ ಮಹತ್ವ

ಬರೆಹಗಾರ ಮತ್ತು ಓದುಗರ ನಡುವೆ ಮುಖ್ಯವಾದೊಂದು ಪಾತ್ರವನ್ನು ನಿರ್ವಹಿ ಸುತ್ತಿರುವ ವ್ಯಕ್ತಿಯೊಂದಿದೆ. ಆತ ವಿಮರ್ಶಕ. ಸೌಂದರ್ಯ ಸಮೀಕ್ಷೆಯನ್ನು ಮಾಡುವ ಈ ಮಹಾನುಭಾವ, ಕೃತಿಯ ರಸಾಸ್ವಾದನೆಯಲ್ಲಿ ಓದುಗನಿಗೆ ನೆರವಾಗುತ್ತಾನೆ. ಕೃತಿ ಯಲ್ಲಿ ಪ್ರತಿಪಾದಿತವಾಗಿರುವ ವಿಚಾರದಮೇಲೆ ಬೆಳಕು ಬೀರುತ್ತಾನೆ.

ವಿಮರ್ಶೆಯನ್ನು ಒಂದು ಶಾಸ್ತ್ರವೆಂದು ಪರಿಗಣಿಸುವವರು ನಮ್ಮಲ್ಲಿ ಕಡಮೆ. ಸಾಹಿತ್ಯ ಸೃಷ್ಟಿಯ ಮೌಲ್ಯವನ್ನಳೆಯುವ ಮಾನದಂಡ, ಕೃತಿಯಿಂದ ಕೃತಿಗೆ ಕರ್ತೃವಿ ನಿಂದ ಕರ್ತೃವಿಗೆ ಬದಲಾಗುವುದು ತೀರಾ ಸಾಮಾನ್ಯವಾದ ವಿಷಯ. ಕನ್ನಡದಲ್ಲಿ ಬಹುಮಟ್ಟಿಗೆ ಕಾಣಸಿಗುವ ವಿಮರ್ಶೆಯೆಲ್ಲ, ಕೃತಿಯನ್ನೂ ಕರ್ತೃವನ್ನೂ ಕುರಿತಾದ ಪೂರ್ವಗ್ರಹಪೀಡಿತ ಪ್ರಶಂಸೆ ಇಲ್ಲವೆ ನಿಂದೆ.

ಜೀವನವನ್ನು ವೈಜ್ಞಾನಿಕವಾಗಿ ನೋಡಲೊಪ್ಪದ, ಬದುಕಿಗೂ ಸಾಹಿತ್ಯಕ್ಕೂ ಸಂಬಂಧವಿದೆಯೆಂದು ನಂಬದ, ಕೆಲವರು ವಿಮರ್ಶೆಯ ಕಾರ್ಯಕ್ಕೆ 'ಶುದ್ಧಸಾಹಿತ್ಯ'ದ ಅಳತೆಗೋಲನ್ನು ಬಳಸುವುದುಂಟು. 'ಕಲೆಗಾಗಿ ಕಲೆ' ಎನ್ನುವ ಘೋಷವನ್ನು ಮುಂದಿಡುವವರೂ ಅದೇ ಜನ. ವಿಚಾರದ ಅಂಶ ಎಳ್ಳಿನಷ್ಟೂ ಇಲ್ಲದ ಸಾಹಿತ್ಯವೊಂದೇ ಅವರ ದೃಷ್ಟಿಯಲ್ಲಿ ಶುದ್ಧಸಾಹಿತ್ಯ. ಬರೆಯುವ ಚಟಕ್ಕೋಸ್ಕರ ಬರೆದಂತಾಯಿತು. ಏನನ್ನು ಬೇಕಾದರೂ. ಉದ್ದಕ್ಕೂ ಕುಣಿಯುವ ಪದಗಳ ಮೋಹಕ ಜೋಡಣೆ. ಸಮಾಜದಲ್ಲಿನ ಅತ್ಯಂತ ಪ್ರಭಾವಶಾಲಿ ಶಕ್ತಿಯಾದ ಸಾಹಿತ್ಯವನ್ನು ನಿರ್ವೀರ್ಯಗೊಳಿಸಬಲ್ಲವರೇ 'ಶುದ್ಧ ಸಾಹಿತ್ಯ'ದ ಮಾತನ್ನಾಡುತ್ತಾರೆ. ಜನ ಜಾಗೃತಿಗೆ ಹೆದರುವವರೇ 'ಪರಿಶುದ್ಧ ಕಲೆ'ಯ ಬಡಬಾವುಟವನ್ನೆತ್ತುತ್ತಾರೆ.

ಭಾವವಾದದ ಮೆದುಮಣ್ಣಿನಲ್ಲಿ ಮೇಲಕ್ಕೆ ಏಳಲಾಗದಷ್ಟು ಆಳಕ್ಕೆ ಇಳಿದಿರುವ ಜನರ ದೃಷ್ಟಿಯಲ್ಲಿ, ಸೌಂದರ್ಯವೆನ್ನುವುದು ಮಾಯೆ. ಸೌಂದರ್ಯದ ಸಾಕ್ಷಾತ್ಕಾರವೆನ್ನುವುದು ಮನಶ್ಚಕ್ಷುವಿಗೆ ಮಾತ್ರ ಗೋಚರವಾಗುವ ದಿವ್ಯದರ್ಶನ. ಅವರ ಅಭಿಪ್ರಾಯದಂತೆ, ಕಲಾಕೃತಿಯ ಸನ್ನಿಧಿಯಲ್ಲಿ ತನಗುಂಟಾಗುವ ಭಾವಗಳನ್ನು ವ್ಯಕ್ತಗೊಳಿಸುವುದಷ್ಟೇ ವಿಮರ್ಶಕನ ಹೊಣೆಗಾರಿಕೆ.

ಇಂತಹ ಧೋರಣೆಯಿಂದ ಸಾಹಿತಿಗಾಗಲೀ ಸಮಾಜಕ್ಕಾಗಲೀ ಒಳಿತಾಗದೆಂಬುದು ಸ್ಪಷ್ಟ.

ಹಾಗಾದರೆ, ಸೌಂದರ್ಯ ಸಮೀಕ್ಷೆಯಲ್ಲಿ ಕೈಗೊಳ್ಳಬೇಕಾದ ಸರಿಯಾದ ವಿಧಾನ ಯಾವುದು ?

ಸಾಹಿತ್ಯ ಕೃತಿಯಲ್ಲಿ ಸೃಷ್ಟಿಯಾಗಿರುವ ಪ್ರತಿಬಿಂಬವನ್ನು, ಮೂಲದೊಡನೆ ಹೋಲಿಸಿ ನೋಡುವುದೇ ಮೊದಲ ಹೆಜ್ಜೆ. ಪ್ರತಿಯೊಂದು ಕೃತಿಯೂ ವಾಸ್ತವ ಬದುಕಿನ ಕಾಲ್ಪನಿಕ ಪ್ರತಿಬಿಂಬ. ಆ ರೀತಿಯ ತುಲನೆಯೊಡನೆ ಮೂಡಿ ಬರುವ ಪ್ರಶ್ನೆಗಳಿವು: ಆರಿಸಿಕೊಂಡಿರುವ ವಸ್ತುವಿನ ವಿಷಯದಲ್ಲಿ ಬರೆಹಗಾರನ ದೃಷ್ಟಿ ಪ್ರಾಮಾಣಿಕವಾಗಿದೆಯೆ ? ಅದನ್ನು ಆಂತರಿಕ ಪ್ರೇರಣೆಯಿಂದ ಆತ ಬರೆದಿರುವನೆ? ಕೃತಿಯಲ್ಲಿ ಪ್ರತಿಪಾದಿತವಾಗಿರುವ ವಿಚಾರದ ಮೌಲ್ಯವೆಷ್ಟು? ಯುಗಧರ್ಮ ಆ ಕೃತಿಯಲ್ಲಿ ಪ್ರತಿಧ್ವನಿತವಾಗಿದೆಯೆ? ಅದು ಕಲೆಯೆ ಅಥವಾ ಬರಿಯ ವಿಚಾರಗಳ ನೀರಸ ಜೋಡಣೆಯೆ? ಆತ ತೋರಿರುವ ಕಲಾವಂತಿಕೆಯ ಶ್ರದ್ಧೆಯೆಷ್ಟು? ಸಮಕಾಲೀನ ಸಾಹಿತ್ಯದಲ್ಲಿ ಅದರ ಸ್ಥಾನಮಾನಗಳೇನು? — ಈ ಎಲ್ಲ ಪ್ರಶ್ನೆಗಳಿಗೆ ದೊರೆಯುವ ತರ್ಕಬದ್ಧ ಉತ್ತರವೇ ವಿಮರ್ಶೆ.

ಸಮಸ್ಯೆಯನ್ನು ಚಿತ್ರಿಸಿ, ಪರಿಹಾರವನ್ನು ಸೂಚಿಸಿ,— ಎಂದು ಸಲಹೆ ನೀಡುವ ವಿಮರ್ಶಕ ಗಣವೊಂದುಂಟು. ಯಾವುದೋ ಸಮಸ್ಯೆಯ ಚಿತ್ರಣ ಇಲ್ಲಿದೆ ಎಂದು ಸಾರಿ ಹೇಳುವುದು, 'ಇದು ವಿಚಾರಪೂರಿತ ಕೃತಿ' ಎಂದು ತುತ್ತೂರಿ ಊದಿದಂತೆ. ಪ್ರಚಲಿತ ಬದುಕಿನಿಂದ ವಸ್ತುವನ್ನಾಯ್ದುಕೊಂಡಾಗ ಅಲ್ಲೊಂದು ಸಮಸ್ಯೆ ಸಾಮಾನ್ಯವಾಗಿ ಅಡಕವಾಗಿರುವುದು ಸಹಜ. ಹೀಗಿದ್ದರೂ ಆ ಕೃತಿಗೊಂದು ಸಮಸ್ಯೆಯ ಹಣೆಪಟ್ಟಿ ಕಟ್ಟುವುದು, ಮಾರುಕಟ್ಟೆಯ ನೀತಿಗನುಸಾರವಾಗಿಯೆ ಎಂದು ಹೇಳದೆ ವಿಧಿಯಿಲ್ಲ. ಇನ್ನು ಪರಿಹಾರದ ವಿಷಯ. ಬರೆಹಗಾರ ಎಲ್ಲ ರೋಗಗಳಿಗೂ ಔಷಧಿ ಕೊಡುವ ಧನ್ವಂತರಿಯಾಗುವುದು ಉದ್ಧಟತನವೇ ಸರಿ. ಎಷ್ಟೋ ಕಡೆ ರೋಗವೇನೆಂದು ತಿಳಿಸಿದರೆ ಸಾಕು. ಚಿಕಿತ್ಸೆ ಸ್ವಯಂ

ವ್ಯಕ್ತವಾಗುವುದು. ಸಾಹಿತ್ಯ ಕೃತಿಗಳಲ್ಲಿ ಪರಿಹಾರದ ಸುಳಿವು ಎಂದೂ ಇರಕೂಡ ದೆಂಬುದು ನನ್ನ ಅಭಿಪ್ರಾಯವಲ್ಲ. ಕಲೆಗೂ ಕಥೆಗೂ ಕುಂದುಬಾರದಂತೆ ಆ ವಿಷಯವನ್ನು ಬೆರೆಸುವುದು ಸಾಧ್ಯವಾದರೆ ಸಂತೋಷ. ಬದಲು ಪ್ರತಿಯೊಂದರಲ್ಲೂ ಪರಿಹಾರದ ಸೂಚನೆ ಇದ್ದೇ ಇರಬೇಕೆನ್ನುವುದು ಅರ್ಥವಿಲ್ಲದ ಮಾತು.

ಒಂದು ಕೃತಿಯ ವಾಚನದಿಂದ ಓದುಗ ಹೆಚ್ಚು ಬುದ್ಧಿವಂತನಾದರೆ, ಮನುಷ್ಯ ರನ್ನೂ ಸಮಾಜವನ್ನೂ ಕುರಿತಾದ ಆತನ ತಿಳಿವಳಿಕೆ ಹೆಚ್ಚಿದರೆ, ಆ ಸೃಷ್ಟಿ ಸಾರ್ಥಕ ವಾದಂತೆಯೇ. ಓದಿದಬಳಿಕ ಪರಿಹಾರ ತನ್ನಿಂ ತಾನಾಗಿಯೇ ಸ್ಪಷ್ಟವಾಗುವಂತಹ ಕೃತಿಯೇ ಉತ್ತಮವಾದದ್ದು. ಕೃತಿಯಲ್ಲಿ ಅಡಕವಾಗಿರುವ ಯಾವುದೇ ವಿಚಾರ, ಕಥೆಯ ಬೆಳವಣಿಗೆಯೊಡನೆ ಸನ್ನಿವೇಶಗಳೊಡನೆ ಒಂದುಗೂಡಿ ತೋರಬೇಕಲ್ಲದೆ, ತಾನೇ ಪ್ರತ್ಯೇಕ ವಾಗಿ ಕಾಣಿಸಿಕೊಳ್ಳಬಾರದು.

ಬರೆಹಗಾರ ಕೃತಿಯಲ್ಲಿ ತನ್ನ ವೈಯಕ್ತಿಕ ವಿಚಾರಗಳನ್ನು ತುರುಕಬಹುದೆ? ಕಳೆದ ಶತಮಾನದ ಫ್ರೆಂಚ್ ಸಾಹಿತಿ ಫ್ಲಾಬೇರ್ ಆ ವಿಷಯವಾಗಿ ಸೊಗಸಾದ ಉತ್ತರ ನೀಡಿದ್ದಾನೆ:

> "ವಿಶ್ವದಲ್ಲಿ ದೇವರು ಇರುವಂತೆ, ಕೃತಿಯಲ್ಲಿ ಕರ್ತೃವಿರಬೇಕು. ಆತ ಸರ್ವಾಂತರ್ಯಾಮಿಯಾಗಿದ್ದರೂ ಎಲ್ಲಿಯೂ ಗೋಚರನಾಗಬಾರದು."

ಬರೆಹಗಾರನೂ ಮನುಷ್ಯನೇ. ಆತ ಸಮಾಜದ ಸದಸ್ಯ, ರಾಷ್ಟ್ರದ ಪ್ರಜೆ. ಕಾಲಧರ್ಮದಿಂದ ಅವನೂ ಬಾಧಿತನೇ. ಹೀಗಾಗಿ ಆತನನ್ನೂ ಆತನ ಕೃತಿಯನ್ನೂ ವಾತಾವರಣದ/ವೃತ್ತದೊಳಗೇ ಇರಿಸಿ ಸೌಂದರ್ಯಸಮೀಕ್ಷೆಯನ್ನು ಮಾಡಬೇಕು. ಅದೇ ಸರಿಯಾದ ಕಾವ್ಯಮೀಮಾಂಸೆ.

## ಕನ್ನಡ ಸಾಹಿತ್ಯದಲ್ಲಿ ವಿಚಾರದ ಪರಂಪರೆ

ಪ್ರಾಚೀನ ಕನ್ನಡ ಸಾಹಿತ್ಯದ ಅಧ್ಯಯನದಲ್ಲಿ ನಮ್ಮ ಆಧುನಿಕರು ಆಸಕ್ತಿ ತೋರುವುದು ಕಡಮೆ. ಇಂಗ್ಲಿಷ್ ತಿಳಿದವರೇ ನಾಗರಿಕರೆನ್ನುವ ದಾಸಮನೋಭಾವ ವೊಂದು ಬಲಗೊಂಡು, ನಮ್ಮ ಜನರನ್ನು ಸ್ವಾಭಿಮಾನಶೂನ್ಯರನ್ನಾಗಿ ಮಾಡಿತು. "ನಮ್ಮ ಲ್ಲೇನಿದೆ!" ಎನ್ನುವ ಉದ್ಗಾರ ಒಂದು ರೀತಿಯ ಸಂತೋಷದಿಂದಲೇ ಹೊರಟಿತು. ಎಡೆ ಬಿಡದ ಪಾಳೆಯಗಾರರ ಕದನಗಳ ದೆಸೆಯಿಂದ, ಬಳಿಕ ಪರಕೀಯರ ಆಡಳಿತದ ಕಾರಣ ದಿಂದ, ಒಂದು ಜನಾಂಗವಾಗಿ ನಮ್ಮ ಜನಪದ ಬಾಳಲು ಬೆಳೆಯಲು ಅವಕಾಶ ದೊರೆಯ ಲಿಲ್ಲ. ಆದರೂ ಪುರಾತನವಾದ ನಮ್ಮ ನಾಗರಿಕತೆ ಸಾಹಿತ್ಯ ಸೃಷ್ಟಿಗೆ ಮಾತೃಕೆಯಾಗಲೇ ಇಲ್ಲ ಎನ್ನುವುದುಂಟೆ? ಆರನೆಯ ಶತಮಾನದಿಂದ ಹಿಡಿದು ಇಪ್ಪತ್ತರ ಆರಂಭದ ವರೆಗೆ ಆಗಿರುವ ಕನ್ನಡ ಸಾಹಿತ್ಯಕೃಷಿ ಅಲ್ಪವೇನೂ ಅಲ್ಲ. ಆದರೆ, ನಮ್ಮಲ್ಲಿನ ಬಹ್ವಂಶ ಓದುಗರಿಗೆ, ಎಲ್ಲಿ ನೋಡಿದರಲ್ಲಿ ದೊರೆಯುವ ಕಥೆ ಪುಸ್ತಕಗಳು ಮಾತ್ರ ಕನ್ನಡ ಸಾಹಿತ್ಯ. ಪ್ರಾಚೀನ ಕೃತಿಗಳನ್ನು ಪಠ್ಯವೆಂದು ಅಭ್ಯಾಸ ಮಾಡುವ ವಿದ್ಯಾರ್ಥಿಗಳುಂಟು. ಪರೀಕ್ಷೆ ಯಲ್ಲಿ ಉತ್ತೀರ್ಣರಾಗುವುದೊಂದೇ ಅಂತಹ ಅಭ್ಯಾಸದ ಗುರಿ. ಜ್ಞಾನಸಾಹಿತ್ಯ ಸ್ವಲ್ಪ ಮಟ್ಟಿಗೆ ಹಿಂದೆಯೂ ರಚಿಸಲ್ಪಟ್ಟುದನ್ನು ನಾವು ಬಲ್ಲೆವು. ಕಾಲಗತಿಯ ವಿಚಾರದ ಪ್ರಗತಿಯ ಒರೆಗೆ ಹಚ್ಚಿ ನೋಡುವ ಮಾತಂತಿರಲಿ, ಬರಿಯ ಕುತೂಹಲಕ್ಕಾದರೂ

ಆ ಕೃತಿಗಳನ್ನು ಓದಿ ನೋಡುವವರೆಷ್ಟು ಜನ? ಶುದ್ಧಾಂಗ ಮತಪ್ರಚಾರವಿರುವ ಕೆಲ ಕೃತಿಗಳನ್ನೇನೋ ಕೆಲವರು ಆಗೊಮ್ಮೆ ಈಗೊಮ್ಮೆ ಮುಟ್ಟಿನೋಡುವುದುಂಟು. ಗಮಕಿಗಳ ಕೃಪೆಯಿಂದ ವಚನಗಳು; ದೇವರನಾಮಗಳು ಕರ್ಣರಸಾಯನವಾಗುವುದುಂಟು. ಇತರ ಪ್ರಾಚೀನ ಸಾಹಿತ್ಯವೆಲ್ಲ ಈಗಿನವರಿಗೆ ಕಬ್ಬಿಣದ ಕಡಲೆ.

ಈ ದುಃಸ್ಥಿತಿಗೆ ನಮ್ಮ ಕನ್ನಡಬಲ್ಲಿದರೂ ಸೌಂದರ್ಯಸಮೀಕ್ಷಕರೂ ಸ್ವಲ್ಪ ಮಟ್ಟಿಗೆ ಕಾರಣರಾಗಿದ್ದಾರೆ. ರಗಳೆಯ ಹರಿಹರ, ಷಟ್ಪದಿಯ ರಾಘವಾಂಕ ಎನ್ನುವರೇ ಹೊರತು, ಆ ಕರ್ತೃಗಳನ್ನೂ ಕೃತಿಗಳನ್ನೂ ಆಗಿನ ವಾತಾವರಣದೊಳಗಿರಿಸಿ ತೂಗಿ ನೋಡುವವರು ಬೆಲೆಕಟ್ಟುವವರು ಕಡಮೆ. ಗತಕಾಲದ ನಮ್ಮ ಬದುಕಿನಲ್ಲಿ ಮತದ ಪ್ರಭಾವವೇ ಅತಿಮುಖ್ಯವಾಗಿತ್ತೆಂದು ಒಪ್ಪಿಕೊಳ್ಳೋಣ. ಆದರೆ ಯಾವ ಮತ ಪ್ರಚಾರವೇ ಆಗಲಿ ಎಂದಾದರೂ ಶೂನ್ಯದಲ್ಲಿ ನಡೆದುದುಂಟೆ? ಎಲ್ಲಾ ಬೋಧನೆಗಳೂ ಪ್ರತಿಪಾದನೆಗಳೂ ಆಯಾ ಕಾಲದ ಸಾಮಾಜಿಕ ಹಿನ್ನೆಲೆಗಳಲ್ಲಿ ಆದುವಲ್ಲವೆ? ಹೀಗೆ ಸಾಹಿತ್ಯದ ಮೂಲಕ ನಮ್ಮ ಪುರಾತನರ ಬದುಕನ್ನು ತಿಳಿದುಕೊಂಡು, ಒಂದೊಂದೇ ಚಿತ್ರವನ್ನೆತ್ತಿ ಹಿಡಿದು ಕ್ರಮಬದ್ಧವಾಗಿ, ವೈಜ್ಞಾನಿಕವಾಗಿ ಜೋಡಿಸಿ, ಸಮಗ್ರವಾದೊಂದು ಚಿತ್ರಶಾಲೆಯನ್ನು ರಚಿಸುವುದು ಎಷ್ಟು ಸ್ವಾರಸ್ಯಪೂರ್ಣವಾದ ಆಹ್ಲಾದಕರವಾದ ಕೆಲಸ! ಆ ರೀತಿ ಪ್ರಾಚೀನ ಸಾಹಿತ್ಯಕ್ಕೂ ಆಗಿನ ಬದುಕಿಗೂ ಸಂಬಂಧ ಕಲ್ಪಿಸಿ ಮಾಡುವ ಸೌಂದರ್ಯಸಮೀಕ್ಷೆಯಿಂದ ಆಶ್ಚರ್ಯಕರವೆನ್ನಿಸುವಂತಹ ಪರಿಣಾಮ ಉಂಟಾಗುವುದರಲ್ಲಿ ಸಂದೇಹವಿಲ್ಲ.

ಪ್ರಾಚೀನ ಸಾಹಿತ್ಯವನ್ನಿಷ್ಟು ಪರಾಮರ್ಶಿಸಿ ನೋಡಿ. ಗೊತ್ತುಗುರಿ ಇಲ್ಲದ ಬರೆವಣಿಗೆ ಅದಲ್ಲವೇ ಅಲ್ಲ. ವಿಚಾರದ ಅಂಶಕ್ಕಂತೂ — ಅದೆಂತಹ ವಿಚಾರವೇ ಇರಲಿ — ಕೊರತೆ ಇಲ್ಲವೇ ಇಲ್ಲ. ಕಾವ್ಯಗಳ ತುಂಬಾ ಬದುಕಿನ ಮೀಮಾಂಸೆಯೇ, ಸಮಾಜದ ವಿಮರ್ಶೆಯೇ. ಕಲೆಯು ವಿಚಾರದ ವಿಕಾಸಕ್ಕೆ ಹಿಂದಿನ ಕಟ್ಟುಪಾಡುಗಳು ಅಡ್ಡಿಯಾದಾಗ, ಬಂಡಾಯವೇಳುವ ಮನೋವೃತ್ತಿಯ ನಿದರ್ಶನಗಳು ಎಷ್ಟೊಂದು! ನ್ಯಾಯಪಕ್ಷಪಾತ, ಸತ್ಯನಿಷ್ಠುರತೆ ಎಲ್ಲವೂ ಅಲ್ಲಿವೆ. ಬಸವಣ್ಣನವರ ವಚನಗಳೆ, ದಾಸರ ಪದಗಳೆ, ಸರ್ವಜ್ಞನೆ. ಸಂಚಿಯ ಹೊನ್ನಮ್ಮನೆ? ಇರುವಿಕೆಯ ಸ್ಥಿತಿಗಳನ್ನು ಕುರಿತೇ ಅಲ್ಲವೆ ಅವರು ಬರೆದುದು, ಒರೆದುದು?

ಇದೀಗ, ಶತಶತಮಾನಗಳಿಂದ ವಿಚಾರವಾಹಿನಿ ಕನ್ನಡ ಹೊಲದಲ್ಲಿ ಹರಿದು ಬಂದಿರುವ ಕಥೆ.

ಯಾವುದೂ ಜಡವಲ್ಲದ ಈ ಬದುಕಿನಲ್ಲಿ ವಿಚಾರಗಳೂ ಬದಲಾಗುತ್ತ ಬಂದುದನ್ನು ನಾವು ಕಂಡಿದ್ದೇವೆ. ಯಂತ್ರಗಳ ಆಗಮನ ಹಳೆಯ ಆರ್ಥಿಕ ಬುಡಕಟ್ಟನ್ನು ಹಿಡಿದು ಕುಲುಕಿತು. ಪಶ್ಚಿಮದ ಪ್ರತಿಭೆ ನಮ್ಮ ಜ್ಞಾನಸರೋವರವನ್ನು ಕಲಕಿತು. ಜೀವನದಮೇಲೆ ಅದರಿಂದಾದ ಪರಿಣಾಮದ ಪ್ರತಿಬಿಂಬ ಈ ಶತಮಾನದ ಆರಂಭದ ಸಾಹಿತ್ಯದಲ್ಲಿ ಒಡಮೂಡಿತು.

ಈ ಸಂದರ್ಭದಲ್ಲಿ, ಆಧುನಿಕ ಕನ್ನಡ ಸಾಹಿತ್ಯದ ಎರಡು ಆರಂಭ ಕೃತಿಗಳನ್ನು ಕುರಿತು ಇಲ್ಲಿ ಪ್ರಸ್ತಾಪಿಸ ಬಯಸುವೆ. ಒಂದರ ಹೆಸರು; 'ಇಗ್ಗಪ್ಪ ಹೆಗ್ಗಡೆಯ ವಿವಾಹ ಪ್ರಹಸನ', ಇನ್ನೊಂದು 'ಇಂದಿರಾಬಾಯಿ ಅಥವಾ ಸದರ್ಮ ವಿಜಯವು?"

'ಇಗ್ಗಪ್ಪ ಹೆಗ್ಗಡೆಯ ವಿವಾಹ ಪ್ರಹಸನ' ಪ್ರಕಟವಾದುದು 1887ರಲ್ಲಿ. ಆಗ ಪ್ರಕಟವಾಗಿದ್ದಂತೆ 'ಹವ್ಯಕ ಹಿತೇಚ್ಛು ವಿದ್ವಾಂಸರೊಬ್ಬರು' ಆ ನಾಟಕದ ಕರ್ತೃ. ಸುಮಾರು ಎಪ್ಪತ್ತು ವರ್ಷಗಳಿಗೆ ಹಿಂದೆ ರಚಿಸಲ್ಪಟ್ಟ ಆ ಕೃತಿಯ ವಸ್ತು, ಕನ್ಯಾವಿಕ್ರಯ ದಂತಹ ಸಾಮಾಜಿಕರೋಗ. ಹಣ್ಣು ಮುದುಕ, ವಿಧುರ, ಇಗ್ಗಪ್ಪ ಹೆಗ್ಗಡೆ, ಕನ್ನಿಕೆ ಯೊಬ್ಬಳನ್ನು ಮದುವೆಯಾಗುತ್ತಾನೆ. ಆಕೆ ವಿಧವೆಯಾಗುತ್ತಾಳೆ. ಸ್ವಾಭಾವಿಕವಾಗಿಯೇ ಆಕೆಗೆ ದೊರೆತುದು ರಕ್ಷಣೆ ಮಾತ್ರವೇ ಅಲ್ಲ. ಸಮಾಜದ ದೃಷ್ಟಿಯಲ್ಲಿ ಅದು ಪಾಪಿಯ ಬದುಕು. ಪರಿಹಾರ ಭ್ರೂಣಹತ್ಯ. ಶಿರಸಿಯ ನ್ಯಾಯಾಸ್ಥಾನದಲ್ಲಿ ನಡೆಯುವ ವಿಚಾರಣೆಯೆ! ನಾಟಕಕಾರರ ವಿಶಿಷ್ಟ ಸೃಷ್ಟಿಯಾದ ನ್ಯಾಯಾಧೀಶ ತೀರ್ಪು ಕೊಡುತ್ತ, ಸಮಾಜದ ದುಷ್ಟಪದ್ಧತಿಗಳನ್ನು ಧಿಕ್ಕರಿಸುತ್ತಾನೆ. ದುರಾಚಾರಗಳನ್ನು ಪ್ರತಿಬಂಧಿಸುವುದರ ಬದಲು ದುರುಳರಿಗೆ ನೆರವಾಗುವಂತಹ ಮಠಾಧಿಪತಿಗಳನ್ನು ಜರೆಯುತ್ತಾನೆ. ಈ ನಾಟಕದೊಳಗಿನ ಸಂಭಾಷಣೆಯೆಲ್ಲ ನಡೆಯುವುದು ಮನೆವಾತಿನಲ್ಲಿ, ಮಲೆನಾಡಿನೊಂದು ಜನವಿಭಾಗದ ಆಡುಭಾಷೆಯಲ್ಲಿ. ಅದರಲ್ಲೂ ಭೋಳೇ ಹೆಣ್ಣು ಆಡುವ ಕನ್ನಡ ಒಂದು ತೆರ; ನ್ಯಾಯಾಧೀಶರ ಕನ್ನಡ ಒಂದು ತೆರ. ಅಂತಹ ಸೂಕ್ಷ್ಮ ವಿಷಯದಲ್ಲೂ ನಾಟಕಕಾರರು ತೋರಿರುವುದು ಪ್ರಶಂಸೆಗೆ ಅರ್ಹವಾದ ಪ್ರಾಮಾಣಿಕತೆ. ಕೃತಿಯ ಉದ್ದಕ್ಕೂ ಮಿಡಿಯುತ್ತಿರುವುದು ಸಮಾಜ ಸುಧಾರಣೆಯ ಹಂಬಲ, ಹೊಲಸನ್ನು ಕಂಡು ಕನಲುವ ಮನೋವೃತ್ತಿ, ಸಚೇತನವಾದ ಮಾನವೀಯತೆ. ಈ ಕೃತಿ ರಚನೆಯ ಉದ್ದೇಶ? ಅದನ್ನು ನಾಟಕಕಾರರು ಮರೆಮಾಚಿಯೇ ಇಲ್ಲ. ಅವರ ಹಿಮ್ಮೇಳದಲ್ಲಿದ್ದುದು ಮನೋರಂಜನೆಯ ಏಕನಾದವಲ್ಲ—ಜನಜಾಗೃತಿಯ ಝೇಂಕಾರ.

ವೆಂಕಟರಮಣ ಶಾಸ್ತ್ರಿ ಎಂಬವರೇ ಆ ವಿದ್ವಾಂಸರಿರಬೇಕೆಂದು ಇತ್ತೀಚೆಗೆ ಸಿದ್ಧಪಡಿಸಲಾಗಿದೆ. ಆಗಿನ ಕಾಲಕ್ಕೆ ಕ್ರಾಂತಿಕಾರಕ ವಿಚಾರಗಳನ್ನು ಪ್ರತಿಪಾದಿಸಿದ, ಆಳುತ್ತಿದ್ದ ಆಂಗ್ಲರ ಕಣ್ಣಲ್ಲಿ ಕೆಟ್ಟವನೆನ್ನಿಸಿಕೊಂಡ, ವೆಂಕಟರಮಣ ಶಾಸ್ತ್ರಿಯವರು ಊರೂರು ಅಲೆದು ಸಾಹಸೀಜೀವನವನ್ನು ನಡೆಸಿ, ಕಡು ಬಡತನದಲ್ಲೆ ಕೊನೆಗಾಲವನ್ನು ಕಳೆದರಂತೆ.*

'ಇಗ್ಗಪ್ಪ ಹೆಗ್ಗಡೆಯ ವಿವಾಹ ಪ್ರಹಸನ' ಪ್ರಕಾಶಿತವಾದ ಹನ್ನೆರಡು ವರ್ಷಗಳಲ್ಲೇ — 1899ರಲ್ಲಿ 'ಇಂದಿರಾಬಾಯಿ' ಎಂಬೊಂದು ಕೃತಿ ಪ್ರಕಟವಾಯಿತು. ಅದು 250 ಪುಟಗಳ ಕಾದಂಬರಿ. ಬರೆದವರ ಹೆಸರು ಗುಳ್ವಾಡಿ ವೆಂಕಟರಾಯರು. ಆ ಕೃತಿಯನ್ನು ಕುರಿತು ಶಿವರಾಮ ಕಾರಂತರು ಹೇಳಿರುವ ಕೆಲಮಾತುಗಳು ಮನೋಜ್ಞವಾಗಿವೆ.

"ಗ್ರಂಥಕರ್ತರು ತಮ್ಮ ಕಾಲದ ಸಾಮಾಜಿಕ ಪ್ರಶ್ನೆಗಳನ್ನು ಸುರಸವಾಗಿ ಯಥಾತ್ಮಿಕವಾಗಿ ಅದರಲ್ಲಿ ಚಿತ್ರಿಸಿದ್ದಾರೆ . . . . ಇದು ಒಂದು ಶತಮಾನದ ಹಿಂದಿನ, ದಕ್ಷಿಣ ಕನ್ನಡದ — ಅದರಲ್ಲೂ ಮಂಗಳೂರಿನ — ಸಾರಸ್ವತ ಸಮಾಜದ ವಾಸ್ತವಿಕ ಚಿತ್ರವೆಂದರೆ ತಪ್ಪಾಗಲಾರದು. ಮಾನವನ ದುಷ್ಟತನ,

* [ಕುಮಟೆಯಲ್ಲಿ ಜರಗಿದ ಸಾಹಿತ್ಯ ಸಮ್ಮೇಳನದ ಸಂದರ್ಭದಲ್ಲಿ ಲಿಂಗೇಶಶರ್ಮರು ಪ್ರಕಟಿಸಿದ ಈ ಪ್ರಹಸನದ ದ್ವಿತೀಯ ಆವೃತ್ತಿಯಲ್ಲಿ ವೆಂಕಟರಮಣ ಶಾಸ್ತ್ರಿಯವರ ತುಂಬು ಜೀವನದ ರುದ್ರವೂ ರಮ್ಯವೂ ಆದ ಕಥಾಚಿತ್ರವಿದೆ.]

ಸೌಜನ್ಯ, ನಯ, ವಿನಯ, ಔದ್ಧತ್ಯ ಎಲ್ಲವನ್ನೂ ತೂಕಮಾಡಿ ತೋರಿಸಿ ಕೊಟ್ಟಿದ್ದಾರೆ . . . ತಮ್ಮ ಕಾಲದ ಜನಗಳ ನಂಬಿಕೆಯನ್ನು ಚಿತ್ರಿಸುವಾಗಲೂ ಈ ಕಾದಂಬರಿಕಾರರು ಯಥಾವತ್ತಾಗಿಯೇ ಅದನ್ನು ಚಿತ್ರಿಸಿದ್ದಾರೆ. ಸಮಾಜ ಸುಧಾರಣೆಯ ಆವೇಶಕ್ಕೆ ಮನಗೊಟ್ಟು, ಬರವಣಿಗೆಯಲ್ಲಿ ಅಳತೆ ತಪ್ಪಿಲ್ಲ."

ಇದೀಗ ಕನ್ನಡದ ಮೊದಲ ಕಾದಂಬರಿ— ವಿಚಾರ ಮತ್ತು ಕಲೆಯ ಅಂಶಗಳು ಸಮರಸಗೊಂಡಿರುವ ಸಾಹಿತ್ಯ ಕೃತಿ!

ನಾಡು ಛಿದ್ರಛಿದ್ರವಾಗಿದ್ದ ಈ ದರಿದ್ರ ಭೂಮಿಯಲ್ಲಿ ಈ ಕೃತಿರತ್ನಗಳು ಪ್ರಾದೇಶಿಕವಾಗಿಯೇ ಉಳಿದುವು; ಕನ್ನಡ ಕಲೆಯ ಮುನ್ನಡೆಯಲ್ಲಿ ಅವು ಹೆಗ್ಗುರುತುಗಳಾಗುವುದು ಸಾಧ್ಯವಾಗಲಿಲ್ಲ. ಆದರೂ ಅವುಗಳ ಚಾರಿತ್ರಿಕ ಮಹತ್ವವನ್ನು ಈ ದಿನ ನಾವು ಅಲ್ಲಗಳೆಯುವುದುಂಟೆ? ಅವುಗಳ ಹಿರಿಮೆಯನ್ನು ಗುರುತಿಸದೆ ಮುಂದುವರಿಯುವುದುಂಟೆ?

## ಈ ಶತಮಾನದ ಸೃಷ್ಟಿ

ಆಧುನಿಕ ಕನ್ನಡ ಸಾಹಿತ್ಯದ ಬಹುಮುಖ ಬೆಳವಣಿಗೆಯನ್ನು ನಾವು ಕಾಣುವುದು ಕಳೆದ ಮೂರು ದಶಕಗಳಲ್ಲಿ. ರಾಷ್ಟ್ರೀಯ ಸ್ವಾತಂತ್ರ್ಯಹೋರಾಟ, ದೀರ್ಘಕಾಲದಿಂದ ಮುದುಡಿಕೊಂಡಿದ್ದ ಕ್ರಿಯಾಶಕ್ತಿಗಳಿಗೆಲ್ಲ ಚಾಲನೆಯನ್ನು ಕೊಟ್ಟಿತು. ಜನಾಂಗದ ಸ್ವಾಭಿಮಾನ, ವ್ಯಾಪಕವಾದ ರಾಷ್ಟ್ರಾಭಿಮಾನಕ್ಕೆ ಪೂರಕವಾಯಿತು. ಹಾಗೆ ಮೊದಲಾದುದೇ ಕನ್ನಡದ ಪುನರುದಯ ಚಳುವಳಿ.

ಆಗಲೆ ರಕ್ತಗತವಾಗಿದ್ದ ಪರಭಾಷೆಯ ವ್ಯಾಮೋಹವನ್ನು ಬಿಟ್ಟು, ಒಳಗಿರುವುದನ್ನು ತಾಯ್ನುಡಿಯಲ್ಲೆ ಹೊರಗೆಡವಲು ಆಗಿನ ಯುವಜನಾಂಗ ಮಾಡಿದ ಯತ್ನ–ಗಳಿಸಿದ ಯಶಸ್ಸು–ಸ್ಮರಣೀಯವಾದುದು. ಆಗ ಕೃತಿಯ ತಿರುಳೇನು ಎಂದು ಯೋಚಿಸಿದವರಿಲ್ಲ. ಎಷ್ಟೋ ಕಾಲದ ಅನಂತರ ಹುಟ್ಟಿದ ಮಗು ಹೇಗಿದ್ದರೂ ಮುದ್ದೇ. ಒಟ್ಟಿನಲ್ಲಿ ಕನ್ನಡವಾದರಾಯಿತು. ಕನ್ನಡದ ಕತೆ, ಕನ್ನಡದ ಕವಿತೆ, ಕನ್ನಡ ನಾಟಕ, ಕನ್ನಡ ಕಾದಂಬರಿ . . .

ನಾವೆಲ್ಲ ಕಂಡಿರುವ ಹಾಗೆ ಭಾವಾವೇಶದ ಆ ಕಾಲಘಟ್ಟ ಬಲು ಬೇಗನೆ ಕಳೆಯಿತು. ಕನ್ನಡ ಕೃತಿಯಾದರೆ ಸಾಲದು, ಒಳ್ಳೆಯ ಕನ್ನಡ ಕೃತಿಯಾಗಬೇಕು— ಎಂಬ ಆಶಯ ವ್ಯಕ್ತಪಟ್ಟಿತು.

ಮೂವತ್ತು ವರ್ಷಗಳಕಾಲ, ಯಾವುದೇ ಜನಾಂಗದ ಇಲ್ಲವೆ ರಾಷ್ಟ್ರದ ಇತಿಹಾಸದಲ್ಲಿ ಅಲ್ಪಾವಧಿಯೇನೂ ಅಲ್ಲ. ಆದರೆ ನಾವು ಬದುಕಿದ್ದುದು ಪರತಂತ್ರ ದೇಶದಲ್ಲಿ, ಹರಿಹಂಚಿದ ನಾಡಿನಲ್ಲಿ. ಸ್ವತಂತ್ರವಲ್ಲದ ಜನಾಂಗದ ಪ್ರಗತಿಗೆ ಅವಕಾಶ ಕಡಮೆ. ನಮ್ಮ ಆಧುನಿಕ ಸಾಹಿತ್ಯದ ಬೆಳವಣಿಗೆಯನ್ನು ಆ ಹಿನ್ನೆಲೆಯಲ್ಲಿ ನಾವು ಗಮನಿಸಬೇಕು.

ವಿಜ್ಞಾನಕ್ಕೆ, ತತ್ತ್ವಜ್ಞಾನಕ್ಕೆ, ಇನ್ನಿತರ ಶಾಸ್ತ್ರಗಳಿಗೆ ಸಂಬಂಧಿಸಿ ಕನ್ನಡದಲ್ಲಿ ಪ್ರಕಟವಾಗಿರುವ ಪುಸ್ತಕಗಳ ಸಂಖ್ಯೆ ಎಷ್ಟು? ಸೃಷ್ಟಿಯ ಸಾಹಿತ್ಯ ನೂರರಷ್ಟು ಪ್ರಕಟವಾದಾಗ ಜ್ಞಾನ ಸಾಹಿತ್ಯ ಒಂದರಷ್ಟಾದರೂ ಪ್ರಕಟವಾಗಿದೆಯೆ? ಪರಪೀಡಕರಾದ ಆಂಗ್ಲರ ಆಡಳಿತವನ್ನು ಬಿಟ್ಟುಬಿಡೋಣ. ಅವರ ಭಾಷೆ ಮತ್ತು ಸಾಹಿತ್ಯ ಮಾತ್ರ ನಮಗೆ ಮಹದುಪಕಾರಮಾಡಿದೆ ಎಂಬುದು ನಿರ್ವಿವಾದ. ಆಂಗ್ಲರ ಆಳ್ವಿಕೆ ಇಲ್ಲದೇ ಇರುತಿದ್ದರೆ, ರಷ್ಯದವರಂತೆ ಚೀಣದವರಂತೆ ಈ ಕ್ಷೇತ್ರದಲ್ಲಿ ಬೆಳವಣಿಗೆಯ ಬೇರೆಯೇ ಹಾದಿಯನ್ನು

ನಾವು ನಿರ್ಮಿಸಿಕೊಳ್ಳುತ್ತಿದ್ದೆವು, ನಿಜ. ಆದರೆ ವಾಸ್ತವವಾಗಿ ಯಂತ್ರಯುಗದ ವೈಜ್ಞಾನಿಕ ಪ್ರಗತಿಗೆಲ್ಲ ಇಂಗ್ಲಿಷೇ ನಮಗೆ ಬೆಳಕಿಂಡಿಯಾಯಿತಲ್ಲವೆ? ಅಂತಹ ಇಂಗ್ಲಿಷಿನ ಮೂಲಕ ಜ್ಞಾನಸಂಪತ್ತನ್ನು ಹೆಚ್ಚಿಸಿಕೊಂಡು, ಅದೆಲ್ಲವನ್ನೂ ಅರಗಿಸಿ ಕನ್ನಡದಲ್ಲಿ ವ್ಯಕ್ತಪಡಿಸಿ ಜನಸಮುದಾಯದ ಸೊತ್ತಾಗಿ ಮಾಡಿದವರೆಷ್ಟು ಜನ? ಮಾನವನ ಬದುಕಿನ ಮೇಲೆ ಪರಿಣಾಮವನ್ನುಂಟುಮಾಡುವಂತಹ ಇಂತಹ ಪ್ರಕಟಣೆಗಳು, ಏನೂ ಬಂದೇ ಇಲ್ಲವೆನ್ನುವುದು ತಪ್ಪಾದೀತು. ಪ್ರಕಟವಾಗಿರುವ ಜ್ಞಾನಸಾಹಿತ್ಯವೆಲ್ಲ, ಬೆಂಗಾಡಿನಲ್ಲಿ ಗುರುತೇ ಉಳಿಯದಂತೆ ಎಲ್ಲಿಯೋ ಸುರಿದ ನಾಲ್ಕು ತುಂತುರು ಹನಿಮಾತ್ರ.

ಸೃಷ್ಟಿ ಸಾಹಿತ್ಯ ಕ್ಷೇತ್ರದಲ್ಲಿ ವಾಸ್ತವವಾದದ ಹೆದ್ದಾರಿಯನ್ನೇನೋ ಕೆಲವರು ತುಳಿದರು. ಹೆಮ್ಮೆಪಡುವಂತಹ ಕೃತಿಗಳು ಕೆಲವು— ನಾಟಕಗಳು, ಕವಿತೆಗಳು, ಕೆಲ ಕತೆ ಕಾದಂಬರಿಗಳು— ಸೃಷ್ಟಿಯಾದುವು. ನೀರು ನಿಂತಲ್ಲೇ ನಿಂತಿತೇನೋ ಎಂದು ಕಂಡಾಗ, ಪ್ರಗತಿಶೀಲತೆಯ ಬಿರುಗಾಳಿಯೊಂದು ಬೀಸಿ, ತೆರೆಗಳನ್ನೆಬ್ಬಿಸಿ ದಂಡೆಗೆ ಬಡೆದು ಕೋಲಾಹಲವನ್ನುಂಟುಮಾಡಿತು. ಇಷ್ಟಿದ್ದರೂ ಕಂಡುಬರುವುದೇನು? ನಾವು ಕ್ರಮಿಸಿರುವ ಹಾದಿ ಸ್ವಲ್ಪವೇ — ಬಲು ಸ್ವಲ್ಪವೇ.

ಈ ಶತಮಾನದಲ್ಲಿ ದೇಶ ಸ್ವತಂತ್ರವಾದುದೇ ನಾವು ಕಂಡ ಮಹಾಸಂಭವ. ಆದರೆ ಯಾದವೀಕಲಹದ ಹೊಗೆ ಬಂಧವಿಮುಕ್ತರ ಉಸಿರು ಕಟ್ಟಿಸಿತು. ದೇಶದ ವಿಭಜನೆ, ಅನಂತರದ ಮಾರಣ ಹೋಮ, ನಮ್ಮೆಲ್ಲರ ಹೃದಯದಮೇಲೆ ಬರೆ ಎಳೆಯಿತು. ಕತ್ತಲೆಯ ಕನಸಿನಲ್ಲಿ ಕಂಡುದನ್ನು ಬೆಳಕಿನಲ್ಲಿ ನಾವು ಹುಡುಕಿದೆವು. ನಮಗೆ ದೊರತುದು ನಿರಾಶೆಯ ಪ್ರತಿಫಲ. ಸೂಕ್ಷ್ಮಜೀವಿಯಾದ ಬರೆಹಗಾರನಿಗಂತೂ ಆ ಭ್ರಮೆ ನಿರಸನ ಕುಠಾರಪ್ರಾಯವಾದದ್ದು. ಅದರ ನೇರವಾದ ಪರಿಣಾಮವನ್ನು ನಾವು ಕಾಣುವುದು ಆತನ ಕೃತಿಗಳಲ್ಲೇ. ಬದುಕಿನಿಂದ ವಿಮುಖನಾದ ಬರೆಹಗಾರ ಪರದ ಚಿಂತನೆಯೊಂದನ್ನೇ ಮಾಡಿದ; ಇಲ್ಲವೆ ಭಾವಲೋಕದಲ್ಲಿ ಮೈಮರೆತ; ಅಥವಾ ಅತಿಶಯವಾದ ವಿಷಯಾಸಕ್ತಿಯ ಜಾರುಗುಂಡಿಯಲ್ಲಿ ತಳವಿಲ್ಲದ ಆಳಕ್ಕೆ ಇಳಿದ. ಆತ ಮಾಡಿದುದೇ ಆತನ ಕೃತಿಯಲ್ಲಿ ಒಡಮೂಡಿತು.

ಈ ದಿನದ ಸಾಹಿತ್ಯಸೃಷ್ಟಿಯಲ್ಲಿ ಅನಿಷ್ಟಕಾರಕವೆಂದು ನನಗೆ ಅನಿಸುವ ಕೆಲ ಪ್ರವೃತ್ತಿಗಳನ್ನು ಕುರಿತು ಒಂದೆರಡು ಮಾತು ಇಲ್ಲಿ ಹೇಳಬೇಕು. ಸಾಮಾಜಿಕ ಜೀವನದಿಂದ, ಜೀವನ ಪ್ರವಾಹದಿಂದ, ದೂರಹೋಗುವ ಬರೆಹಗಾರನಿಗೆ ಒಳ್ಳೆಯ ನಿದರ್ಶನವೆಂದರೆ ನಮ್ಮ ನವ್ಯ ಕವಿ. ಈಗ ಈತ ಸೃಷ್ಟಿಸುವುದು ವೈಯಕ್ತಿಕ ಕಾವ್ಯವನ್ನು, ಮಾತನಾಡುವುದು ವೈಯಕ್ತಿಕ ಪ್ರತಿಮೆಗಳ ಮೂಲಕ. ಕವಿವಾಣಿ ವಿಶ್ವವಾಣಿಯಾಗುವ ಕಾಲ ಕಳೆದಂತೆಯೇ! ಈ ಸಿನಿಕತನ, ನಿರಾಶಾವಾದ, ವಕ್ರ ತಾತ್ತ್ವಿಕ ದೃಷ್ಟಿ — ಎಷ್ಟು ಸರಿಯೋ ಎಷ್ಟು ತಪ್ಪೋ, ಓದುಗರಿಗೆ ಅದು ತಿಳಿದರೆ ತಾನೆ? ಯಾಕೆ ಹೀಗೆ— ಎಂದು ನವ್ಯಕವಿಯನ್ನು ಕೇಳಿನೋಡಿ. ದೊರೆಯುವ ಉತ್ತರ ಎಂಥದು? "ನಾನು ಬರೆಯೋದು ಇವತ್ತು ಹತ್ತೇಜನರಿಗೆ ತಿಳಿದರೂ ಸಾಕು. ನಾಳೆಯ ಜನರೆಲ್ಲ ನನ್ನ ಕೃತಿಯನ್ನು ಖಂಡಿತವಾಗಿಯೂ ಕೊಂಡಾಡುವರು." ಇಂಗ್ಲೆಂಡಿನಲ್ಲಿ ಕವಿತೆಗೆ ಎಂತಹ ಗತಿ ಒದಗಿತೆಂಬುದು ಪ್ರಾಯಶಃ ಈ ಸ್ನೇಹಿತರಿಗೆ ತಿಳಿಯದು. ಅಲ್ಲಿ 1800ನೆಯ ಇಸವಿಯಲ್ಲಿ ನೂರರಲ್ಲಿ ತೊಂಬತ್ತರಷ್ಟು ಜನ ನಿರಕ್ಷರರಾಗಿದ್ದರು. ಆಗ ಸಾಮಾನ್ಯ ಓದುಗರ ಸಂಖ್ಯೆ

1,50,000. ಇಪ್ಪತ್ತನೆಯ ಶತಮಾನದ ಮಧ್ಯಂತರದಲ್ಲಿ ಸಾಮಾನ್ಯ ಓದುಗರ ಸಂಖ್ಯೆ ಎರಡು ಕೋಟಿ. ಆಗ ಓದುಗರ ಸಂಖ್ಯೆ ಅಷ್ಟೊಂದು ಕಡಮೆ ಇದ್ದರೂ ಕವಿತಾಸಂಗ್ರಹಗಳು ಈಗಿನದಕ್ಕಿಂತ ಹೆಚ್ಚು ಮಾರಾಟವಾಗುತ್ತಿದ್ದುವು. ಅದಕ್ಕೇನು ಕಾರಣ? ಕಳೆದ ಮೂರು ದಶಕಗಳಿಂದ ನವ್ಯಕವಿತೆ ಬರೆಯುತ್ತಿರುವ ಆಂಗ್ಲ ಕವಿಗಳು ಆ ಪ್ರಶ್ನೆಗೆ ಉತ್ತರ ಕೊಡಬೇಕು. ಅಂಕೆ ಸಂಖ್ಯೆಗಳು ಕಲಿಸುವ ಅಮೂಲ್ಯ ಪಾಠವನ್ನು ನಮ್ಮವರು ದಯವಿಟ್ಟು ಗಮನಿಸಬೇಕು.

ನಾಟಕಗಳಂತೂ ಹಾಸ್ಯರಸ ಒಂದಿದ್ದರಾಯಿತೆನ್ನುವುದು ಪ್ರಚಲಿತ ಮತ. 'ಇಗ್ಗಪ್ಪ ಹೆಗ್ಗಡೆಯ ವಿವಾಹ ಪ್ರಹಸನ'ದ ಪರಂಪರೆ ನಮಗೆ ತಿಳಿದಿರಲಿಲ್ಲವೆನ್ನೋಣ. ಆದರೆ, ನಮಗೆ ಪರಿಚಿತರಾದ ಷಾ, ಇಬ್ಸೆನ್, ಮಾಲಿಯರರ ವಿಷಯವೇನು? ಕೈಲಾಸಂ ಕಣ್ಮರೆಯಾದರೆಂದು, ಅವರು ತುಳಿದ ಹೆದ್ದಾರಿಯನ್ನು ಮರೆಯೋಣವೇ?

ಕನ್ನಡದ ಸಣ್ಣಕತೆಗಳನ್ನು ನಮ್ಮ ಕತೆಗಾರರೇ ಸಾಯಬಡೆದರು. ಆ ಬಡಕೈಗಳಿಗೆ ಬಡಿಗೆಯನ್ನು ಒದಗಿಸಿಕೊಟ್ಟವನು ವ್ಯಾಪಾರೀ ಪ್ರಕಾಶಕ.

ಹರಟೆ–ಪ್ರಬಂಧಗಳ ಮಾತು, ಆ ಚಿಲ್ಲರೆಯವರನ್ನು 'ಹೇಗಿದೀರಪ್ಪಾ?' ಎಂದು ವಿಚಾರಿಸುವವರಾದರೂ ಯಾರು?

ಕತ್ತಿನವರೆಗೂ ಕಳೆತುಂಬಿದ ಫಲಪುಷ್ಪಗಳ ತೋಟವೊಂದೇ, ಕಾದಂಬರಿಯದು. ಇಲ್ಲಿನ ನೆಗೆತ ಕಸರತ್ತುಗಳೋ ಅದ್ಭುತ. ಜನಪ್ರಿಯ ಸರಕೆಲ್ಲ ಸಂತೆಗೋಸ್ಕರ ನೇಯುವ ಮೂರು ಮೊಳ. ಅದನ್ನು ಸಿದ್ಧಗೊಳಿಸಿದ ಕಂಪೆನಿಯ ಹಳೆಯ ಪ್ರಸಿದ್ಧಿಯ ಮೇಲಿಂದಲೇ ಅದರ ಮಾರಾಟವಾಗಬೇಕು. ಕೃತಿಯ ವಸ್ತುವಿಗೆ ಅನುಗುಣವಾಗಿ ಸ್ವರೂಪ [ತಂತ್ರ–ಶೈಲಿ], ಎಂದು ನೀವೆಲ್ಲಾದರೂ ಭಾವಿಸಬಹುದು. ಆದರೆ ನಮ್ಮ ಆಧುನಿಕ ಕಾದಂಬರಿಕಾರ ಮೊದಲು ತಂತ್ರವನ್ನು ಸೃಷ್ಟಿಸುತ್ತಾನೆ; ಬಳಿಕ ವಸ್ತುವನ್ನು! ಮನಶ್ಶಾಸ್ತ್ರ ವಿಜ್ಞಾನದೊಂದು ಶಾಖೆ ಎಂದು ನಾವೆಲ್ಲ ಒಪ್ಪಿದ್ದೇವೆ. ತನ್ನ ಪಾತ್ರಗಳನ್ನು ಸರಿಯಾಗಿ ತಿಳಿದುಕೊಳ್ಳಲು ಬರೆಹಗಾರನಿಗೆ ಆ ಶಾಸ್ತ್ರ ನೆರವಾಗುತ್ತದೆಂಬುದೂ ನಿಜ. ಪ್ರತಿಯೊಂದು ಸಾಹಿತ್ಯ ಕೃತಿಯಲ್ಲೂ ಪಾತ್ರಪೋಷಣೆಯಲ್ಲಿ ಮನೋವಿಶ್ಲೇಷಣೆಯ ಸಾಮರ್ಥ್ಯ ಕಂಡು ಬರಲೇಬೇಕು. ಆದರೆ ನಾವು ಮಾತ್ರ ಕಾದಂಬರೀ ರೂಪದಲ್ಲಿ ಬರೆಯುವುದು ಮನೋರೋಗವನ್ನು ಕುರಿತಾದ ನಿಬಂಧವನ್ನು. ನಮ್ಮ ದೃಷ್ಟಿಯಲ್ಲಿದು ಮುಂದುವರಿದ ನಾಗರಿಕತೆ; ನಾವು ಸಾಧಿಸಿರುವ ವೈಜ್ಞಾನಿಕ ಪ್ರಗತಿ! ಇದರ ಜತೆಯಲ್ಲೇ ಕಾಣುವಿರಿ— ಅದ್ಭುತ ಪವಾಡಗಳ ಚಿತ್ರಣವನ್ನು. ದೇವ ದೇವತೆಯರನ್ನೂ ನಾಚಿಸುವಂತಹ ಪಾತ್ರಗಳು. ಮಾನವನ ಆತ್ಮವಿಶ್ವಾಸವೆಲ್ಲ ನಷ್ಟವಾಗಿ ಕುರುಡು ನಂಬಿಕೆಗೇ ಅಂಟಿಕೊಳ್ಳುವಂತೆ ಮಾಡುವ ಯತ್ನ. ಅನಂತ ತ್ರಿಕೋಣದ ಹಾವಳಿಯಂತೂ ಕೇಳಲೇ ಬೇಡಿ. ಇದು ಬೇಸರವಾಯಿತೆಂದು ನೀವು ದೃಷ್ಟಿ ಹೊರಳಿಸುವುದು ಗತಕಾಲದ ಕಥೆಗಳ ಕಡೆಗೆ. ಅಲ್ಲಿಯಂತೂ ನಮ್ಮದು ಲೀಲಾಜಾಲವಾದ ನೆಯ್ಗೆ. ಎದುರಿಗಿರುವ ವಸ್ತುವಾದರೆ ಜವಾಬ್ದಾರಿ ಹೆಚ್ಚು. ಹಿಂದಿನದು ಎಂದಬಳಿಕ ನಾವಾಡಿದುದೇ ಸತ್ಯ. ಈ ದಿನದ ಇರುವಿಕೆಗೂ ನಾಳೆಯ ಬದುಕಿಗೂ ನಿನ್ನೆಯ ಚಿತ್ರ ನೆರವಾಗಬೇಕೆಂಬುದೆಲ್ಲ ಎಲ್ಲಿಯ ವಾದ? ಯಾವ ಆಧಾರಗಳೂ ಇಲ್ಲದ ಐತಿಹಾಸಿಕ ಸರಸಕಲ್ಪನೆಯ ಪ್ರವೃತ್ತಿಯೇ ಹೊಸದು!

ಇನ್ನು ಪತ್ತೇದಾರಿ ಕಾದಂಬರಿಗಳನ್ನೆತ್ತಿಕೊಂಡಿರೋ, ಅಲ್ಲಿರುವ ಚಿತ್ರಣಕ್ಕೂ ನಮ್ಮ ಬದುಕಿಗೂ ನಡುವೆ ಇರುವುದು ಹಲವು ಸಹಸ್ರ ಹರದಾರಿಗಳ ಅಂತರ . . . .

ಈ ಕುರಿತು ಯೋಚಿಸಿದ ಬಳಿಕ, ಕನ್ನಡದಲ್ಲಿ ಒಳ್ಳೆಯ ಕಾದಂಬರಿಗಳು ಬಂದೇ ಇಲ್ಲವೆಂದು ಯಾರೂ ಹೇಳಬಾರದು. ವಿಮರ್ಶಕಬುದ್ಧಿಯುಳ್ಳ ಯಾರೂ ಹಾಗೆ ಹೇಳಲಾರರು. ಮೇಲಿನ ನಿರೂಪಣೆಗಳಿಗೆ ಅಪವಾದಗಳು ಇದ್ದೇ ಇವೆ. ಆದರೆ ಎಷ್ಟೇ ಅಪವಾದಗಳಿದ್ದರೂ ವೈಜ್ಞಾನಿಕ ನೋಟವುಳ್ಳ, ಬದುಕಿನ ಸಮಗ್ರಚಿತ್ರವನ್ನು ಕೊಡುವ, ಒಂದು ಪಾತ್ರದ ಮೂಲಕ ಹೆಚ್ಚು ಕಡಮೆ ಅಂತಹದೇ ಸಾವಿರ ವ್ಯಕ್ತಿಗಳ ಪರಿಚಯ ಮಾಡಿಸುವ, ವಿಚಾರವೂ ಕಲೆಯೂ ಸಮರಸಹೊಂದಿರುವ, ಕೃತಿಗಳ ಸಂಖ್ಯೆ ಬಲು ಬಡಕಲು.

ಇದೀಗ ನಮ್ಮ ದುರವಸ್ಥೆ; ನಾವು ಸಿಲುಕಿ ಬಿದ್ದಿರುವ ವಿಷವ್ಯೂಹ. ನಮ್ಮ ಸಾಹಿತ್ಯ ಈ ಎಲ್ಲ ಬಂಧನಗಳನ್ನು ಕಡಿದೊಗೆದು ಝಾಡಿಸಿ ಮುಂದಕ್ಕೆ ಧಾವಿಸುವುದು ಸಾಧ್ಯವಿಲ್ಲವೆ? ಸತ್ಯದ ಸಾಮರ್ಥ್ಯವನ್ನು ಬಲ್ಲ ಯಾವ ಸೌಂದರ್ಯೋಪಾಸಕನೂ 'ಇಲ್ಲ' ಎನ್ನಲಾರ.

## ಆಹ್ವಾನ

ಇದೊಂದು ಪರ್ವಕಾಲ. ಸಂದೇಹ ಸಂಶಯಗಳ ಕಲುಷಿತ ವಾತಾವರಣದಲ್ಲೂ ವಿಶ್ವಬಂಧುತ್ವದ ಕಿರುಧ್ವನಿ ಮೋಹಕವಾಗಿ ಒರಲುತ್ತಿದೆ. ಮಾರಣಾಸ್ತ್ರಗಳ ಪ್ರಯೋಗಾರ್ಥ ಸ್ಫೋಟನದಿಂದ ಕಿವಿಯೊಡೆಯುತ್ತಿದ್ದರೂ ವಿಶ್ವಶಾಂತಿಯ ಗುಂಯಾರವ ಕೇಳಿ ಬರುತ್ತಿದೆ. ಪ್ರಕೃತಿಯ ಮೇಲೆ ಮಹಾವಿಜಯಗಳನ್ನು ಸಾಧಿಸಿದ ಮಾನವ, ವಿಜ್ಞಾನವನ್ನು ಲೋಕ ಕಲ್ಯಾಣಕ್ಕಾಗಿ ಬಳಸಲು ಪಣತೊಟ್ಟಿದ್ದಾನೆ. ಒಂದೆಡೆ, ಭಾರತ ಸ್ವಾತಂತ್ರ್ಯದ ಸುಂದರ ಕಲ್ಪನೆ ದಿಟವಾಗುತ್ತಿರುವಂತೆಯೇ, ಇನ್ನೊಂದೆಡೆ, ಕನ್ನಡ ಜನಕೋಟಿಯ ಕನಸಿನ ರಾಜ್ಯದ ಮಂಗಳೋದಯವಾಗುತ್ತಿದೆ. ಸಮಾಜವಾದದ ಮುಂಬೆಳಗಿನಿಂದ ಭಾರತದ ಪ್ರಜೆ ಎಚ್ಚರಗೊಂಡಿದ್ದಾನೆ. ವಿಶ್ವದ ಪ್ರಜೆ. ಜನತೆಯ ಜತೆಸೇರಿ ತಮ್ಮ ಬದುಕನ್ನೂ ಬದಲಾಯಿಸಲು ಭಾರತೀಯರು ಬದ್ಧಕಂಕಣರಾಗಿದ್ದಾರೆ. ಭಾರತ ರಾಷ್ಟ್ರದ ಅಭಿಮಾನ ಧನನಾಗುವ ಸದವಕಾಶ ಕನ್ನಡಿಗನಿಗೆ ಈಗ ದೊರೆತಿದೆ.

ಇಂತಹ ಸನ್ನಿವೇಶದಿಂದ ನಮ್ಮ ಕಲಾವಿದರೆಲ್ಲರ, ಬರಹಗಾರರೆಲ್ಲರ, ಮೈ ಪುಲಕಗೊಳ್ಳದೆ ಇರುವುದು ಸಾಧ್ಯವೆ?

ಸಾಕ್ಷರರ ಸುಸಂಸ್ಕೃತರ ನಾಡಾಗಬೇಕು ಈ ಭೂಮಿ; ಸುಖ ಸಮೃದ್ಧಿಯ ಬೀಡಾಗಬೇಕು; ವಿಶ್ವಮಾನ್ಯತೆಗೆ ಅರ್ಹವಾದ ಸಾಹಿತ್ಯ ಕಲೆಗಳ ಆಗರವಾಗಬೇಕು. ಈ ಕಾರ್ಯಸಾಧನೆಯಲ್ಲಿ ನಾವು ನಿರ್ವಹಿಸಬೇಕಾಗಿರುವ ಪಾತ್ರ ಹಿರಿದು.

ಇಪ್ಪತ್ತೇಳು ವರ್ಷಗಳಿಗೆ ಹಿಂದೆ ಕಲಬುರ್ಗಿಯ ಸಾಹಿತ್ಯ ಸಮ್ಮೇಳನದಲ್ಲಿ ಮಾತನಾಡುತ್ತ 'ಶ್ರೀ'ಯವರೆಂದರು:—

> "ನಾವು, ಕನ್ನಡಿಗರು, ಇಂದು, ಸತ್ತವರನ್ನು ಎಬ್ಬಿಸುವುದೇ ಅಲ್ಲ; ಬದುಕಿರುವವರನ್ನು ಎಚ್ಚರಗೊಳಿಸುವುದಕ್ಕೆ ಹೊರಟಿರುವೆವು. ಹಿಂದಿನ ಸಾಹಿತ್ಯವನ್ನು ಪ್ರಯೋಜನಕಾರಿಯಾಗಿ ಮಾಡುವುದಕ್ಕೆ ಅಲ್ಲ; ಹೊಸ ಉತ್ತಮ

ಸಾಹಿತ್ಯವೊಂದನ್ನು ಸೃಷ್ಟಿ ಮಾಡುವುದಕ್ಕೆ ಹೊರಟಿರುವೆವು. ಹೊರಟವರು, ವಿಲಾಸವತಿಯ ಕೊರಳಿನ ಪುಷ್ಪಮಾಲಿಕೆಯೇ ಅಲ್ಲ; ಸಾಹಿತ್ಯ, ಮಾನವ ಜೀವನದ ಪುನರ್ನಿರ್ಮಾಣಕಾರ್ಯದಲ್ಲಿ ಬದ್ಧಕಂಕಣವಾಗಿರುವ ವೀರನ ಕೈಯಿನ ಖಡ್ಗವೂ ಅಹುದೆಂದು ತಿಳಿದಿರುವೆವು."

ಕನ್ನಡದ ಪುನರುದಯಕಾಲದ ಆ ಶಂಖಧ್ವನಿ, ಈ ನವೋದಯಕಾಲದಲ್ಲೂ ಮತ್ತೆ ಮೊಳಗುವುದು ಸಮಂಜಸವಾಗಿದೆ.

ಸತ್ಯದ ಆರಾಧಕರಾದ ನಾವು ಇನ್ನು ವೀರಕಚ್ಚೆಯನ್ನು ಬಿಗಿಯೋಣ. ಜ್ಞಾನದ ಹಸಿವಿನಿಂದ ಬಳಲುತ್ತಿರುವ ಜನಕೋಟಿಯನ್ನು ವಿಚಾರದ ಚೇತಣಕ್ಕೆ ಕರೆಯೋಣ. ಬದುಕನ್ನು ಸುಂದರಗೊಳಿಸುವ ಮಹಾಯಜ್ಞದ ಯಶಸ್ಸಿಗೋಸ್ಕರ ನಮ್ಮ ಲೇಖನಿಯ ಕಲಾ ಸಾಮರ್ಥ್ಯವನ್ನು ಮುಡುಪಾಗಿಡೋಣ. ಎಲ್ಲ ಬರೆಹಗಾರಬಾಂಧವರಿಗಿದು ಆಹ್ವಾನ! ಬನ್ನಿ !

---

**ನಾಟಕ ಗೋಷ್ಠಿಯಲ್ಲಿ ಮಾ. ನಾ. ಚೌಡಪ್ಪನವರು ಮಾಡಿದ ಭಾಷಣ (ಮುಂದುವರಿದುದು)**

ನಮ್ಮ ದೇಶದಲ್ಲಿ ಅನೇಕ ಮಂದಿ ಉದಾರಿಗಳಿದ್ದಾರೆ. ಜನರ ಧಾರ್ಮಿಕ, ದೈಹಿಕ, ಮಾನಸಿಕ ಹಿತವನ್ನು ಬಯಸಿ ದೇವಾಲಯಗಳನ್ನು ವೈದ್ಯಶಾಲೆಗಳನ್ನು ವಿದ್ಯಾಮಂದಿರಗಳನ್ನು ಕಟ್ಟಿಸಿದ್ದಾರೆ. ಅದರೆ ಅವರ ದೃಷ್ಟಿ ರಂಗಭೂಮಿಯ ಸೇವೆಯ ಕಡೆಗೆ ಇರಲಿಲ್ಲ. ಹಿಂದೆ ಕಾರಣಾಂತರಗಳಿಂದ ನಾಟಕ ಕಲೆಗೆ ಸಂಬಂಧಿಸಿದವರ ವಿಚಾರವಾಗಿ ಹೀನಭಾವನೆ ಉಂಟಾಗಿ, ಸಾರ್ವಜನಿಕರಿಗೂ ರಂಗಭೂಮಿಗೂ ಇರಬೇಕಾದ ನಿಕಟಸಂಬಂಧ ಸೌಹಾರ್ದಗಳು ತಪ್ಪಿ ಹೋಗಿದ್ದಿತು. ಉದಾರಿಗಳ ದೃಷ್ಟಿ ನಮ್ಮ ರಂಗಭೂಮಿಯ ಸೇವೆಯ ಕಡೆಗೆ ಬೀಳಲಿಲ್ಲ. ಈಗ ಪರಿಸ್ಥಿತಿ ಬದಲಾಯಿಸಿದೆ. ನಮ್ಮ ಜನಜೀವನದಲ್ಲಿ ರಂಗಭೂಮಿ, ವಿದ್ಯಾಲಯಗಳಷ್ಟೇ ಮುಖ್ಯವೆಂಬ ಭಾವನೆ ಅಂಕುರಿಸಿದೆ. (ಸರ್ಕಾರಗಳೂ ಈ ಅಂಶವನ್ನು ಅಂಗೀಕರಿಸಿವೆ.) ಸರ್ಕಾರ, ಸ್ಥಳೀಯ ಸಂಸ್ಥೆಗಳು, ಶ್ರೀಮಂತರು ದೇಶದ ಮೇಲೆಲ್ಲಾ ರಂಗಮಂದಿರಗಳನ್ನು ಕಟ್ಟುವಂತಾಗಬೇಕು. ಅವುಗಳ ಉಪಯೋಗ ನಾಟಕಪ್ರಯೋಗದಲ್ಲಿ ಆಸಕ್ತರಾದವರಿಗೆ ಅತ್ಯಲ್ಪ ವೆಚ್ಚದಲ್ಲಿ ದೊರೆಯುವಂತಾಗಬೇಕು. ಮೇಲಿಂದ ಮೇಲೆ ನಾಡಿನ ಮೂಲೆ ಮೂಲೆ ಗಳಲೆಲ್ಲಾ ನಾಟಕಪ್ರಯೋಗ ನಡೆಯುವಂತಾಗಬೇಕು. ಈ ಬಗ್ಗೆ ಒಂದು ದೊಡ್ಡ ಪ್ರಭಾವಶಾಲಿ ಯಾದ, ಪರಿಣಾಮಕಾರಿಯಾದ ರಾಷ್ಟ್ರೀಯ ಚಳವಳಿಯೇ ಏರ್ಪಡಬೇಕು.

ರಂಗಭೂಮಿ ನಮ್ಮದು — ಅದನ್ನು ನಾವು ಉಳಿಸಿಕೊಳ್ಳಬೇಕು, ಬೆಳೆಸಿಕೊಳ್ಳಬೇಕು ಎಂಬ ಆಸೆ, ಆಕಾಂಕ್ಷೆಗಳು ನಮ್ಮ ಜನವರ್ಗದಲ್ಲಿ ಬೆಳೆಯ ಬೇಕು. ಹೀಗೆ ಜನತೆಯ ಹೃದಯ ದಲ್ಲಿ ರೂಪುಗೊಂಡ ನಾಟಕಾಸಕ್ತಿಯ ತಳಹದಿಯ ಮೇಲೆ ನಮ್ಮ ರಾಷ್ಟ್ರೀಯ ರಂಗಭೂಮಿಯ ಮಹಾಸೌಧವನ್ನು ನಿರ್ಮಿಸಬೇಕು

ಆಗಮಾತ್ರ ಅದು, ನಮ್ಮ ರಾಷ್ಟ್ರ, ಸಂಸ್ಕೃತಿಗಳಿಗೆ ತಕ್ಕ ಪ್ರತೀಕವಾಗಿ ರೂಪುಗೊಂಡು, ಚಿರಕಾಲ ಬಾಳುತ್ತದೆ. ಹಾಗೆ ಆಗಲಿ, ಬೇಗ ಹಾಗೆ ಆಗಲಿ ಎಂಬುದೇ ರಂಗಭೂಮಿಯ ಪ್ರೇಮಿಗಳ ಹಾರೈಕೆ.

---

‡

# 38ನೆಯ ಕನ್ನಡ ಸಾಹಿತ್ಯ ಸಮ್ಮೇಳನ, ರಾಯಚೂರು

## ಲೇಖಕ ಗೋಷ್ಠಿಯಲ್ಲಿ
## ಶ್ರೀ ತ. ಶ್ರೀಕಂಠಯ್ಯನವರು ಮಾಡಿದ ಭಾಷಣ

27-12-1955

ವಿಷಯ : **ಸಣ್ಣಕತೆಗಳು**

ಲೇಖಕ ಗೋಷ್ಠಿಯ ಅಧ್ಯಕ್ಷ ಮಹಾಶಯರೆ, ಕನ್ನಡದ ಹಿರಿಯರೆ, ಮತ್ತು ಕಿರಿಯರೆ,

ಕನ್ನಡದ ಸಣ್ಣಕತೆಗಳನ್ನು ಕುರಿತು ಒಂದು ಭಾಷಣಮಾಡಬೇಕೆಂದು ಸಾಹಿತ್ಯ ಸಮ್ಮೇಳನದ ಸ್ವಾಗತ ಸಮಿತಿಯವರಿಂದ ಕರೆ ಬಂದಾಗ, ಸಣ್ಣಕತೆಗಳನ್ನು ಕುರಿತಲ್ಲವೇ? ಪರವಾಗಿಲ್ಲವೆಂದು ಒಪ್ಪಿಕೊಂಡುಬಿಟ್ಟೆ. ಆದರೆ, ಅದರ ಸಿದ್ಧತೆಗಾಗಿ ಪ್ರಾರಂಭಮಾಡಿದಾಗ, ಸಣ್ಣಕತೆಗಳ ಸಾಹಿತ್ಯದ ಬೃಹದಾಕಾರ ಮನದಟ್ಟಾಯಿತು; ಅದರ ಇತಿಹಾಸ ಅನಾದಿಯಾದುದೆಂದು ಮನವರಿಕೆಯಾಯಿತು; ಅದರ ವಸ್ತುವಿನ ವಿರಾಟ್ ಸ್ವರೂಪ ವಿರಾಟ್‌ಪುರುಷನಂತೆಯೇ ವಿಶ್ವವ್ಯಾಪಿಯೆಂಬುದೂ ತಿಳಿಯಬಂದಿತು. ಇಂತಹ "ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು" ಎಂಬ ನಾಣ್ಣುಡಿಯನ್ನು ಸಿದ್ಧಾಂತ ಮಾಡಿಕೊಟ್ಟಿರುವ ವಿಷಯವನ್ನು ಕುರಿತು ನಾಲ್ಕು ಮಾತುಗಳನ್ನು ಹೇಳಲು ಅವಕಾಶಕೊಟ್ಟ ಸಮ್ಮೇಳನದ ಸ್ವಾಗತ ಸಮಿತಿಯವರಿಗೆ ಕೃತಜ್ಞತೆಯನ್ನು ಮೊದಲಿನಲ್ಲಿ ಸೂಚಿಸಿ, ಮುಂದಿನ ಕಾರ್ಯವನ್ನು ಕೈಗೊಳ್ಳುತ್ತೇನೆ.

ಕನ್ನಡದ ಸಣ್ಣ ಕತೆಗಳ ಮೂಲ ಕನ್ನಡ ಕಾವ್ಯಗಳಂತೆಯೇ ಸಂಸ್ಕೃತ ಸಾಹಿತ್ಯದಲ್ಲಿ–ವೈದಿಕ ಸಾಹಿತ್ಯದಲ್ಲಿ–ಎಂದು ಹೇಳಬಹುದು. ಇದರ ಇತಿಹಾಸ ಅನಾದಿಯೆಂದು ಮೊದಲುಹೇಳಿ, ಈಗ ಇದರ ಮೂಲ ವೈದಿಕ ಸಾಹಿತ್ಯದಲ್ಲಿ ಹೇಳಿದರೆ ನನ್ನ ಹೇಳಿಕೆ ಸಮಂಜಸವಾಯಿತೇ? ಇಲ್ಲ ಮಾನವನು ಮಾತುಕಲಿತು, ತಾನು ಸಮಾಜ ಜೀವಿಯೆಂದು ಮನಗಂಡು, ಪ್ರಪಂಚದಲ್ಲಿ ಬದುಕಲು ಪ್ರಾರಂಭಮಾಡಿದಾಗಲೇ ತನ್ನ ಅನುಭವವನ್ನು ಅಥವಾ ತನ್ನ ಆಲೋಚನೆಯನ್ನು ತನ್ನ ಸಹಜೀವಿಗೆ ಹೇಳಬೇಕಾದ್ದು ಅನಿವಾರ್ಯವೆನಿಸಿತು; ಅದನ್ನು (ತನ್ನ ಅನುಭವವನ್ನು ಅಥವಾ ಆಲೋಚನೆಯನ್ನು) ಹೇಳಿದನು. ಅದು – ಆ ಅನುಭವದ ವರ್ಣನೆ–ಕಥನವೇ ಅಲ್ಲವೇ? "ಕಥೆ" ಎಂಬುದು ಸಂಸ್ಕೃತರೂಪ. "ಕಥ್" ಎಂಬ ಧಾತುವಿನಿಂದ ಹುಟ್ಟಿದುದು; "ಹೇಳು" ಎಂಬುದು ಅದರ ಅರ್ಥ; ಕಥಾ ಎಂಬುದು ಸಂಸ್ಕೃತರೂಪ; ಅದು ಕಥೆ ಎಂಬ ರೂಪವನ್ನು ಹೊಂದಿ ಈಗ "ಕತೆ" ಆಗಿದೆ. ಈ ಕಾರಣದಿಂದ ಈ ಕಥೆಯು "ಕಥನ" ಎಂದರೆ ಹೇಳಿಕೆ ಎಂಬ ಅರ್ಥವನ್ನು ಕೊಡುತ್ತದೆ. ಆದ್ದರಿಂದ ನಮಗೆ ದೊರಕಿರುವ ವೈದಿಕ ಸಾಹಿತ್ಯದಲ್ಲಿ ಇದು ದೊರಕಿದೆಯಾದರೂ, ಇದು ಅದಕ್ಕೂ ಹಿಂದೆ, ಮನುಷ್ಯನು ಯೋಚಿಸಿದ್ದು, ಸಾಹಿತ್ಯ ರೂಪವನ್ನು ತಳೆಯುವುದಕ್ಕೆ

ಬಹಳ ಮುಂಚೆಯೇ, ಇದ್ದಿರಬೇಕು. ಹೀಗೆ ಅನಾದಿ ಎನಿಸಿದರೂ ಇದರ ಆದಿಯನ್ನು ಸಂಸ್ಕೃತ ಸಾಹಿತ್ಯದಲ್ಲಿ ಕಂಡುಕೊಂಡು ತೃಪ್ತಿ ಹೊಂದಬೇಕಾಗಿದೆ.

ಸಂಸ್ಕೃತ ಧ್ವನ್ಯಾಲೋಕಕಾರನು ಕಥೆಗಳನ್ನು ಹಲವು ವಿಧವಾಗಿ ವಿಂಗಡಿಸಿ, ಪರಿಕಥಾ, ಖಂಡಕಥಾ, ಸಕಲಕಥಾ, ಆಖ್ಯಾಯಿಕಾ, ಕಥಾ, ಎಂಬುದನ್ನು ಹೆಸರಿಸಿದ್ದಾನೆ. ಅವುಗಳಲ್ಲಿ ಮೊದಲನೆಯ ಮೂರು ಪ್ರಾಕೃತಭಾಷೆಯಲ್ಲಿವೆಯೆಂದೂ 'ಆಖ್ಯಾಯಿಕೆ, ಕಥೆ'ಗಳು ಗದ್ಯದಲ್ಲಿಯೇ ವಿಶೇಷವಾಗಿ ರಚಿತವಾಗಿದೆಯೆಂದೂ ತಿಳಿಸುತ್ತಾನೆ. ಕಥೆ ಆಖ್ಯಾಯಿಕೆಗಿಂತ ಚಿಕ್ಕದು ; ಇವೆರಡಕ್ಕೂ ಹೆಚ್ಚಿನ ವ್ಯತ್ಯಾಸವಿಲ್ಲ. ಈ ಕಥೆ ನಡೆದದ್ದಾಗಿರಬಹುದು, ಕೇಳಿದ್ದಾಗಿರಬಹುದು, ಕಲ್ಪಿತವಾಗಿರಬಹುದು. ಇದನ್ನೇ ನಾಗವರ್ಮನು ಕಾವ್ಯಾವಲೋಕನದಲ್ಲಿ "ಗದ್ಯದೊಳೆ ಸಮೆದುಮಂತವು ಹೃದ್ಯವಚಃಪ್ರೌಢಿಗಳ ಕಥಾಖ್ಯಾಯಿಕೆಯೊಳ್" ಎಂದು ಹೇಳಿರುವುದು. ನಾಗವರ್ಮನು ಹೇಳಿರುವ "ಹೃದ್ಯವಚಃ" ಎಂಬುದು 'ಕಥಾಮೃತದ' ಪೀಠಿಕೆಯಲ್ಲಿ ಶ್ರೀ ಎ. ಆರ್. ಕೃ. ಅವರು ತಿಳಿಸಿರುವ "ಕಥಾಯಾಂ ಸರಸಂ ವಸ್ತು" ಎಂಬುದಕ್ಕೆ ಸಂವಾದಿಯಾಗಿದೆ ಎನ್ನಬಹುದು. ಆದ್ದರಿಂದ ಸ್ವಾರಸ್ಯವೇ ಕಥೆಯ ಜೀವಾಳ.

ವೇದ, ಬ್ರಾಹ್ಮಣ, ಆರಣ್ಯಕ, ಉಪನಿಷತ್ತುಗಳಲ್ಲಿಯೂ ಕಥೆಗಳು ಇವೆ. ಅಲ್ಲಿ ಯಜ್ಞಯಾಗಾದಿಗಳನ್ನು ಸಮರ್ಥಿಸುವುದಕ್ಕಾಗಿಯೋ ಧರ್ಮ, ನೀತಿ ಅಥವಾ ಜ್ಞಾನವನ್ನು ಉಪದೇಶಿಸುವುದಕ್ಕಾಗಿಯೋ ಕಥೆಗಳು ಬಂದಿವೆ. ಪುರಾಣಗಳಂತೂ ಕಥೆಗಳ ಆಗರ. ಸಣ್ಣ–ದೊಡ್ಡ ಕಥೆಗಳೇ ಪುರಾಣಗಳು; ನೀತಿ ಬೋಧೆಯೇ ಅವುಗಳ ಉದ್ದೇಶ. ಹಾಗಿದ್ದರೂ ವೈದಿಕ–ಪೌರಾಣಿಕ ಕಥೆಗಳಲ್ಲೂ ಅನೇಕವು ಸರಸವಾಗಿವೆ ಎಂಬುದನ್ನು ಮರೆಯಲಾಗದು. ಗುಣಾಢ್ಯನ 'ಬೃಹತ್ ಕಥೆ' ಬಹಳ ಪುರಾತನವಾದದ್ದು. ಅದರ ಮೂಲ ಪೈಶಾಚಿ ಭಾಷೆಯಲ್ಲಿದ್ದು, ಸಂಸ್ಕೃತಕ್ಕೆ ಪರಿವರ್ತಿತವಾಗಿದೆ. ಇದರ ಕಥೆಗಳೆಲ್ಲವೂ ಘಟನಾಪ್ರಧಾನವಾದುವೆಂದು ಹೇಳಬಹುದು. ವರ್ಣನೆ ಗೌಣ, ಉದ್ದೇಶ ನೀತಿಬೋಧೆ. ಸಂಸ್ಕೃತ ಸಾಹಿತ್ಯದಿಂದ ಮತ್ತೊಂದು ಉದಾಹರಣೆಯೆಂದರೆ ಪಂಚತಂತ್ರ. ಈ ಪಂಚತಂತ್ರದ ನೀತಿಕಥೆಗಳು ರಾಜಕೀಯವನ್ನೂ ಬೋಧಿಸಿವೆ. ಇವೆರಡರಲ್ಲೂ ಸ್ವಾರಸ್ಯಕ್ಕೇನೂ ಕಡಿಮೆ ಇಲ್ಲ. "ಬೃಹತ್‌ಕಥೆ" ಮೂಕ ಪ್ರಾಣಿಗಳಿಗೂ ಆಹಾರ-ನಿದ್ರೆಗಳನ್ನು ಬಿಡುವಷ್ಟು ಸ್ವಾರಸ್ಯವಾದುದೆಂದು ಹೇಳುವುದೂ ವಾಡಿಕೆ. ಅಲ್ಲಿಂದ ಮುಂದಿನ ಉದಾಹರಣೆಯೆಂದರೆ "ದಶಕುಮಾರಚರಿತೆ" ಎಂಬ ಸಂಸ್ಕೃತ ಗದ್ಯಕಾವ್ಯ. ಇದರಲ್ಲಿನ ಕಥೆಗಳು ಕಲ್ಪಿತವಿದ್ದು, ಕುತೂಹಲ ಜನಕವೂ ಚಮತ್ಕಾರಕವೂ ಸಾಹಸಮಯವೂ ಆಗಿವೆ. ಸಂಸ್ಕೃತ ಸಾಹಿತ್ಯದಿಂದ ಇಷ್ಟು ಮಾತ್ರ ಉದಾಹರಿಸಿ ಕನ್ನಡದ ಪ್ರಾಚೀನ ಸಾಹಿತ್ಯದ ಕಡೆಗೆ ಹೊರಳೋಣ.

ಹಳಗನ್ನಡ ಸಾಹಿತ್ಯದಲ್ಲಿ "ವೊಡ್ಡಾರಾಧನೆ" ಮೊದಲನೆಯ ಕಥಾ ಗ್ರಂಥವೆನ್ನಬಹುದು. ಅದರಲ್ಲಿಯೂ ಧರ್ಮ, ನೀತಿ, ವೈರಾಗ್ಯ ಇವುಗಳ ಬೋಧನೆಯೇ ಮುಖ್ಯ ಉದ್ದೇಶ. ಕಥೆಗಳು ಸರಸವಾಗಿವೆ. ಅನಂತರ ನಯಸೇನನ ಧರ್ಮಾಮೃತದ ಉದಾಹರಣೆಯನ್ನು ಹೇಳಬಹುದು, ಇದರಲ್ಲಿ ಜೈನಧರ್ಮ ನಿರೂಪಣೆಯೇ ಮುಖ್ಯವಾದರೂ ಕಥಾ ಸ್ವಾರಸ್ಯವೂ ಉಂಟು. ಇನ್ನು ಸ್ವಲ್ಪ ಮುಂದೆ ಬಂದರೆ, ಹರಿಹರ ಕವಿಯ ಕೆಲವು ಚಿಕ್ಕ ರಗಳೆಗಳನ್ನು ಕಥೆಗಳೆಂದು ಕರೆಯಬಹುದು. ಕನ್ನಡದ ಒಂದು ಮಹಾಕಾವ್ಯವಾದ ಲಕ್ಷ್ಮೀಶನ ಜೈಮಿನಿ ಭಾರತದಲ್ಲಿ ಅನೇಕ ಸುಂದರ ಕಥೆಗಳಿವೆ. ಚಂಡಿಯ ಕಥೆ,

ಲವಕುಶರ ವೃತ್ತಾಂತ, ಚಂದ್ರಹಾಸನ ಕಥೆ– ಇವು ಕೆಲವು ಉದಾಹರಣೆಗಳು. ಈ ಲಕ್ಷ್ಮೀಶನ ಕಥೆಗಳಲ್ಲಿ ಆಧುನಿಕ ಸಣ್ಣ ಕತೆಗಳ ಬಹುಲಕ್ಷಣಗಳೂ ಸ್ವಾರಸ್ಯವೂ ಉಂಟು. ಅಂತೆಯೇ ಮುದ್ದಣನ "ರಾಮಾಶ್ವಮೇಧ"ದಲ್ಲಿಯೂ "ಅದ್ಭುತ ರಾಮಾಯಣ"ದಲ್ಲಿಯೂ ಕಥೆಗಳೆನ್ನಿಸಿಕೊಳ್ಳಬಹುದಾದ ಅನೇಕ ಸ್ವಾರಸ್ಯ ಪ್ರಸಂಗಗಳಿವೆ. ಮೇಲೆ ಹೇಳಿದ ಕಥೆಗಳೆಲ್ಲವೂ ಜನಗಳ ಮನಸ್ಸನ್ನು ಕಥೆಯ ಕಡೆಗೆ ಒಲಿಸಿ ಮನೋಭೂಮಿಯನ್ನು ಹದಗೊಳಿಸಿದ್ದವೆಂದು ಹೇಳಬಹುದು. ಇಂಥ ಸಮಯದಲ್ಲಿ ಆಧುನಿಕ ಸಣ್ಣಕತೆ ಅಂಕುರಿಸಲು ಮೊದಲುಮಾಡಿತು. ಇಡೀ ಪ್ರಪಂಚದ ಕ್ಷೇತ್ರವನ್ನೇ ವೀಕ್ಷಿಸಿದರೂ ಸಣ್ಣ ಕತೆಯ ವಯಸ್ಸು ಇನ್ನೂ 100 ವರ್ಷವನ್ನು ಮೀರಿಲ್ಲ. ಕನ್ನಡ ಸಾಹಿತ್ಯದಲ್ಲಿಯಾದರೋ, ಹೆಚ್ಚೆಂದರೆ ಸುಮಾರು ನಲವತ್ತು ವರ್ಷದ ಕೃಷಿಯ ಬೆಳೆಯೆಂದು ಹೇಳಬಹುದು.

ಹಾಗಾದರೆ ನಾವು ಉದಾಹರಿಸಿದ ಸಂಸ್ಕೃತ ಮತ್ತು ಕನ್ನಡ ಸಾಹಿತ್ಯದ ಕಥೆಗಳಿಗೂ ಈ ಆಧುನಿಕ ಕಥೆಗಳಿಗೂ ಏನೂ ಸಂಬಂಧವಿಲ್ಲವೇ? ಹಿಂದಿನ ಕಥೆಗಳ ಸ್ವರೂಪಕ್ಕೂ ಈ ಸಣ್ಣ ಕತೆಯ ಸ್ವರೂಪಕ್ಕೂ ವ್ಯತ್ಯಾಸವೇನು?– ಎಂಬೀ ಮೊದಲಾದ ಪ್ರಶ್ನೆಗಳು ಏಳುತ್ತವೆ. ನಾವು ಇದುವರೆಗೆ ಪರೀಕ್ಷಿಸಿದ ಕತೆಗಳು ಧರ್ಮ, ನೀತಿಗಳನ್ನು ಭೋಧಿಸುವುವಾಗಿಯೋ, ಘಟನೆಗಳನ್ನು ವರ್ಣಿಸುವುವಾಗಿಯೋ ಕುತೂಹಲ– ಸಾಹಸಮಯವಾಗಿಯೋ ಇದ್ದವು ಎಂಬ ಅಂಶವನ್ನು ಮರೆಯಬಾರದು. ಅವು ಸಂಪೂರ್ಣ ಕಥನಗಳೇ ಆಗಿದ್ದವು ಎನ್ನಬಹುದು. ಆದರೆ ಆಧುನಿಕ ಕತೆಗಳನ್ನು ಆಂಗ್ಲಭಾಷೆಯಲ್ಲಿ "Short Story" ಎನ್ನುವುದರ ಭಾಷಾಂತರದಿಂದ "ಸಣ್ಣ ಕತೆ" ಎನ್ನುವುದು ವಾಡಿಕೆಯಾಗಿದೆ. ಈ ಸಣ್ಣ ಕತೆಯ ಲಕ್ಷಣವನ್ನು ಪಾಶ್ಚಾತ್ಯ ಸಾಹಿತ್ಯದಿಂದ ತೆಗೆದುಕೊಂಡಿದ್ದೇವೆ.

ಪಾಶ್ಚಾತ್ಯರ ಸಣ್ಣ ಕತೆಗೆ ಮೂಲಪುರುಷ ಅಮೆರಿಕಾ ದೇಶದ ಎಡ್ಗರ್ ಅಲೆನ್‌ಪೋ ಎಂಬಾತನು. ಆತನು ಸಣ್ಣ ಕತೆಯ ಲಕ್ಷಣವನ್ನು ಹೇಳುವಾಗ "ಅರ್ಧ ಗಂಟೆಯಿಂದ ಹಿಡಿದು ಒಂದು ಅಥವಾ ಎರಡು ಗಂಟೆಗಳೊಳಗೆ ಓದಿ ಮುಗಿಸಬಹುದಾದ "ಗದ್ಯಕಥನ" ಎಂದು ಹೇಳಿದ್ದಾನೆ. ವ್ರೆಂಡರ್ ಮ್ಯಾಥ್ಯೂ (Vrender Mathew) ಎಂಬಾತನು "ಒಂದೇ ಸಂದರ್ಭದಿಂದ ಉದ್ಭವಿಸಿದ ಭಾವಪರಂಪರೆಯನ್ನಾಗಲಿ ಒಂದೇ ಪಾತ್ರವನ್ನಾಗಲಿ ಕುರಿತು ಸಣ್ಣಕತೆ ವಿವರಿಸುತ್ತದೆ. ಸಣ್ಣಕತೆ ಸರ್ವಾಂಗ ಪರಿಪೂರ್ಣವಾಗಿರಬೇಕು" ಎಂದು ಹೇಳಿದ್ದಾನೆ. ಎಚ್. ಜಿ. ವೆಲ್ಸ್‌ರು "ಮುಖ್ಯವಾಗಿ, ಓದಲು ಹದಿನೈದರಿಂದ ಐವತ್ತು ನಿಮಿಷಗಳು ಹಿಡಿಯುವಂಥದೂ, ಭಯಂಕರವೋ, ಕರುಣಾಜನಕವೋ, ಹಾಸ್ಯಪೂರ್ಣವೋ, ಸುಂದರವೋ ಪೂರ್ಣಬೋಧಪ್ರದವೋ, ಆಗಿರಬಹುದು" ಎಂದಿದ್ದಾರೆ. ಇನ್ನೂ ಅನೇಕರು ಅನೇಕವಿಧವಾಗಿ ಸಣ್ಣ ಕತೆಯ ಸ್ವರೂಪವನ್ನು ಸೂತ್ರಪ್ರಾಯವಾಗಿ ಹೇಳಿದ್ದಾರೆ. ಅವುಗಳನ್ನೆಲ್ಲಾ ಪರಿಶೀಲಿಸಿ ಸ್ಥೂಲವಾಗಿ ನಾವು ಒಂದು ತೀರ್ಮಾನಕ್ಕೆ ಬರಬಹುದೆಂದು ಕಾಣುತ್ತದೆ; ಆಗಲೇ ಬಂದಿದ್ದೇವೆ.

ಸಣ್ಣ ಕತೆಯಲ್ಲಿ ವಸ್ತುವಿಗಿಂತ ರಚನಾಕೌಶಲ ಮುಖ್ಯ. ಆ ಕೌಶಲದಿಂದಲೇ ಯಾವ ರಚನೆಯಾದರೂ ಕಲೆಯೆನಿಸಿಕೊಳ್ಳುವುದು. ಕಲೆಯ ಉದ್ದೇಶ ಆನಂದ. ಆದ್ದರಿಂದ ಕತೆಗಾರ ಯಾವ ವಿಷಯವನ್ನಾದರೂ ರಸವತ್ತಾಗಿ ವರ್ಣಿಸಿ ಓದುಗನ ಮನಸ್ಸಿನ ಮೇಲೆ ಒಂದು ವಿಶಿಷ್ಟ ಪರಿಣಾಮವನ್ನು ಉಂಟುಮಾಡುತ್ತಾನೆ. ಸಣ್ಣ ಕತೆಯಲ್ಲಿ ಜೀವನದ ಒಂದೇ ಒಂದು ಚಿತ್ರವನ್ನು ಚಿತ್ರಿಸಬಹುದು ಅಥವಾ ಅನೇಕ ಅಂಶಗಳು ಬಂದಿರಬಹುದು.

ಕತೆ ನಡೆಯುವ ಕಾಲ ಒಂದೇ ದಿನ ನಡೆದದ್ದಾಗಿರಬಹುದು ಅಥವಾ ನಡುವೆ ಅನೇಕ ವರ್ಷಗಳು ಉರುಳಿ ಹೋಗಿರಬಹುದು: ವಸ್ತು, ಪಾತ್ರರಚನೆ, ಆವರಣ– ಇವೆಲ್ಲಾ ಒಂದೇ ಪರಿಣಾಮವನ್ನು ಉಂಟು ಮಾಡುವಂತೆ ಇರಬೇಕು. ಕತೆಗಾರನು ಯಾವ ವಸ್ತು ವನ್ನಾದರೂ ಆರಿಸಿಕೊಳ್ಳಬಹುದು. ತಾನು ಕಂಡ ನೋಟವನ್ನೋ, ತಾನು ಕೇಳಿದ ಸಂಗತಿಯನ್ನೋ, ತಾನು ಕಂಡ ಕನಸನ್ನೋ, ತನ್ನ ಯಾವುದೇ ಒಂದು ಅನುಭವವನ್ನೋ ಕುರಿತು ಕತೆಯನ್ನು ಬರೆಯಬಹುದು. ತನ್ನ ಮನಸ್ಸಿಗೆ ತಟ್ಟಿದ ಸಂಗತಿಗೆ ಒಂದು ರೂಪು ಕೊಟ್ಟು ಬಿತ್ತರಿಸುವುದೇ 'ಸಣ್ಣ ಕತೆ' ಎನ್ನಬಹುದು. ಅದರ ಆ ರೂಪು ಹೀಗೇ ಇರ ಬೇಕೆಂದು ನಿರ್ಧರವಾಗಿ ಹೇಳುವಂತಿಲ್ಲ. ಅದು ವರ್ಣನಾತ್ಮಕವಾಗಿರಬಹುದು; ಸಂಭಾ ಷಣಾತ್ಮಕವಾಗಿರಬಹುದು; ಪತ್ರಾತ್ಮಕವಾಗಿರಬಹುದು; ದಿನಚರಿಯ ಲೇಖಾತ್ಮವಾಗಿರ ಬಹುದು. ಇದಿಷ್ಟೂ ಅದರ ಹೊರ ರೂಪದ ಮಾದರಿಗಳು. ಇನ್ನು ಅದರ ಒಳರೂಪವನ್ನು ನೋಡಿದರೆ, ಕೆಲವು ಘಟನಾ ಪ್ರಧಾನವಾದುವು; ಕೆಲವು ಆವರಣ ಪ್ರಧಾನವಾದುವು, ಕೆಲವು ಚಾರಿತ್ರ್ಯ ಪ್ರಧಾನವಾದುವು. ಮತ್ತೆ ಕೆಲವು ಮನೋವಿಶ್ಲೇಷಣ ಪ್ರಧಾನ ವಾದುವು.

ಸಣ್ಣ ಕತೆಗಳು ಮೊದಮೊದಲು ತಾವು ನೋಡಿದ ಅಥವಾ ಕೇಳಿದ ಸಂಗತಿಯ ವರ್ಣನೆಯಿಂದ ಪ್ರಾರಂಭವಾಗಿ, ಕುತೂಹಲ ಹುಟ್ಟಿಸುವ ಸಲುವಾಗಿ ಸಾಹಸಮಯ ವಾಯಿತು ಎನ್ನಬಹುದು, ಅನಂತರ ಅದೂ ಬಾಲ್ಯಾವಸ್ಥೆಯನ್ನು ದಾಟಿ ಯೌವನಾಸ್ಥೆಗೆ ಬಂದಾಗ ತನ್ನ ಅಭಿರುಚಿಯನ್ನು ಬದಲಾಯಿಸಿತು. ಆಗ ಪಾತ್ರ ಪ್ರಧಾನವಾಗಿ ಪಾತ್ರಗಳ ಶೃಂಗಾರ ಚೇಷ್ಟೆಯೇ ಮೊದಲಾದವು ಸೌಂದರ್ಯವಾಹಕವಾದುವು. ಇನ್ನೂ ಮುಂದೆ ಸಣ್ಣ ಕಥೆ ಪ್ರೌಢಾವಸ್ಥೆಗೆ ಬಂದು ತರ್ಕ ಅಥವಾ ಮನೋವಿಶ್ಲೇಷಣವು ಪ್ರಧಾನ ವಾಯಿತು ಎನ್ನಬಹುದು.

ಇನ್ನು ಸಣ್ಣ ಕತೆಗೂ ಕಾದಂಬರಿಗೂ ಇರುವ ಸಂಬಂಧವನ್ನು ಪರಿಶೀಲಿಸೋಣ. ಕಾದಂಬರಿಯಲ್ಲಿ ವರ್ಣನೆ, ಪಾತ್ರನಿರೂಪಣೆ, ಆವರಣ ಪ್ರಾಧಾನ್ಯ ಸಂಭಾಷಣೆಯ ಚಮತ್ಕಾರ, ರಸಪರಿಪೋಷಣೆ– ಇವೆಲ್ಲವೂ ಇರುತ್ತವೆ, ಕಾದಂಬರಿ ಸಮಸ್ತ ಜೀವನ ವನ್ನು ಪ್ರತಿಬಿಂಬಿಸುತ್ತದೆ; ಅದನ್ನೂ ಸಾಕಷ್ಟು ವಿಸ್ತೃತರೀತಿಯಲ್ಲಿ. ಸಣ್ಣ ಕತೆ ಕಾದಂಬರಿಯ ಸಂಕ್ಷಿಪ್ತ ರೂಪವಲ್ಲ. ಜೀವನದ ಒಂದು ಸರಸ ಭಾಗವನ್ನು ಪ್ರತಿಬಿಂಬಿ ಸುವುದು. ಕಾದಂಬರಿಯ ತಂತ್ರಕ್ಕೂ ಸಣ್ಣಕತೆಯ ತಂತ್ರಕ್ಕೂ ಬಹಳ ವ್ಯತ್ಯಾಸವಿದೆ. ಆದ್ದರಿಂದ ಸಣ್ಣ ಕತೆ ಕಿರು ಕಾದಂಬರಿಯೂ ಅಲ್ಲ. ಸಂಕ್ಷಿಪ್ತ ಕಾದಂಬರಿಯೂ ಅಲ್ಲ. ಸಣ್ಣ ಕತೆ ಸ್ವಯಂಪೂರ್ಣವಾದ ಒಂದು ಕಲಾರೂಪ, ಮಹಾಕಾವ್ಯಕ್ಕೂ ಭಾವಗೀತೆಗೂ, ಅನೇಕಾಂಕ ನಾಟಕಕ್ಕೂ ಏಕಾಂಕ ನಾಟಕಕ್ಕೂ, ಇರುವ ಸಂಬಂಧವೂ ಇಷ್ಟೇ. ಸಣ್ಣ ಕಥೆಯನ್ನು ಆನೆಯ ದಂತದಲ್ಲಿ ಕೆತ್ತಿರುವ ಕುಸುರಿಗೆಲಸಕ್ಕೂ ಕಾದಂಬರಿಯನ್ನು ದೊಡ್ಡ ಕೆತ್ತನೆಯ ಕೆಲಸಕ್ಕೂ ಹೋಲಿಸಬಹುದು.

ಇಷ್ಟೆಲ್ಲಾ ಸಣ್ಣ ಕಥೆಯ ವಿಷಯವಾದ ಪೀಠಿಕೆಯನ್ನು ತಿಳಿದುಕೊಂಡರೂ ಸಣ್ಣ ಕತೆಯನ್ನು ಬರೆಯುವ ಗುಟ್ಟು ಗೊತ್ತಾಯಿತೆಂದು ಹೇಳುವಂತಿಲ್ಲ. ಅದರ ಸಂಪೂರ್ಣ ರಹಸ್ಯ ಅದನ್ನು ಬರೆಯುವ ಸಾಮರ್ಥ್ಯವಿರುವವನಲ್ಲಿರುವ ಗುಪ್ತ ಶಕ್ತಿ. ಅದನ್ನು ಅವನೂ ವಿವರಿಸಿ ಹೇಳಲಾರನು. ಎಲ್ಲಾ ಪ್ರಾಕಾರದ ಕಾವ್ಯ ನಿರ್ಮಾಣಕ್ಕೂ ಪ್ರತಿಭೆ ಮೂಲ

ವಷ್ಟೆ ! ಇಲ್ಲಿಯೂ ಅಷ್ಟೆ ! ಆದ್ದರಿಂದ ಪ್ರತಿಭೆ ಇರುವವರು ಪ್ರಯೋಗದಿಂದ ಪ್ರಾವೀಣ್ಯ ವನ್ನು ಪಡೆಯುವರೇ ವಿನಾ ಅನ್ಯಥಾ ಅಲ್ಲ. "ಮೈಸೂರುಪಾಕ್" ಎಂಬ ಭಕ್ಷ್ಯವನ್ನು ತಯಾರು ಮಾಡುವುದರ ರೀತಿಯನ್ನೂ ಅದರ ರುಚಿಯ ವರ್ಣನೆಯನ್ನೂ ಎಷ್ಟು ಹೇಳಿದರೆ ತಾನೆ ಅದನ್ನು ತಯಾರು ಮಾಡಲು ಸಾಮಾನ್ಯನಿಗೆ ಬಂದೀತು? ಅಡಿಗೆ ಮಾಡುವುದರಲ್ಲಿ ಪಳಗಿದ ಕೈ ಉಳ್ಳವರು ಅದನ್ನು ಸಾಧಿಸಿ ರುಚಿಯಾಗಿ ಮಾಡಿಕೊಡಲು ಸಮರ್ಥರಾಗಿರು ತ್ತಾರೆ; ಅಂತೆಯೇ ಈ ಕಥೆಯ ರಚನಾ ಸಾಮರ್ಥ್ಯವೂ ಎನ್ನಬಹುದು. ಇದರಲ್ಲಿ ಅಭಿರುಚಿ ಇರುವವರು ಹೆಸರಾದ ಕಥೆಗಾರರ ಕಥಾ ಸಂಕಲಗಳನ್ನು ಎಡಬಿಡದೆ ಓದಬೇಕಾದುದು ಮುಖ್ಯ.

ಇಷ್ಟು ತಿಳಿದುಕೊಂಡಮೇಲೆ, ಪಾಶ್ಚಾತ್ಯರಲ್ಲಿ ಮುಖ್ಯರಾದ ಸಣ್ಣ ಕಥೆಗಾರರ ಹೆಸರನ್ನು ತಿಳಿದುಕೊಳ್ಳುವುದು ಅಪ್ರಸಕ್ತವಾಗಲಾರದು. ಅಮೇರಿಕಾ ದೇಶದ ಎಡ್ಗರ್ ಆಲ್ಲೆಪೋ ಇದರ ಮೂಲಪುರುಷನೆಂದು ಹಿಂದೆಯೇ ಹೇಳಿದೆವು. ಅಮೇರಿಕಾದಲ್ಲಿಯೇ ಅವನನ್ನು ಅನುಸರಿಸಿ ಪ್ರಸಿದ್ಧರಾದವರೆಂದರೆ ಹಾಥಾರ್ನ್, ಬ್ರೆಟ್ ಹಾರ್ಟ್, ಓಹೆನ್ರಿ ಮೊದಲಾದವರು. ಫ್ರಾನ್ಸ್ ದೇಶದಲ್ಲಿ ಮೊಪಾಸಾ, ಫ್ಲಾಬೋ, ಜೋಲಾ ಸಣ್ಣ ಕಥೆ ಗಾರರಲ್ಲಿ ಪ್ರಸಿದ್ಧರು. ಅದರಲ್ಲಿಯೂ ಮೋಪಾಸಾ ಪ್ರಪಂಚದಲ್ಲೆ ಉತ್ತಮ ಕಥೆಗಾರ ನೆಂದು ಹೆಸರು ಪಡೆದಿದ್ದಾನೆ. ಇಂಗ್ಲೆಂಡಿನಲ್ಲಿ ಸ್ಟೀವನ್ಸನ್, ಕ್ಯಾಥರೀನ್, ಮ್ಯಾನ್ಸ್ ಫೀಲ್ಡ್, ವೆಲ್ಸ್, ಜೇಕಬ್ಸ್ ಮುಂತಾದವರು ಪ್ರಸಿದ್ಧ ಕಥೆಗಾರರೆಂದು ಹೆಸರು ಪಡೆದಿ ದ್ದಾರೆ. ಅಂತೆಯೇ ಪುಷ್ಕಿನ್, ಟರ್ಗನೀವ್, ಟಾಲ್‌ಸ್ಟಾಯ್, ಚೆಕಾವ್, ಗಾರ್ಕಿ — ಇವರು ರಷ್ಯಾ ದೇಶದಲ್ಲಿ ಪ್ರಸಿದ್ಧರಾದ ಕಥೆಗಾರರು. ರಷ್ಯಾ ದೇಶದ ಕಥೆಗಾರರು ವೈವಿಧ್ಯ ವನ್ನು ಉಳಿದವರಿಗಿಂತಲೂ ಹೆಚ್ಚು ಸಾಧಿಸಿದ್ದಾರೆಂದು ಹೇಳಬಹುದೆಂದು ವಿದ್ವಾಂಸರ ಅಭಿಪ್ರಾಯ.

ಸಾಮಾನ್ಯವಾಗಿ ಕಥೆಯ ಗುಣ ಅದರ ನಿರರ್ಗಳ ಶೈಲಿ, ಸ್ವಾಭಾವಿಕವೂ ಸರಸವೂ ಆದ ಸಂಭಾಷಣೆ, ಪ್ರಭಾವಯುತವಾದ ಪ್ರಾರಂಭ ಮತ್ತು ಮುಗಿತಾಯ ವಾತಾವರಣಕ್ಕೆ ತಕ್ಕ ವರ್ಣನೆ– ಇವುಗಳಲ್ಲಿ ಅಡಗಿದೆ ಎಂದು ಹೇಳಬಹುದು.

ಕನ್ನಡ ನಾಡಿನಲ್ಲಿ ಈ ಸಣ್ಣ ಕಥೆಯ ಪ್ರಭಾವ ಇಂಗ್ಲಿಷ್ ವಿದ್ಯಾಭ್ಯಾಸ ಮಾಡಿದ ಕನ್ನಡಿಗರ ಮೇಲೆ ಮೊದಲು ಬಿತ್ತೆಂದು ಹೇಳಬಹುದು. ಕನ್ನಡದ ಸಣ್ಣ ಕಥೆ ಸುಮಾರು ನಲವತ್ತು ವರ್ಷ ಪ್ರಾಯದ್ದೆಂದು ಹೇಳಿದರೂ ಸುಮಾರು 1920ರ ವರೆಗೂ ಅದು ಬಹಳ ಬಾಲ್ಯಾವಸ್ಥೆಯಲ್ಲಿದ್ದು ಬಾಲಾರಿಷ್ಟದಿಂದಲೂ ದುರ್ಬಲತೆಯಿಂದಲೂ ನರಳುತ್ತಿದ್ದಿರಬೇಕು. ಇತ್ತೀಚೆಗೆ ಪ್ರಕಟವಾದ ಶ್ರೀ ಎಸ್. ಜಿ. ಶಾಸ್ತ್ರಿಗಳ ಮೊದಲನೆಯ ಕಥಾಸಂಕಲನದಿಂದ ಅವರು 1913 ರಲ್ಲಿಯೇ ಕಥೆ ಬರೆಯಲು ಪ್ರಾರಂಭಿಸಿದ್ದರೆಂಬ ಅಂಶವು ಸೂಚಿತವಾಗಿದೆ. ಆ ಬಾಲ್ಯಾವಸ್ಥೆಯಲ್ಲಿ ಇಂಗ್ಲಿಷಿನ ಪ್ರಭಾವ ಎದ್ದು ಕಾಣುತ್ತಿದ್ದು, ಕ್ರಮೇಣ ಅದು ಕನ್ನಡದ ಜಾಯಮಾನಕ್ಕೆ ಹೊಂದಿಕೊಂಡು ಸಂಪೂರ್ಣವಾಗಿ ತನ್ನ ತನವನ್ನು ಪಡೆಯಿತು. ಆ ಮೊದಲ ದಶೆಯಲ್ಲಿ ಶ್ರೀನಿವಾಸರ ಹೆಸರು ಪ್ರಮುಖವಾದುದು. ಅವರನ್ನೇ ಕನ್ನಡಲೋಕ ಸಣ್ಣ ಕಥೆಗಳ "ಜನಕ" ಎಂದು ಕರೆಯುವುದು. ಅವರ ಕಥೆಗಳು ಕಲಾ ಪೂರ್ಣವಾಗಿ ಹೊರಗೆ ಬಂದವುಗಳಲ್ಲಿ ಮೊದಲನೆಯವು ಆಗಿದ್ದ ಕಾರಣ ಅವರಿಗೆ ಆ ಹೆಸರು, ಪ್ರಸಿದ್ಧಿ. ಅವರಿಗಿಂತ ಮುಂಚೆ ಅಲ್ಲದಿದ್ದರೂ ಅವರ ಜೊತೆ ಜೊತೆಗೇ ಸಣ್ಣ ಕಥೆಯಲ್ಲಿ ವ್ಯವಸಾಯ

ನಡೆಸುತ್ತಿದ್ದವರೆಂದರೆ ಶ್ರೀ ಕೆರೂರು ವಾಸುದೇವಾಚಾರ್ಯರು, ಶ್ರೀ ಎಂ. ಎನ್. ಕಾಮತ್, ಶ್ರೀ ಪಂಜೆ ಮಂಗೇಶರಾಯರು. ಆದ್ದರಿಂದಲೇ ಶ್ರೀ ರಂ. ಶ್ರೀ. ಮುಗಳಿಯವರು ಸೀತೆಗೆ ಜನಕರಾಜನು ಹೇಗೆ ತಂದೆಯೋ ಹಾಗೆ ಶ್ರೀನಿವಾಸರು ಸಣ್ಣ ಕಥೆಗೆ "ಜನಕ" ರೆಂದು ಅರ್ಥಯುಕ್ತವಾಗಿ ಹೇಳಿದ್ದಾರೆ. ಹೀಗೆ ಶ್ರೀನಿವಾಸರಿಂದ ಒಂದು ರೂಪನ್ನೂ ಕಲಾವಂತಿಕೆಯನ್ನೂ ಪಡೆದ ಕನ್ನಡ ಸಣ್ಣಕತೆ ಈಗ ವಿಶ್ವದ ಸಣ್ಣ ಕತೆಗಳ ಕ್ಷೇತ್ರದಲ್ಲಿ ಯೋಗ್ಯ ಸ್ಥಾನವನ್ನೂ, ಮರ್ಯಾದೆಯನ್ನೂ ಪಡೆಯುವಂತಾಗಿದೆ; ಪಡೆದಿದೆ. ಕನ್ನಡ ಕತೆಗಳಲ್ಲಿ ಅನೇಕವು ಬೇರೆ ಬೇರೆ ಭಾರತೀಯ ಭಾಷೆಗಳಿಗೆ ಪರಿವರ್ತಿತವಾಗಿರುವುದೇ ಅಲ್ಲದೇ, ಶ್ರೀನಿವಾಸರ ಅನೇಕ ಕತೆಗಳು ಇಂಗ್ಲಿಷಿಗೆ ಅನುವಾದಿತವಾಗಿವೆ. ಶ್ರೀನಿವಾಸರ ವಸ್ತುವಿನ ಆಯ್ಕೆ, ದೃಷ್ಟಿ, ತಿಳಿಹಾಸ್ಯ, ಶೈಲಿಯ ಸರಳತೆ, ಪಾತ್ರಗಳ ಗಂಭೀರಸ್ವಭಾವ ಇವುಗಳು ಕನ್ನಡ ಕಥಾಲೋಕಕ್ಕೆ ಮಾರ್ಗದರ್ಶಕವಾಗಿವೆ. ಅವರ ಕತೆಗಳು ಅನೇಕ ಸಂಪುಟಗಳಲ್ಲಿ ಹರಿದಿವೆ. ಅವರ "ಸುಬ್ಬಣ್ಣ"ನನ್ನು ಸಣ್ಣ ಕತೆಯ ಒಂದು ಮಾದರಿಯೆಂದೇ ಕರೆಯುವವರೂ ಇದ್ದಾರೆ. ಸಣ್ಣ ಕತೆ ಒಂದು ಪ್ರಭಾವಯುತವಾದ ಕುತೂಹಲ ಪರಮಾವಧಿಯನ್ನು ಮುಟ್ಟುತ್ತದೆ; ಅದೊಂದು ಸಣ್ಣಕತೆಯ ಸಲ್ಲಕ್ಷಣ ಎಂಬುದಕ್ಕೆ 'ರಂಗಸಾಮಿಯ ಅವಿವೇಕ," 'ಬೀದಿಯಲ್ಲಿ ಹೋಗುವ ನಾರಿ,' 'ಇಂದಿರೆಯೋ ? ಅಲ್ಲವೋ ?' 'ನಮ್ಮ ಮೇಷ್ಟರು' ಎಂಬ ಕತೆಗಳನ್ನು ಉದಾಹರಣೆಗೆ ತೆಗೆದುಕೊಳ್ಳಬಹುದು. ಅವುಗಳಲ್ಲಿ 'ಇಂದಿರೆಯೋ? ಅಲ್ಲವೋ?' ಎಂಬುದನ್ನು ಒಂದು ವಿಧವಾದ ಮನೋವೈಜ್ಞಾನಿಕ ಕತೆಯೆಂದೂ ಹೇಳಬಹುದೆಂದು ತೋರುತ್ತದೆ. ಇವರ 'ರಂಗಪ್ಪನ ದೀಪಾವಳಿ,' 'ರಂಗಪ್ಪನ ಕೋರ್ಟ್‌ಷಿಪ್'—ಇವುಗಳಲ್ಲಿ ಕಾಣಬಹುದಾದ ತಿಳಿಹಾಸ್ಯ, ಬಹಳ ಉತ್ತಮವಾದುದು.

ಹೀಗೆ ಈ ನಾಲ್ಕೈದು ಮಂದಿಗಳ ವ್ಯವಸಾಯದಿಂದ ಚೆನ್ನಾಗಿ ಬೆಳೆದ ಸಣ್ಣ ಕತೆ ಮುಂದಿನ ಹಂತಕ್ಕೆ ಕಾಲಿಟ್ಟಿತೆನ್ನಬಹುದು. ಇದರಲ್ಲಿ ಗೋಪಾಲಕೃಷ್ಣರಾಯರು, ಆನಂದ, ಕುವೆಂಪು, ಅ. ನ. ಕೃ., ಕೃಷ್ಣಕುಮಾರ, ರಾಜರತ್ನಂ, ಆನಂದಕಂದ, ಕಾರಂತ, ಎಸ್. ಜಿ. ಶಾಸ್ತ್ರಿ, ಪು. ತಿ. ನ., ಸಿ. ಕೆ. ವಿ., ಶ್ರೀಪತಿ, ಅಶ್ವತ್ಥ, ಗೊರೂರು ರಾಮಸ್ವಾಮಯ್ಯಂಗಾರ್, ದೇವುಡು, ತಾ. ರಾ. ಸು., ಸೌ॥ ಗೌರಮ್ಮ, ಶ್ಯಾಮಲಾದೇವಿ ಎಚ್. ವಿ. ಸಾವಿತ್ರಮ್ಮ—ಇತ್ಯಾದಿ, ಇತ್ಯಾದಿ—ಸುಮಾರು ನೂರಕ್ಕೂ ಮಿಕ್ಕ ಕತೆಗಾರರಿಂದ ಬೆಳೆದಿದೆ, ಬೆಳೆಯುತ್ತಿದೆ ಎನ್ನಬಹುದು. ಈ ಎರಡನೆಯ ವಿಭಾಗದವರನ್ನು ದೃಷ್ಟಿ ಆವೇಶ, ರೀತಿ, ಇವುಗಳ ದೃಷ್ಟಿಯಿಂದ ಎರಡು ಪಂಗಡಗಳಾಗಿ ಮಾಡಬಹುದು. ಆನಂದ, ಆನಂದಕಂದ, ಗೋಪಾಲಕೃಷ್ಣರಾಯ, ಅ. ನ. ಕೃ., ಕುವೆಂಪು,—ಇಂಥವರನ್ನು ಎರಡನೆಯ ಹಂತದವರೆಂದೂ, ತ. ರಾ. ಸು., ಕುಳಕುಂದ, ಶರ್ಮಾ, ಮೊದಲಾದವರನ್ನು ಮೂರನೆಯ ಹಂತದವರೆಂದೂ ಕರೆಯಬಹುದು. ಈ ನೂರು—ನೂರೈವತ್ತಕ್ಕೂ ಮಿಕ್ಕ ಎಲ್ಲ ಕತೆಗಾರರ ಕೃತಿಗಳನ್ನೂ ವಿಮರ್ಶೆ ಮಾಡುವುದು ಇಲ್ಲಿ ಸಾಧ್ಯವೂ ಅಲ್ಲ; ಅಪೇಕ್ಷಣೀಯವೂ ಅಲ್ಲ. ಏಕೆಂದರೆ ಇವರಲ್ಲಿ ಅನೇಕರು ಒಂದಕ್ಕಿಂತಲೂ ಹೆಚ್ಚು ಕಥಾಸಂಕಲನಗಳನ್ನು ಹೊರಗೆಡಹಿದ್ದಾರೆ. ಆದುದರಿಂದ ಕೆಲವು ಕೃತಿಗಳನ್ನು ಕುರಿತು ಒಂದೆರಡು ಮಾತುಗಳನ್ನು ಮಾತ್ರ ಹೇಳಿ ಮುಗಿಸುತ್ತೇನೆ. ಏಕೆಂದರೆ, ಸುದೀರ್ಘ ವಿಮರ್ಶೆಗೆ

ಹೊರಟರೆ ಒಬ್ಬೊಬ್ಬರ ಒಂದೊಂದು ಕೃತಿಗೇ ಈ ಭಾಷಣ ವಿಾಸಲಾದರೂ ಕಾಲ ಸಾಲದು.

ಆನಂದರ ಕತೆಗಳಲ್ಲಿ ವಸ್ತುವಿಗಿಂತಲೂ ವಿವರಿಸುವ ಬಗೆ ಸೊಗಸಾಗಿದೆ; ರಚನಾ ಸೌಂದರ್ಯ ಎದ್ದು ಕಾಣುತ್ತದೆ. ವಸ್ತುವಿನ ಗಾಂಭೀರ್ಯ ಏನೇ ಇರಲಿ ಅದನ್ನು ಕತೆಯಾಗಿ ಕಟ್ಟುವ ಜಾಣತನವಿದೆ ಆನಂದರಲ್ಲಿ. ಉದಾಹರಣೆಗಾಗಿ "ಮಾಟಗಾತಿ" ಯನ್ನು ತೆಗೆದುಕೊಳ್ಳಬಹುದು, ಆ ಕತೆಯ ವಿಷಯ ಬಹಳ ಸ್ವಲ್ಪ. ಅದನ್ನು ಕಟ್ಟಿ ಕೊಂಡು ಹೋಗಿರುವ ಜಾಣ್ಮೆ ಎಷ್ಟು ದೊಡ್ಡದು! ಕೊನೆಯವರೆಗೂ ಕುತೂಹಲ ತಾನೇ ತಾನಾಗಿ ಏರುತ್ತದೆ; ಭಾವಪಾರಮ್ಯವನ್ನು ಮುಟ್ಟುತ್ತದೆ ಎನ್ನಬಹುದು. ಇದಲ್ಲವೇ ಸಣ್ಣ ಕತೆಯ ಜೀವಾಳ? "ನಾನು ಕೊಂದ ಹುಡುಗಿ" ಯಲ್ಲಿ ಸಾಮಾಜಿಕ ಸಮಸ್ಯೆ ಯೊಂದು ಅಡಕವಾಗಿದ್ದರೂ ಅದರ ವಿವರ ಎಷ್ಟು ಗಂಭೀರವಾಗಿದೆ! "ಹೆಂಡತಿಯ ಕಾಗದ" ಸಣ್ಣ ಕತೆಯ ರಚನಾ ಕೌಶಲಕ್ಕೆ ಮತ್ತೊಂದು ಸಾಕ್ಷಿ, ಒಟ್ಟಿನಲ್ಲಿ 'ಆನಂದರ, ಕೆಲವು ಕತೆಗಳು ಮಾಸ್ತಿಯವರ ಕತೆಗಳನ್ನೂ ಕೆಲವು ರೀತಿಯಿಂದ ವಿಾರಿಸಿವೆ' ಎಂಬ ಮಾತಿನಲ್ಲಿ ಸತ್ಯಾಂಶವಿಲ್ಲದೇ ಇಲ್ಲ.

ಕೆ. ಗೋಪಾಲಕೃಷ್ಣರಾಯರು ಸುಮಾರು ಅರವತ್ತು ಕತೆಗಳನ್ನು ಈಗಾಗಲೆ ಕನ್ನಡಿಗರಿಗೆ ಕೊಟ್ಟಿದ್ದಾರೆ. ಇವರ ಕತೆಗಳಲ್ಲಿ ಕಥನ, ಕಲೆ, ಆ ಕಲೆಯ ಮುದ್ರೆ ಮುಖ್ಯಾಂಶ. ಬಾಳಿನಲ್ಲಿ ವ್ಯಕ್ತಿ ಯಾವ ರೀತಿಯಲ್ಲಿ ತನ್ನ ಗುರಿಯನ್ನು ಸಾಧಿಸಿಕೊಳ್ಳ ಬಹುದು ಎಂಬುದರ ದೃಷ್ಟಾಂತಗಳನ್ನು ಕಾಣಬಹುದು. "ಶ್ರೀಧರಕವಿ", "ವೀಣೆಯ ಮೇಷ್ಟ್ರು"—ಈ ಕತೆಗಳಲ್ಲಿ ವಿಧಿಯ ಕೈವಾಡದ ಶಕ್ತಿಯನ್ನು ಕಾಣಬಹುದು. "ಹುಚ್ಚು ಮುನಿ" ನಮ್ಮ ಸಂಸ್ಕೃತಿಯುದ್ಯೋತಕವಾದ ಕತೆ. ಸಣ್ಣ ಕತೆಯಲ್ಲಿ ವೇದಾಂತದ ದೊಡ್ಡ ತತ್ವವನ್ನು ಹೇಗೆ ನಿರೂಪಿಸಬಹುದು ಎಂಬುದನ್ನು ಮನಗಾಣುತ್ತೇವೆ. ಅವನನ್ನು ದೊಡ್ಡ ತಾತ್ವಿಕನೆಂದು ಗೌರವಿಸುವ ಬುದ್ಧಿ ಹುಟ್ಟುವಷ್ಟು ಸೊಗಸಾಗಿದೆ ಅವನ ಚಿತ್ರ. "ಸುಶೀಲಾ ಸಂಕೇತ್" ಎಷ್ಟು ಮನೋಹರವಾದ ಕತೆ. ಅದನ್ನು ಹೆಣೆದಿರುವ ರೀತಿ ಅತೀವ ರಮಣೀಯ. ಹಾಗೆಯೇ "ಮಾಗಡಿರಂಗ" ಎಂಬ ಕತೆ ಸೊಗಸಾಗಿರುವದು ಬೇರೆ; ಅದರಲ್ಲಿ ಬೋಧವಾಗುವ ತತ್ವದ ಹಿರಿಮೆ ಮನಸ್ಸಿಗೆ ನಾಟುತ್ತದೆ. ಅದರಲ್ಲಿಯೂ ಭಾರತೀಯ ಸಂಸ್ಕೃತಿಯ ಹೊಳಪು ಹೊಳೆಯುತ್ತಿದೆ. "ಮಿಸ್ಟರ್ ಸೋ ಅಂಡ್ ಸೋ" ಎಂಬಲ್ಲಿ ನಮ್ಮ ಧರ್ಮ ಸಮನ್ವಯ, ಸಹ ಜೀವನ ತತ್ವಗಳು ಅಡಕವಾಗಿವೆ. ಹೀಗೆ ಕಲೆಯ ಪರಮಾವಧಿಯಾದ ಆನಂದವನ್ನು ಕೊಡುವದಲ್ಲದೆ, ರಾಯರ ಕತೆಗಳು ಸಂಪೂರ್ಣ ಭಾರತೀಯತೆ—ಕನ್ನಡತನಗಳ ಸಂಕೇತಗಳಾಗಿವೆ ಎಂದರೆ ತಪ್ಪಾಗಲಾರದು.

ಇನ್ನು ಶ್ರೀಪತಿಯ ಕತೆಗಳನ್ನು ಕುರಿತು ಕೆಲವು ಮಾತುಗಳನ್ನು ಹೇಳಬಹುದು. ಶ್ರೀಪತಿಯ ಕತೆಗಳಲ್ಲಿ ಸಾಮಾನ್ಯವಾಗಿ ಮಧ್ಯಮ ವರ್ಗದ ಜೀವನ ಕಾಣುತ್ತದೆ; ಅಷ್ಟೇ ಅಲ್ಲ. ಸಾಂಪ್ರದಾಯಿಕ, ವೈದಿಕವಾತಾವರಣ ಮನಸ್ಸಿಗೆ ಬಂದು ಕನ್ನಡದ ಆ ಗುಂಪಿನ ಚಿತ್ರ ಚೆನ್ನಾಗಿ ಮನಸ್ಸಿನಲ್ಲಿ ನಿಲ್ಲುತ್ತದೆ. "ನನ್ನ ಸ್ನೇಹಿತ" ಎಂಬ ಕತೆ ಮನಸ್ಸನ್ನು ಕಲಕುತ್ತದೆ. ಕಿಟ್ಟಣ್ಣನ ಜೀವನ ಎಷ್ಟು ದುಃಖಮಯವಾಯಿತು ಎಂಬುದು ವಿಧಿಯ ಲೀಲೆ ಯೆನಿಸುತ್ತದೆ. ಮನುಷ್ಯನು ನೆನಸುವುದೇ ಒಂದು ದೇವರು ಮಾಡಿಸುವುದು ಮತ್ತೊಂದು ಎಂಬುದನ್ನು ಮನವರಿಕೆ ಮಾಡಿಕೊಡುತ್ತದೆ. "ಶ್ಯಾನುಭೋಗನ ಪುಣ್ಯ"

ಎಂಬ ಕತೆ ಹಳ್ಳಿಯ ರಾಜಕೀಯ ಎಷ್ಟು ಅಪಾಯಕರವೆಂಬುದನ್ನೂ ಅಲ್ಲಿಯ ಗ್ರಾಮಾಧಿಕಾರಿಗಳ ಸಂತ್ರಸ್ತ ಜೀವನವನ್ನೂ ಚಿತ್ರಿಸುತ್ತದೆ. "ಊಟದಲ್ಲಿ ಉಪಚಾರ" ದಲ್ಲಿ ಒಂದು ವಿಧವಾದ ಹಾಸ್ಯವಿದ್ದರೆ, "ಅಗ್ಗದ ಮದುವೆಯಲ್ಲಿ" ಮತ್ತೊಂದು ವಿಧದ ಹಾಸ್ಯವಿದೆ. ಒಟ್ಟಿನಲ್ಲಿ ಶ್ರೀಪತಿಯ ಕಥೆಗಳು ಬಹಳ ಉನ್ನತ ಮಟ್ಟಕ್ಕೆ ಸೇರಿದುವೆಂದೂ ಸಂಪೂರ್ಣವಾಗಿ ಕನ್ನಡತನದಿಂದ ಕೂಡಿದುವೆಂದೂ ಹೇಳಬಹುದು; ಅವು ರಸಾತ್ಮಕವಾದುವು.

ಶ್ರೀ ಎಸ್. ಜಿ. ಶಾಸ್ತ್ರಿಗಳ ಕತೆಗಳನ್ನು ಬೇರೆ ಒಂದು ಗುಂಪಿಗೆ ಸೇರಿಸಬಹುದು. ಅವರು ಸಾಮಾನ್ಯವಾಗಿ ಆಧುನಿಕ ವಿದ್ಯಾವಂತರಾಗಿರುವ ಮೇಲ್ತರದ ಮಧ್ಯಮವರ್ಗದವರನ್ನು ಚಿತ್ರಿಸುವುದೇ ಹೆಚ್ಚು. ಅಂಥವರ ಜೀವನದ ಒಂದು ಹೊಳಪು ಅವರ ಕತೆಗಳಲ್ಲಿ ಕಾಣುತ್ತದೆ. ಕತೆಯ ಸೊಗಸು, ಭಾವಗಳೂ ಪ್ರಖರವಾಗಿವೆ. ಉದಾಹರಣೆಗೆ "ಪರಪುರುಷ" ದಲ್ಲಿ ತೋರುವ ರಚನಾನೈಪುಣ್ಯ ಮಿಗಿಲಾದುದು! "ತುಂಟಮರಿ" ಬಹಳ ಮನಕರಗಿಸುವ ಚಿತ್ರ. ಒಟ್ಟಿನಲ್ಲಿ ಶಾಸ್ತ್ರಿಗಳ ಕತೆಗಳಲ್ಲಿ ನೈಸರ್ಗಿಕವಾದ ಕಲಾವಂತಿಗೆ ಇದೆ.

ಇನ್ನು ಶ್ರೀ ನವರತ್ನ ರಾಮರಾಯರ ಕತೆಗಳಲ್ಲಿ ಕಂಡುಬರುವ ಕುತೂಹಲ ವಿಪುಲತೆಯನ್ನು ವಿಮರ್ಶಿಸೋಣ, "ಲಕ್ಷ್ಮಣರಾಯನ ಭಾಗ್ಯ" ಎಂಬ ಕತೆಯಲ್ಲಿ ನಿಜವಾಗಿಯೂ ಕುತೂಹಲ ತಾನೇತಾನಾಗಿ ಕುಣಿಯುತ್ತದೆ. ಲಕ್ಷ್ಮಣರಾಯನು ದೇವಿಯ ಮಂದಿರಕ್ಕೆ ಸೇರಿದಂದಿನಿಂದ ಮುಂಗಮಾರಿ ಸಾಹೇಬರನ್ನು ಕಂಡು ಬಹುಮಾನ ಪಡೆಯುವವರೆಗೆ ಪತ್ತೇದಾರಿ ಕಾದಂಬರಿಯ ಒಂದು ಕುತೂಹಲವಿದೆ. "ಹೆಣ್ಣು ಹೃದಯ" ವೆಂಬುದು ಬಹಳ ಉತ್ತಮ ಕೃತಿ. ಅದರ ಕೊನೆ ನಮಗೆ ಸರಿಬೀಳುವುದೋ ಇಲ್ಲವೋ ಅದು ಬೇರೆ. ಶಾಂತಾ ಪಾತ್ರಚಿತ್ರಣ ಶ್ಲಾಘ್ಯವಾಗಿದೆ. ಶ್ರೀಪತಿಯವರ ಕತೆಗಳಲ್ಲಿ ಮತ್ತು ಶಾಸ್ತ್ರಿಗಳ ಕತೆಗಳಲ್ಲಿ ಕತೆಗಾರರ ವ್ಯಕ್ತಿತ್ವ ಮೂಡಿರುವಂತೆ ರಾಮರಾಯರ ಕತೆಗಳಲ್ಲಿಯೂ ಅವರ ಜೀವನದ, ಆವರಣದ ಪ್ರಭಾವ ಎದ್ದು ಕಾಣುತ್ತದೆ. ಎಷ್ಟಾದರೂ ಸುಮಾರು ಮೂವತ್ತು ವರ್ಷಕ್ಕು ಮಿಕ್ಕು ಅಧಿಕಾರ ನಡೆಸಿದವರಲ್ಲವೇ? ಆ ಅಧಿಕಾರೀ ವಾತಾವರಣ ಕತೆಗಳಲ್ಲಿ ಕಂಡರೆ ತಪ್ಪೇನು?

ಗೊರೂರು ರಾಮಸ್ವಾಮಿ ಅಯ್ಯಂಗಾರರನ್ನು ಅಷ್ಟಾಗಿ ಸಣ್ಣ ಕಥೆಗಾರರೆಂದು ಯಾರೂ ಕರೆಯುವುದಿಲ್ಲ. ಆದರೆ ಅವರ ಕಥನರೀತಿ ದೃಢವಾದುದು. ಅವರು ಸೊಗಸಾದ, ತಿಳಿಯಾದ ಹಾಸ್ಯ ಚಿತ್ರಗಾರರು ಎಂದು ಎಲ್ಲರೂ ನಂಬಬಹುದು. ಅವರ ಹಾಸ್ಯಕ್ಕಾಗಿ ಅವರ ಗ್ರಂಥಗಳು ಬಹಳ ಜನಪ್ರಿಯವಾಗಿವೆ. ಆ ಹಾಸ್ಯವನ್ನು ಪರಿಚಯ ಮಾಡಿಕೊಂಡು ಆನಂದ ಪಡಲೆಂದು ಆಶಿಸಿ ಇಲ್ಲಿ ಒಂದೆರಡು ಮಾತುಗಳನ್ನು ಬರೆಯುತ್ತಿದ್ದೇನೆ. ಅವರ "ಕವಿತೆ" ಎಂಬ ಪತ್ರಮಾಲೆ ಆ ಜಾತಿಯ ಸಣ್ಣ ಕಥೆಗೆ ಒಳ್ಳೆಯ ಉದಾಹರಣೆಯೆನ್ನಬಹುದು. "ನಾನು ರತ್ನಳ ಮದುವೆಗೆ ಹೋದುದು" ಎಂಬುದರಲ್ಲಿ ಕಥಾವಸ್ತು ಏನು ಇಲ್ಲದಿದ್ದರೂ ಲೇಖಕರು ಅದನ್ನು ಸ್ವಾರಸ್ಯವಾಗಿಯೂ ಹಾಸ್ಯಮಯವಾಗಿಯೂ ಮಾಡಿರುವುದು ಶ್ಲಾಘನೀಯವಾಗಿದೆ. ಅಂತೆಯೇ "ಕನ್ಯಾಕುಮಾರಿ" ಯಲ್ಲಿ ಕಥನ ಚೆನ್ನಾಗಿದೆ, ಎನ್ನಬಹುದು. ಅವರ ಕತೆಗಳು ಹೆಚ್ಚು ಚಿತ್ರಮಯವೂ, ಆ ಚಿತ್ರಗಳು ಬಹುಮಟ್ಟಿಗೆ ಹಾಸ್ಯಮಯವೂ ಆಗಿವೆಯೆಂದು ಹೇಳಬಹುದು.

ತರುಣ ಕತೆಗಾರರಲ್ಲಿ ತ. ರಾ. ಸು. ಅವರ ಕೆಲವು ಕತೆಗಳನ್ನು ನೋಡೋಣ. ಅವರಲ್ಲಿ ತಂತ್ರ ನೈಪುಣ್ಯ ಚೆನ್ನಾಗಿ ಕುದುರಿದೆ. "ತೊಟ್ಟಿಲು ತೂಗಿತು" ಯಾರನ್ನಾದರೂ ಮೆಚ್ಚಿಸುವ ಮುಗ್ಧ ಮನೋಹರ ಚಿತ್ರ. ರಖುಮಾಳ ಮಾತೃ ಹೃದಯದ ಪ್ರತಿಬಿಂಬ ಅಚ್ಚಳಿಯದೆ ಇದೆ ಕತೆಯಲ್ಲಿ. ಆ ಹೃದಯ ತನ್ನ ಕಂದನ ಸಲುವಾಗಿ ಮಾಡಬಾರದ ಕೆಲಸಕ್ಕೆ ಒಪ್ಪುತ್ತದೆ. ಆಗ ಅವಳ ಅಸಹಾಯಕ ಪರಿಸ್ಥಿತಿಯನ್ನು ದುರುಪಯೋಗಪಡಿಸಿಕೊಂಡ ಕಾರಕೂನನನ್ನು ಶಪಿಸುತ್ತೇವೆ. ಆದರೆ ಸಮಾಜ ಹಸನಾಗಿಲ್ಲ. ಈ ಕತೆಯಲ್ಲಿ ಕೂಲಿಕಾರರ ಜೀವನ ಚಿತ್ರ ಇದೆ. "ಲೂಸಿ ಪ್ರಯಾಣ" ಯಾರನ್ನಾದರೂ ಅಳಿಸುತ್ತದೆ ಎನ್ನೋಣವೇ? ಲೂಸಿಯ ಮುಗ್ಧ ಸ್ನೇಹಕ್ಕೆ ಮನಸ್ಸು ದ್ರವಿಸಿ ಆ ದ್ರವ ಕಣ್ಣಲ್ಲಿ ಬರುತ್ತದೆ ಎನ್ನೋಣವೋ! ಒಟ್ಟಿನಲ್ಲಿ ಬಹಳ ಸುಂದರವಾಗಿದೆ ಕತೆ ಎಂದು ಧೈರ್ಯವಾಗಿ ಹೇಳಿಬಿಡುತ್ತೇನೆ. ಹಾಗೆಯೇ "ಆ ದಿನದ ಬೇಟಿ" ಯಲ್ಲಿ ವಸ್ತು ಏನೂ ಇಲ್ಲ. ಆದರೂ ರಚನಾ ಕೌಶಲದಿಂದ ಕೊನೆಯವರೆಗೂ ಕತೆಯ ಸ್ವಾರಸ್ಯ ಅಚ್ಚಳಿಯದಿದೆ. ಆದರೂ ಕೊನೆಯಲ್ಲಿ ಆ ಎಂಟಾಣೆಯ ಬಿಲ್ಲೆ ಖೋಟಾ ನಾಣ್ಯವೆಂದು ವಾಚಕನಿಗೆ ತಿಳಿದಕೂಡಲೆ ಅತ್ಯಾನಂದವುಂಟಾಗುತ್ತದೆ. "ಕಲಾವಿದ" ದಲ್ಲಿ ತ. ರಾ. ಸು. ರವರು ಕಲಾವಿದರು ನಮ್ಮ ಸಮಾಜದಲ್ಲಿ ನಡೆಸಬೇಕಾಗಿ ಬಂದಿರುವ ನಾಚಿಕೆ ಕೇಡಿನ ಜೀವನವನ್ನು ಚಿತ್ರಿಸಿದ್ದಾರೆ, ಕಲಾವಿದರಿಗೆ ಸರಿಯಾದ ಪುರಸ್ಕಾರವಿಲ್ಲವೆಂಬುದನ್ನು ಹೇಳಿ ಪುರಸ್ಕಾರ ಕೊಡುವುದು ಸಮಾಜದ ಕೆಲಸವೆಂದು ಸೂಚಿಸಿದ್ದಾರೆ ಧ್ವನಿಯಿಂದ. ಒಟ್ಟಿನಲ್ಲಿ ತ. ರಾ. ಸು. ಹೇಗೆ ಯಶಸ್ವೀ ಕಾದಂಬರಿಕಾರರೆನಿಸಿಕೊಂಡಿದ್ದಾರೆಯೋ ಹಾಗೆಯೇ ಯಶಸ್ವೀ ಸಣ್ಣ ಕತೆಗಾರರೂ ಆಗಿದ್ದಾರೆ.

ಇತ್ತೀಚಿನ ಸಣ್ಣ ಕತೆಗಾರರಲ್ಲಿ ಮತ್ತೊಬ್ಬರ ಹೆಸರನ್ನು ಸೂಚಿಸಿ ಮುಂದಿನ ವಿಷಯಕ್ಕೆ ಅಂದರೆ ಕತೆಗಾರ್ತಿಯರ ಕಡೆ ಲಕ್ಷ್ಯ ಕೊಡೋಣ. ಆ ಮತ್ತೊಬ್ಬರು ಅಶ್ವತ್ಥರು. ಅಶ್ವತ್ಥರ ಕತೆಗಳು ಬಹಳ ಕಲಾತ್ಮಕವಾದುವು. ಅವರ ರಚನಾ ಸಾಮರ್ಥ್ಯವೂ ನಿರೂಪಣೆಯ ಕ್ರಮವೂ ಅಚ್ಚುಕಟ್ಟಾಗಿವೆ. "ಸೊಸೆಗೊಂದು ಉಡುಗರೆ" ಯಲ್ಲಿ ಒಂದು ವಿಧವಾದ ವ್ಯಂಗ್ಯ ಹಾಸ್ಯವಿದೆ. ನಮ್ಮ ಸಮಾಜದ ಒಂದು ಮೂಲೆಯಲ್ಲಿರುವ ಡೌಲು, ಜಂಬ– ಇವು ಕಾಣುತ್ತವೆ. ಮರ್ಯಾದೆ ಮೀರಿದ ಜನರೂ ಇದ್ದಾರೆಂಬ ಕಲ್ಪನೆ ಬರುತ್ತದೆ. ಕೊನೆಯಲ್ಲಿ "ಇವರ ಜಂಬ ಇಷ್ಟೇನೆ!" ಎನ್ನಿಸುತ್ತದೆ. "ಧರ್ಮಕೊಂಡದ ಕತೆ" ಮನೋಹರವಾಗಿದೆ ದೇವಮ್ಮನ ಪಾತ್ರ ಚಿತ್ರಣ ಉನ್ನತ ಮಟ್ಟದ್ದು. ಸೂರಪ್ಪನೂ ಹತ್ತಿರ ಹತ್ತಿರ ಆ ಮಟ್ಟಕ್ಕೆ ಬರುತ್ತಾನೆ ಎನ್ನಬಹುದು. ಸಾಂಪ್ರದಾಯಿಕತೆ ಎಲ್ಲಿಗೊಯ್ಯುವುದು ಎಂಬುದೂ ಇದರಲ್ಲಿ ಅಡಕವಾಗಿದೆ. ಕಾಲ ಬದಲಾಯಿಸಿದಂತೆಲ್ಲ ನಮ್ಮ ಮನೋಭಾವ ಬದಲಾಯಿಸಬೇಕು: ಎಂಬ ಸೂಚನೆ ಮನಸ್ಸಿಗೆ ತಟ್ಟುತ್ತದೆ. "ಯೋಗಾಭ್ಯಾಸ" ದಲ್ಲಿ ತಿಳಿಹಾಸ್ಯವಿದೆ; ಒಣ ವೇದಾಂತಿಗಳ ಆಟಾಟೋಪದ ಚಿತ್ರವಿದೆ. ಆ ಚಿತ್ರವನ್ನು ನೋಡಿ ಯಾರಾದರೂ ನಗಲೇಬೇಕಲ್ಲವೇ? "ದೇವಿಯವರು" ಎಂಬ ಕತೆಯ ರಚನೆಯಲ್ಲಿ ಲೇಖಕರು ಜಯಗಳಿಸಿಲ್ಲ. ಕೊನೆ ಸಪ್ಪೆಯಾಯಿತು ಎನ್ನಬಹುದು. ದೇವಿಯವರ ಪ್ರಪಂಚ ಜ್ಞಾನಶೂನ್ಯತೆಯೇನೋ ಚೆನ್ನಾಗಿ ಚಿತ್ರಿತವಾಗಿದೆ. ಆದರೆ ಕಲಾವಂತಿಕೆಯಿಲ್ಲ. ಕೊನೆ ಕತೆಯಲ್ಲಿ. "ನಾಚಿಕೆ ಕೇಡು" ಮತ್ತು "ಖುಷಿ ಮಹಮ್ಮದ್"– ಈ ಎರಡು ಕತೆಗಳು ಸೊಗಸಾಗಿವೆ. ಎರಡರಲ್ಲೂ ಎರಡು ತೆರದ ಹಾಸ್ಯಗಳಿವೆ, ಕತೆಯ ಸ್ವಾರಸ್ಯ ಪರಮಾವಧಿ

ಯನ್ನು ಕೊನೆಯಲ್ಲಿ ಮುಟ್ಟಿ, ತಟಕ್ಕನೆ ನಮ್ಮ ಹೃದಯವನ್ನೂ ಮುಟ್ಟುತ್ತದೆ, ಇದ್ದಕ್ಕಿದ್ದಂತೆಯೇ ಆನಂದ ಪಡೆಯುತ್ತೇವೆ. ಮೊತ್ತದಲ್ಲಿ ಅಶ್ವತ್ಥರು ಬೊಂಬಾಯಿಯ ಜೀವನವನ್ನು ಚಿತ್ರಿಸಿರುವುದು ಹೆಚ್ಚು; ಆದರೂ ಬೊಂಬಾಯಿನ ಕನ್ನಡಿಗರ ಜೀವನವನ್ನು ಎನ್ನಲೇಬೇಕು.

ಇನ್ನು ಸಣ್ಣ ಕತೆಗಾರ್ತಿಯರಲ್ಲಿ ಇಬ್ಬರ ಹೆಸರನ್ನು ಮಾತ್ರ ಹೇಳಿ ಈ ಲೇಖನವನ್ನು ಮುಗಿಸೋಣವೆಂದಿದ್ದೇನೆ. ಶ್ರೀಮತಿ ಗೌರಮ್ಮನವರು ಕನ್ನಡದ ಹೆಸರಾಂತ ಕತೆಗಾರ್ತಿಯರಲ್ಲೊಬ್ಬರು. ಗೌರಮ್ಮನವರ ರಚನಾ ಕೌಶಲ, ವರ್ಣನಾ ಸಾಮರ್ಥ್ಯ, ಎರಡೂ ದೊಡ್ಡವು. ಇವರ 'ಕೌಸಲ್ಯಾನಂದನ' ಬಹಳ ಸುಂದರವಾದ ಕತೆ. ಅಂತೆಯೇ 'ಪಾಪನ ಮದುವೆ'. ಇದರಲ್ಲಿ ಮಕ್ಕಳ ಸ್ವಭಾವದ ಚಿತ್ರಣವಿದೆಯಾದರೊ ನಮಗೆ ರಸಾನುಭವವಾಗುವುದು ಕೊನೆಯ ಬಾಗದಲ್ಲಿ. ಪಾಪ ಮೊದಲಿನಿಂದಲೂ ಹುಡುಗಿಯನ್ನು ಒಲ್ಲೆನೆನ್ನುತ್ತಿದ್ದವನು ಒಂದೇ ಬಾರಿಗೆ ತನ್ನ ತೀರ್ಮಾನವನ್ನು ಬದಲಾಯಿಸಿದ ಅಂಶ ತುಂಬಾ ಸ್ವಾರಸ್ಯವಾಗಿದೆ. ಪಾಪ ತನ್ನ ಭಾವೀ ಪತ್ನಿಯೊಡನೆ ನಡೆಸಿದ ಸಂಭಾಷಣೆ ಸೊಗಸಾಗಿದೆ. ಅಂತೂ ಇಲ್ಲಿ ಕತೆಗಾರ್ತಿಯ ಸಾರ್ಥಕತೆ ಎದ್ದು ಕಾಣುತ್ತದೆ. ಇವರ "ಅಪರಾಧಿ ಯಾರು" ಎಂಬುದು ಪತ್ರಮಾಲೆಯ ಕತೆ; ಹೃದಯವನ್ನು ಹಿಂಡುವ ಕತೆ. ಒಟ್ಟನಲ್ಲಿ ಶ್ರೀಮತಿ ಗೌರಮ್ಮನವರು ಹೆಣ್ಣಿನ ಹೃದಯವನ್ನು ತಮ್ಮ ಕತೆಗಳಲ್ಲಿ ತೆರೆದು ತೋರಿಸಿದ್ದಾರೆ. ನಿರೂಪಣೆಯಲ್ಲಿ ಸರಳತೆ ಇದೆ. ಕತೆಗಳಲ್ಲಿ ಕಲೆ ಇದೆ. ಇನ್ನೊಬ್ಬರು ಶ್ರೀಮತಿ ಎಚ್. ವಿ. ಸಾವಿತ್ರಮ್ಮನವರು. ಇವರ "ನಿರಾಶ್ರಿತೆ" ಹೃದಯ ವಿದ್ರಾವಕವಾದ ಕತೆ. ಇದರಲ್ಲಿ ಕಲಾಕೌಶಲವಿದೆ; ಸಮಕಾಲಿನವೆನ್ನಬಹುದಾದ ಚಿತ್ರವಿದೆ. ಕತೆ ಅದ್ಭುತ ರಮ್ಯವಾದರೂ ದಾರುಣ ರಮ್ಯವಾಗಿ ರಸಾಸ್ವಾದನೆಯನ್ನುಂಟುಮಾಡುತ್ತದೆ. ಆದರ್ಶವನ್ನು ಪಾಲಿಸುವುದು ಎಷ್ಟು ಕಷ್ಟವೆಂಬುದು ತೋರಿಬಂದು, ಸೂತ್ರವನ್ನು ಅರ್ಥಮಾಡಿಕೊಂಡು ಮೆಚ್ಚಿದರೂ ಪ್ರಯೋಗಕ್ಕೆ ತರುವುದು ಎಷ್ಟು ಕಷ್ಟವೆಂಬುದು ಮನದಟ್ಟು ಆಗುತ್ತದೆ, ಚಂದ್ರನು ಮನಸ್ಸಿನಲ್ಲಿ ನಿರ್ಧರಿಸಿಕೊಂಡಿದ್ದ ಅಂಶವನ್ನು ತಾನೇ ಅನುಸರಿಸಲಾರದೇ ಹೋದ.

ಈ ಮೇಲೆ ಸಣ್ಣಕತೆಗಾರರಲ್ಲಿ ಕೆಲವರ ಹೆಸರನ್ನೂ ಅವರ ಗ್ರಂಥಗಳ ಒಂದೋ, ಎರಡೋ, ಮೂರೋ ಕತೆಗಳ ಸ್ಥೂಲ ವಿಚಾರಗಳನ್ನೂ ಕೊಟ್ಟಿದ್ದೇನೆ. ಉಳಿದವರು ಶ್ರೇಷ್ಠ ಕತೆಗಾರರಲ್ಲವೆಂದಲ್ಲ. ಅವರೆಲ್ಲರೂ ಒಂದೊಂದು ವೈಶಿಷ್ಟ್ಯದಿಂದ ಕೂಡಿದ್ದಾರೆ. ನಮಗೆ ಗ್ರಂಥ ಕರ್ತರ ಕಥಾ ಸಂಕಲನಗಳನ್ನೆಲ್ಲ ಓದಿ, ದೀರ್ಘವಾಗಿ ವಿಮರ್ಶೆ ಮಾಡುವಷ್ಟು ವ್ಯವಧಾನವಿರಲಿಲ್ಲವೆಂದು ವಿಷಾದವಾಗಿದೆ.

ಕೆಲವು ವಿದ್ವಾಂಸರು ಇಂಗ್ಲಿಷಿನಿಂದಲೂ ಇತರ ಭಾರತೀಯ ಭಾಷೆಗಳಿಂದಲೂ ಸಣ್ಣ ಕತೆಗಳನ್ನು ಭಾಷಾಂತರ ಮಾಡಿಕೊಟ್ಟು ಉಪಕಾರ ಮಾಡುತ್ತಿದ್ದಾರೆ. ಶ್ರೀಗಳಾದ ಎಲ್. ಗುಂಡಪ್ಪ, ಎಂ. ವಿ. ಸೀತಾರಾಮಯ್ಯ, ಎ. ಎನ್. ಮೂರ್ತಿರಾಯರು, ಕೆ. ಗೋಪಾಲಕೃಷ್ಣ ಅಡಿಗ, ಅ. ನಾರಾಯಣ ಅಯ್ಯರ್, ಎ. ಆರ್. ಕೃ., ಶ್ರೀಮತಿ ಲಲಿತಮ್ಮ, ಶ್ರೀಮತಿ ಜಯಲಕ್ಷ್ಮಿ, ಆರ್. ಶ್ರೀನಿವಾಸನ್, ಶ್ರೀ ಪಿ. ವೆಂಕೋಬಾಚಾರ್ಯ– ಮೊದಲಾದ ಮಹನೀಯರು ಭಾಷಾಂತರಕಾರರಲ್ಲಿ (ಸಣ್ಣ ಕತೆಗಳ) ಪ್ರಮುಖರು ಎಂದು ಹೇಳಬಹುದು.

ಇನ್ನು ಪ್ರಮುಖ ಕವಿಗಳಾಗಿದ್ದು ಕತೆಗಾರರಾಗಿರುವ ಕುವೆಂಪು, ಬೇಂದ್ರೆ ರಾಜರತ್ನಂ, ಪು. ತಿ. ನ. ಇತ್ಯಾದಿಗಳನ್ನು ಇಲ್ಲಿ ಹೆಸರಿಸಲೂ ಅವಕಾಶವಾಗಿಲ್ಲ.

ಉದ್ಯೋಗ–ಉದ್ಯಮ ಪ್ರಧಾನವಾದ ಈ ದಿನಗಳಲ್ಲಿ ಜನರಿಗೆ ಯಾವುದಕ್ಕೂ ಬಿಡುವಿಲ್ಲ. ಎಲ್ಲವೂ ಚುಟುಕಾದಲ್ಲಿ ಮುಗಿಯಬೇಕು. ಅಂತೆಯೇ ಮಹಾ ಕಾವ್ಯ ಕಾದಂಬರಿಗಳನ್ನು ಓದಲು ಅವಕಾಶವಿಲ್ಲ. ಸಣ್ಣ ಕತೆಯಾದರೋ ಒಂದೇ ಸಾರಿ ಹದಿನೈದು–ಇಪ್ಪತ್ತು ನಿಮಿಷಗಳಲ್ಲಿ ಓದಿ ಮುಗಿಸಿ, ರಸಾಸ್ವಾದನೆ ಮಾಡಬಹುದಾದ್ದು. ಕಾದಂಬರಿ ಮಹಾಕಾವ್ಯದಲ್ಲಿ ದೊರಕಬಹುದಾದ ಒಂದೊಂದು ಅಂಶವೂ ಸಣ್ಣ ಕತೆಯಲ್ಲಿ ಬಿಡಿಯಾಗಿ ಬೇರೆ ಬೇರೆ ಕತೆಗಳಲ್ಲಿ ದೊರಕಬಹುದು. ಅಷ್ಟೆ ವ್ಯತ್ಯಾಸ. ನಮ್ಮ ಹಿಂದಿನ ಲಾಕ್ಷಣಿಕರು ಯಾರೂ "ಕಾವ್ಯಂ ಆನಂದ ದಾಯಿ" ಎಂದು ಹೇಳಿಲ್ಲದಿದ್ದರೂ ಅದನ್ನು ಈಗ್ಗೆ ಕಾವ್ಯಾ ಲಕ್ಷಣ (ಮುಖ್ಯ ಲಕ್ಷಣ) ವೆಂದೇ ಇಟ್ಟುಕೊಳ್ಳಬಹುದು.

ಹೀಗೆ ಶ್ರೀನಿವಾಸರ ಆರ್ಷ ದೃಷ್ಟಿಯಿಂದ ಮೊದಲಾದ ಕತೆ, ಆನಂದ ಕಂದರ ಹಳ್ಳಿಯ ಬಾಳಿನ ದರ್ಶನವನ್ನು ಮಾಡಿಸಿ, ಆನಂದ, ಗೋಪಾಲಕೃಷ್ಣರಾಯರ ಕತೆಗಳಲ್ಲಿ ವೈವಿಧ್ಯವನ್ನು ತಳೆದು, ಶೃಂಗಾರ ಪೋಷಣೆ–ಸಮಾಜದ ಅತ್ಯಾಚಾರ ಖಂಡನೆಗಳನ್ನೂ ಮಾಡಿತು. ಅನಂತರ ತೀಕ್ಷ್ಣವಿಚಾರ ಧಾರೆ ಮೊದಲಾಯಿತೆನ್ನಬಹುದು. ಈ ವಿಚಾರ ಧಾರೆಯ ಪ್ರಾಧಾನ್ಯದಿಂದ ಕತೆಗೆ ಹೊರತಾದ ವಸ್ತು ಯಾವುದೂ ಇಲ್ಲ. ಕಾರ್ಮಿಕ ಸಮಸ್ಯೆ, ವೇಶ್ಯಾ ಜೀವನ, ಬಡತನದ ಭೂತ, ವ್ಯಭಿಚಾರ ಇವೇ ಮೊದಲಾದ ಪ್ರಪಂಚದಲ್ಲಿ ಕಾಣುವ ಎಲ್ಲ ವಿಷಯಗಳನ್ನೂ ಸಣ್ಣ ಕತೆ ವಸ್ತುವಾಗಿಸಿಕೊಂಡಿದೆ. ಇದರಲ್ಲಿ ಲೇಖಕನ ಭಾವ, ಸಂಭಾಷಣೆ, ವರ್ಣನೆಗಳು ತೀಕ್ಷ್ಣವಾಗಿದ್ದು ಕಲಾಕೌಶಲ ಕಡಿಮೆಯಾಗಿರುವುದೂ ಉಂಟು. ಏಕೆಂದರೆ ಕಲಾ ಕೌಶಲ ಒಂದು ಯೋಗ. ಅದರಲ್ಲಿ ಸಮತೋಲನದ ಮನಸ್ಸೂ ಬೇಕು.

ಈಗೀಗ ವಾರ ಪತ್ರಿಕೆ–ಮಾಸ ಪತ್ರಿಕೆ ಮುಂತಾದ ನಿಯತ ಕಾಲಿಕೆಗಳಲ್ಲಿ ಬರುವ ಕತೆಗಳು ನೀರಸವಾಗಿರುವುದೇ ಹೆಚ್ಚು. ಏಕೆಂದರೆ ಬರಹಗಾರರಿಗೆ ಇರಬೇಕಾದ ವಿದ್ಯೆ, ಅನುಭವ, ತಂತ್ರ ಜ್ಞಾನಗಳ ಅಭಾವವೂ ಕಾರಣವೆನ್ನಬೇಕು. ಅವರು ಆದಷ್ಟು ಪ್ರಸಿದ್ಧ ಕತೆಗಳನ್ನು ಸಾವಧಾನವಾಗಿ ಓದುವುದರಿಂದ ಅವರ ತಂತ್ರಜ್ಞಾನ ಪೂರ್ಣವಾಗುತ್ತದೆಂಬುದನ್ನು ಸೂಚಿಸ ಬಯಸುತ್ತೇನೆ.

ಈ ಸಣ್ಣ ಭಾಷಣದಲ್ಲಿ ಈಗಾಗಲೆ ಪ್ರಸಿದ್ಧರಾಗಿರುವ ಕನ್ನಡ ಸಣ್ಣ ಕತೆಗಾರರಲ್ಲಿ ಅನೇಕರ ಹೆಸರನ್ನು ಹೇಳಿಲ್ಲ. ಅವರ ಗ್ರಂಥಗಳಿಂದ ಕತೆಗಳನ್ನೂ ಉದಾಹರಿಸಿಲ್ಲ. ಅದಕ್ಕಾಗಿ ಅವರು ಯಾರೂ ಅಸಮಾಧಾನ ಪಟ್ಟುಕೊಳ್ಳುವುದಿಲ್ಲವೆಂದು ನಂಬಿದ್ದೇನೆ. ಇದು ಸಣ್ಣ ಕತೆಯ ಬೆಳವಣಿಗೆಯನ್ನು ಸ್ಥೂಲವಾಗಿ ಸೂಚಿಸಿರುವುದು ಮಾತ್ರವೇ ಹೊರತು ಸಮಗ್ರವಾಗಿ ಆ ಸಾಹಿತ್ಯ ಪ್ರಕಾರವನ್ನು ಕುರಿತು ವಿಮರ್ಶಿಸಿರುವುದಲ್ಲವೆಂದು ಹೇಳಿ ನನ್ನ ಈ ಭಾಷಣವನ್ನು ಮುಗಿಸುತ್ತೇನೆ.

**ಜಯ ಕರ್ನಾಟಕ — ಜಯ ಭಾರತ**

---





ಸಂಪುಟ 19 ]    ಜನವರಿ 1956    [ ಸಂಚಿಕೆ 1

## ಸಂಪಾದಕೀಯ

ಈ ಸಂಚಿಕೆಯಿಂದ ಕ್ರಿ. ಶ. 1956 ಎಂಬ ಇನ್ನೊಂದು ಹೊಸ ವರ್ಷ ಮೊದಲಾಗುವುದು. **ನುಡಿ** ಯಾವ ಬಗೆಯ ಸೇವೆಯನ್ನು ಈವರೆಗೂ ಸಲ್ಲಿಸುವುದು ಶಕ್ಯವಾಗಿದೆಯೊ ಅಂತಹ ಸೇವೆಯನ್ನು ಮುಂದೂ ಸಲ್ಲಿಸಲು ಯತ್ನಿಸುವುದು. ನಾಡಿನ ಭಾಗ್ಯ ತಿರುಗಿ ಪರಿಷತ್ತಿಗೂ ಸಾಹಿತ್ಯಕ್ಕೂ ಹೆಚ್ಚು ಪುರಸ್ಕಾರ ಉತ್ತೇಜನಗಳು ದೊರೆಯುವಂತಾದರೆ ಈ ಸೇವೆಗೆ ಮತ್ತಷ್ಟು ವ್ಯಾಪ್ತಿ, ಸಿರಿ, ಶಕ್ತಿಗಳು ಬಂದಾವು. ನಾಡಿನ ಅದೃಷ್ಟವನ್ನು ನಡಸಿಕೊಂಡು ಬರುತ್ತಿರುವ ಮಹಾಪ್ರಭಾವಗಳು ಅದನ್ನು ಆಗಗೊಡಿಸಲಿ. ಈ ನಡುವೆ ಈವರೆಗೂ ನಮಗೆ ಪ್ರೋತ್ಸಾಹವನ್ನೂ ಲೇಖನಗಳನ್ನೂ ಕೊಟ್ಟಿರುವ ಎಲ್ಲರಿಗೂ **ನುಡಿ** ತನ್ನ ಕೃತಜ್ಞತೆಯನ್ನು ಸಲ್ಲಿಸುತ್ತದೆ.

### ಒಂದು ಕರ್ನಾಟಕ

ನಾಡಿನ ಹೆಸರನ್ನೆತ್ತಿ ಮಾತನಾಡುತ್ತಿರುವಾಗ ಈ ವರ್ಷವೇ ಬಹುಶಃ ತೆರೆಯಬಹುದಾದ ಒಂದು ಭಾಗ್ಯವನ್ನು ಕುರಿತು ಎಂದರೆ, ರಚಿತವಾಗಲಿರುವ ಕರ್ನಾಟಕ ಸಂಸ್ಥಾನವನ್ನು ಕುರಿತು, ಎರಡು ಮಾತು ಹೇಳಿದರೆ ತಪ್ಪಾಗಲಾರದು.

ಪರಿಷತ್ತು ಅಖಿಲ ಕರ್ನಾಟಕ ಸಂಸ್ಥೆ. ಇಲ್ಲಿಯ ನುಡಿ, ಸಾಹಿತ್ಯ, ಕಲೆ, ಸಂಸ್ಕೃತಿ, ಜೀವನ ತುಂಬಿ ಬೆಳೆಯಲು ತನ್ನ ಬಲವಿರುವ ಮಟ್ಟಿಗೆ ದುಡಿಯಲು ಹುಟ್ಟಿರುವ ಸಂಸ್ಥೆ ಅದು ಎನ್ನಬಹುದು. ಅದರ ಮಟ್ಟಿಗೆ ಕನ್ನಡ, ಕರ್ನಾಟಕ ಸಮಾನ ವಾಚಕಗಳು. ಕನ್ನಡವೆಂಬುದು ನುಡಿ, ನಾಡು, ಜನ— ಈ ಮೂರನ್ನೂ ಕುರಿತದ್ದು; ಒಳಗೊಂಡದ್ದು. ಇವುಗಳಲ್ಲಿ ಒಂದು ಇನ್ನೊಂದಕ್ಕೆ ಪೂರಕ. ಮೂರೂ ಸೇರಿ ಭರತಖಂಡದ ಅಂಗವಾಗಿ ಅವಯವವಾಗಿ ಬೆಳೆದರೆ ಮಾತ್ರ ಪೂರ್ಣ. ಕನ್ನಡ ನುಡಿಯನ್ನು ಕುರಿತು ಯಾರಾದರೂ ಅಲ್ಪತಾ ಭಾವವನ್ನು ನುಡಿದರೆ ಅದು ಭಾರತದ ಅಷ್ಟಕ್ಕೆ ಅವಮಾನವನ್ನೋ ಕೆಡುಕನ್ನೋ ಬಯಸಿದ ಹಾಗೆ, ನುಡಿದ ಹಾಗೆ. ಕನ್ನಡಿಗರೇ ಹಾಗೆ ಮಾಡಿದ್ದಾದರೆ, ನಮ್ಮ ಅಯೋಗ್ಯತೆಯನ್ನು ನಾವೇ ಎತ್ತಿ ಆಡಿಕೊಂಡ ಹಾಗೆ. ಅಷ್ಟು ಅಪಮಾನಕರ ಎಂದು ನಮಗೆ ಅನಿಸುತ್ತದೆ. ಜನದಂತೆ ನುಡಿ. ಚೆನ್ನಾಗಿ ನುಡಿವ, ನಡೆವ ಜನ ದೊಡ್ಡ ಜನತೆಯಾಗಬಲ್ಲದು. ಬೇಗ ಹಾಗಾಗಬೇಕೆಂಬುದೇ ಇಂದಿನ ಪ್ರಯತ್ನ; ಸಾಹಸ. ನುಡಿ ಎಂದರೆ ಬಳಸುವ ಮಾತು; ಆ ಮಾತಿನ ಶಾಸ್ತ್ರ. ಸಾಹಿತ್ಯ ನುಡಿಯ ಮುಡಿ,– ಒಂದು ಬಗೆಯಲ್ಲಿ; ಅದರ ಪರಮ ಸಿದ್ಧಿ,– ಕೃತಿಗಳು ಉತ್ತಮವಾದಾಗ. ನಾಡು ಸರ್ವಂಭರೆ. ಅದು ಯಾವ ಯಾವ ಪ್ರದೇಶವನ್ನೂ ಸಸ್ಯ ಮತ್ತು ಪ್ರಾಣಿ ಸಂಪತ್ತಿಯನ್ನೂ ಮಾನವ ಸಂಸ್ಕೃತಿಯನ್ನೂ ಒಳಗೊಂಡಿದೆಯೋ ಆ ಎಲ್ಲ ಕನ್ನಡ ನಾಡೇ. ಕನ್ನಡವೆಂಬುದು ಕೆಲವರ ಆಡುಭಾಷೆ, ಅದಕ್ಕೆ ತೋರಿಸುವ ಅಭಿಮಾನ ಸಂಕುಚಿತ ಎಂದು ಬಗೆಯುವವರ ಪಾಲಿಗೆ ಕೂಡ ಕರ್ನಾಟಕ ಇಂಥ ಪ್ರದೇಶಮಂಡಲ ಎಂಬ ಭಾವನೆ ಬಂದರೆ ಒಳಿತು. ಇದರಲ್ಲಿರುವ, ಇದರ ಒಡನೆ ಇರಲು ಬಯಸುವ ಎಲ್ಲರ ದೇಶ, ಭಾಗ್ಯ ಇದು. ಇಲ್ಲಿ ಇರುವವರು ಎಲ್ಲ ಇಲ್ಲಿರಲಿ; ಇಲ್ಲಿಗೆ ಬರುವವರು ಬರಲಿ; ಇಲ್ಲಿಂದ ಹೋಗುವೆವೆನ್ನುವರು ಹೋಗಲಿ. ಸಂತೋಷದಿಂದ. (ಎಲ್ಲಿಗೆ ಹೋದಾರು? ಭಾರತದ ಇನ್ನೊಂದು ಭಾಗಕ್ಕೆ ತಾನೆ?) ಇಲ್ಲಿ ಇರಬೇಕೆನ್ನುವವರನ್ನು

ಮಾತ್ರ ಯಾರೂ ಹೊರದೂಡದೆ ಇರಲಿ. ಭಾರತದಲ್ಲಿ ಹೊಸ ಗಡಿ, ನಿಟ್ಟು ಏರ್ಪಡುತ್ತಿರುವ ಈ ಕಾಲದಲ್ಲಿ ಎಂದೆಂದಿಗೂ ಖಚಿತವಾಗಿ ಸಂಪನ್ನವಾಗಿ ನಿಲ್ಲಬಲ್ಲ ಒಂದು ಕರ್ನಾಟಕ, ಒಂದು ಕನ್ನಡ ಜನವರ್ಗ ರಚಿತವಾಗಲಿ. ಕೇಂದ್ರ ಕ್ರಿಯಾಮಂಡಲಗಳಲ್ಲಿ ಪ್ರಬಲಿಸಲಿ.

ಮಹಾಭಾರತ ಕಾಲದಿಂದ ಹಿಡಿದು ಸಾತವಾಹನ, ಕದಂಬ, ಗಂಗ, ಚಾಳುಕ್ಯ, ರಾಷ್ಟ್ರಕೂಟ, ಕಳಚುರ್ಯ, ಹೊಯಿಸಳಾದಿಗಳ ಕಾಲದಲ್ಲಿ ಕೆಚ್ಚಿಂದ ಬಾಳಿ, ವಿಜಯನಗರ ಸಾಮ್ರಾಜ್ಯದಲ್ಲಿ ಮಹಾಕರ್ನಾಟಕ ಮೆರೆಯಿತು. ಅದು ಒಡೆದಾಗ ಇಲ್ಲಿ ಒಡೆಯರ ಸಣ್ಣ ಪಾಳೆಯಪಟ್ಟು ಒಂದು ಹುಟ್ಟಿಕೊಂಡಿತು. ಕಾರುಗಹಳ್ಳಿ, ಹದಿನಾಡು, ತೆರಕಣಾಂಬಿ, ಮೈಸೂರು ಮುಂತಾದ ಪ್ರದೇಶದಲ್ಲಿ ತಲೆಯೆತ್ತಿದ ಈ ಕನ್ನಡ ಭಾಗ ರಾಜ ಒಡೆಯರ ಕಾಲದಲ್ಲಿ ವಿಜಯನಗರವನ್ನು ಮುಗಿಸಿ ಕರ್ನಾಟಕ ರತ್ನ ಸಿಂಹಾಸನವನ್ನು ಸಂಗ್ರಹಿಸಿ ಶ್ರೀರಂಗಪಟ್ಟಣದಿಂದ ಪ್ರಬಲಿಸಿತು. ಮುಂದೆ ಚಿಕದೇವರಾಜರ ಕಾಲದಲ್ಲಿಯೂ ಹೈದರ್, ಟಿಪ್ಪುಗಳ ಕಾಲದಲ್ಲಿಯೂ ವಿಸ್ತಾರಗೊಂಡು ಆ ಬಳಿಕ ಪುನಃ ಬ್ರಿಟಿಷರ ಅಂಕೆಯಲ್ಲಿ—ಹೋದುದು ಹೋಗಿ ಉಳಿದುದು ಉಳಿದು–ಈಗಿನ ಮೈಸೂರಾಯಿತು. 70–100 ವರ್ಷ ಕಾಲ, ಈವರೆಗೂ ಇದು ನಡೆಯಿತು. ಇಲ್ಲಿ ಆಳಿದ ಇಬ್ಬರು ಮೂವರು ಮಹಾರಾಜರ ಜನಪ್ರೀತಿ ಹಿರಿಮೆಗಳಿಂದಲೂ ಪ್ರೋತ್ಸಾಹದಿಂದಲೂ ಜನರ ಬಾಳು ಕುದುರಿತು. ಮದರಾಸಿನವರಾದ ರಂಗಾಚಾರ್ಯರ ಮತ್ತು ಶೇಷಾದ್ರಿ ಅಯ್ಯರವರ ಕ್ರಿಯಾಶಕ್ತಿಯಿಂದ ಇದಕ್ಕೆ ವಿಶೇಷ ಅಭಿವೃದ್ಧಿ ಬಂದಿತು. ಆದರೆ ಮದರಾಸು ಪ್ರಾಂತದಿಂದ ಇಲ್ಲಿಗೆ ಒಂದವರ–ಅವರು ಇಲ್ಲಿಗೆ ತಂದವರ–ಪ್ರಭಾವ ಅತಿಯಾಗಿ, ವಿಪರೀತಕ್ಕಿಟ್ಟುಕೊಂಡಾಗ ಶ್ರೀ ವಿಶ್ವೇಶ್ವರಯ್ಯನವರು ಮೈಸೂರಲ್ಲಿ ಮೈಸೂರವರಿಗೆ ಮಾನ್ಯತೆ ಇರಬೇಕೆಂಬ ಮಾತನ್ನೆತ್ತಬೇಕಾಗಿಬಂದಿತು. ನಾವು ಕನ್ನಡಿಗರೇ ಅಲ್ಲ, ತಮಿಳರಿಗೆ ಒಂದು ಬಣ್ಣ ಕಡಮೆಯೂ ಹೌದೇನೊ, ನಮ್ಮ ಸಂಪ್ರದಾಯ ಊಟ ಉಡುಗೆ ಮದರಾಸಿನ ಸಂಪ್ರದಾಯದವೇ, ಅವುಗಳ ಹತ್ತಿರದವೇ ಎಂಬಷ್ಟು ಅವರ ಪ್ರತಿಷ್ಠೆ ಬಲಿಯಲು ಸರ್. ಎಂ. ವಿಶ್ವೇಶ್ವರಯ್ಯನವರ ಕೈ, ಮನಸ್ಸು ಕೆಲಕಾಲ ಪ್ರಬಲಿಸಿ ಮೈಸೂರನ್ನೆತ್ತಿ ಉಪಕಾರ ಮಾಡಿತು. ಇವೊತ್ತು ಅಯ್ಯನವರನ್ನು ಹೊಗಳುವಂತಹ ಜನ ಮದರಾಸಿನವರೊಡನೆ ಸೇರಿಕೊಂಡು ಅವರನ್ನು ಇಲ್ಲಿಂದ ಓಡಿಸಿದುದಲ್ಲದೆ ನಾಡಿನಲ್ಲಿ ಆವರಿಗೆ ಇಲ್ಲದಿದ್ದ ಸಾಮಾಜಿಕ ವಿಷಮತೆಗಳನ್ನು ಕೂಡ ಬಿತ್ತಿತು. ತರುವಾಯ ಮಿರ್ಜಾ ಸಾಹೇಬರ ಕಾಲದಲ್ಲಿ ಮೈಸೂರು ಇನ್ನೊಂದು ಮಜಲ ಮುನ್ನಡೆಯಿಟ್ಟು ಸಿಂಗಾರಗೊಂಡು ಮಾದರಿ ರಾಜ್ಯವೆಂದು ಮಹಾತ್ಮರಿಂದ ಹೊಗಳಿಸಿಕೊಂಡಿತು. ಅವರ ಮೇಲೆ ಎದ್ದ ಆಕ್ರೋಶ, ಆಕ್ಷೇಪಣೆಗಳು ಇನ್ನೂ ಕಿವಿಯಲ್ಲಿ ಕೇಳುತ್ತಿವೆ. ಅಂದಿನಿಂದ ಈಚೆಗೆ ನಡೆದ ಸಂಗತಿಗಳು ಪ್ರಕೃತವಲ್ಲ.

ನಾಡಿಗೆ ಸ್ವಾತಂತ್ರ್ಯ ಬರುವ ಮುಂಚೆ ಈ ದಿನ ಭಾರತದ ರಾಜಕೀಯದಲ್ಲಿ ನಾಯಕರಾಗಿರುವ ಕಾಂಗ್ರೆಸ್ ಪಕ್ಷದವರು ಅಖಿಲ ಕರ್ನಾಟಕದ ದೃಷ್ಟಿಯಿಂದ ಕಾರ್ಯ ಮಾಡಿಸಿದರು. ಮೈಸೂರಿನ ಜನಕ್ಕೂ ರಾಜಕೀಯ ಸ್ವಾತಂತ್ರ್ಯ ಬೇಕೆಂದು ಹೊರಗಿನ ಕರ್ನಾಟಕದ ನೆರವನ್ನು ಬೇಡಿದರು. ಅಲ್ಲಿಂದ ನೆರವು ಪಡೆದರು. ಸ್ವಾತಂತ್ರ್ಯ ಬಂದಿತು. ಸರದಾರ ಪಟೇಲರವರು ಅಖಿಲ ಕರ್ನಾಟಕದ ಪ್ರದೇಶ ಸಮಿತಿಯನ್ನು ಒಡೆಯಬಿಟ್ಟರು. ಒಡಕು ಮಾತನಾಡಿ—'I cannot fancy the people of British (!) Karnataka asking to join the people of an Indian State. It ought to have been the other way about' ಎಂಬ ಸುಮಾರು ಅರ್ಥಕೊಡುವ–ದೇಶೀಯ ಸಂಸ್ಥಾನದವರಾಗಿದ್ದವರ ಜೊತೆಗೆ ಸೇರಿಕೊಳ್ಳುವೆವೆಂಬ ಬ್ರಿಟಿಷ್ ಭಾರತ ಜನವನ್ನೇನು ಮೆಚ್ಚಲಿ? ಏಕ ಕರ್ನಾಟಕದ ಕೂಗು ಸಂಸ್ಥಾನದವರಿಂದ ಇಲ್ಲಿಗೆ ಬಂದು ಅವರು ಇವರೊಡನೆ ಸೇರುವೆವೆನ್ನುವುದು ಹೆಚ್ಚು ಮಾನಕರವಾಗುತ್ತಿತ್ತು ಎಂದು ನುಡಿದು—ಒಂದಾಗಿದ್ದ ಸಂಸ್ಥೆಯನ್ನು, ಒಂದಾಗಿ ಉಳಿಯ ಬೇಕಾಗಿದ್ದುದನ್ನು—ಎರಡು ಹೋಳು ಮಾಡಗೊಟ್ಟರು.

ಹೀಗೆಲ್ಲ ಇರುವಾಗ ಮೈಸೂರು ಕರ್ನಾಟಕವಾದಗಳ ನಡುವಣ ಕಥೆಯನ್ನು ಎಂಥದೆಂದು ಪ್ರತಿಪಾದಿಸೋಣ!

ಚರಿತ್ರೆ ಎಂದಿನಿಂದ ಆರಂಭವಾಗುತ್ತದೆ? ಎಂದಿನಿಂದಾದರೆ ಸರಿ? ಚರಿತ್ರೆ ಎಲ್ಲಕ್ಕೂ ಆಕರ. ಎಲ್ಲ ಸತ್ಯವೂ ಅದೇ. ನಡೆದ, ನಡೆಯುದಾದ ಎಲ್ಲದರ ಪಿಂಡಸತ್ವವೂ ಅದು. ಎಲ್ಲದರ ಮೂರ್ತಿ, ಪ್ರತೀಕ. ಅದರಲ್ಲಿ ಬೇಕಾದವರು ತಮಗೆ ಬೇಕಾದಂತೆ ಜೆಲೆಗಳನ್ನು ರೂಢಿಸಿಕೊಳ್ಳಬಹುದು. ಅದಂತೂ ಯಾವುದಕ್ಕೂ ಪ್ರಮಾಣ

ದೊರಕಿಸುತ್ತದೆ.-ಬುದ್ಧಿವಂತರ ಯುಕ್ತಿ (Reason) ಅಗತ್ಯಗಳಂತೆ. ಬೇಕಾದವರಿಗೆ ಬೇಕಾದ ಸತ್ಯವನ್ನು ತೋರಿಸಬಲ್ಲದು; ಬೇಡಾದ್ದನ್ನು ಅಡಗಿಸಬಲ್ಲದು. ಯುಕ್ತಿ ಬುದ್ಧಿಯ ಒಂದು ಶಕ್ತಿ. ಎಲ್ಲ ಪಕ್ಷಗಳಿಗೂ ಪ್ರಯೋಜನಗಳಿಗೂ ವಿರೋಧ ಗ್ರಹಿಕೆಗಳಿಗೂ ಅದು ವಾದಗಳನ್ನು ಒದಗಿಸಬಲ್ಲದು. ಪೂರ್ವಗ್ರಹಗಳೇ ಸತ್ಯವೆಂದು ಸ್ಥಾಪಿಸಬಲ್ಲದು. ತಾವೇ ಸರಿಯೆಂಬಷ್ಟು ಸಮಂಜಸವಾದ ಯುಕ್ತಿಯನ್ನು ಕಟ್ಟಿ ಬುದ್ಧಿವಂತರಾದವರು ಜನವನ್ನು ಮೋಹಗೊಳಿಸಬಹುದು. ಆದರೆ ಈ ಎಲ್ಲ ಕಡೆ ಪ್ರಜ್ಞಾವಾದಕ್ಕೂ ಕಾರ್ಪಣ್ಯದೋಷೋಪಹತಸ್ವಭಾವಕ್ಕೂ ಆಧಾರ ಸಿಕ್ಕುತ್ತದೆ. ಅಂತಹವಾದ, ಆ ಸ್ವಭಾವ ಮುರಿದ ಹೊರತು ಮೋಹಗಳು ನಷ್ಟವಾಗವು. ಸ್ಮೃತಿ ದೊರೆಯದು. ಮಾನವನ ದುರದೃಷ್ಟದಿಂದ ಸಣ್ಣ ಪಕ್ಷಪಾತಗಳೆ ಮುಮತೆ ದೊಡ್ಡದರ ಆಕೃತಿ, ಕಾಂತಿ ವ್ಯಾಪ್ತಿಗಳನ್ನು ಮರಸುತ್ತದೆ. ಅಂಗೈ ಮರೆ ಹಿಡಿದರೆ ಕಣ್ಣು ಮುಂದಿರುವ ಕಡಲೇ ಕಾಣಿಸದಾದೀತಲ್ಲವೆ?

ಆಡಳಿತ ದೃಷ್ಟಿಯಿಂದ ಒಂದು ರೀತಿ ನಡೆದು ಕೊಂಡು ಬಂದಿರುವುದನ್ನು ಹೀಗೆಯೇ ಉಳಿಸೋಣ; ಆಡಳಿತದ ಹದ ಸೊಗಸುಗಳಿಗೆ ಈಗಿರುವಷ್ಟು ಮೈಸೂರು ದೇಶದ ಭಾಗ ಸರ್ವಥಾ ಅಚ್ಚುಕಟ್ಟಾದ್ದು; — ನೋಡಿ, ಬಹು ದೊಡ್ಡದಲ್ಲ, ಬಹು ಚಿಕ್ಕದಲ್ಲ; ಈ ಅರ್ಧ ಶತಮಾನದಿಂದ ನಮ್ಮವರು ನಮಗೆ ಒಂದು ಪ್ರಯೋಜನವನ್ನೂ ಹದವನ್ನೂ ಬೆಳಸಿಕೊಟ್ಟಿದ್ದಾರೆ; ಗಾರೆ, ಸಿಮೆಂಟನೊಡನೆ ಬೆರೆಯದು; ನಮಗಿರುವ ಭಾಗ್ಯ ಇತರ ಕನ್ನಡ ಬಾಂಧವರಿಗೆ ಇಲ್ಲ; ಅವರು ಒಡಬೆರೆತರೆ ನಮಗೆ ನಷ್ಟ; ನಮ್ಮ ಸಿರಿಯಲ್ಲಿ ಅವರಿಗೇಕೆ ಪಾಲು? ಪ್ರಜಾಸತ್ತಾತ್ಮಕವಾದ ರಾಜ್ಯ ತಂತ್ರದಲ್ಲಿ ಪ್ರಜೆಗಳ ನಿಜವಾದ ಅಭಿಪ್ರಾಯಕ್ಕೆ ಮಾನ್ಯತೆ ಬೇಡವೆ? ನಾವು ಸತ್‌ಪ್ರಜೆಗಳಲ್ಲವೆ? ಮುಂತಾಗಿ, ಮುಂತಾಗಿ ವಾದಗಳು ಜನಮನವನ್ನು ಇನ್ನೂ ರಂಜಿಸುತ್ತಿವೆಯಾಗಿ ಮುಂದಿನ ಒಂದೆರಡು ಮಾತು:

ಬ್ರಿಟಿಷರ ಕಾಲದಲ್ಲಿ ಭಾರತಕ್ಕೆಲ್ಲ ಒಂದು ರೀತಿ ಆಡಳಿತ ನಡೆದು ದೇಶೀಯ ರಾಜರನ್ನು ತನ್ನ ಇಚ್ಛೆಯಂತೆ ಆಡಿಸಿ ಕಡೆಗೆ ಅವರ ಕೈಬಿಟ್ಟು ತಾನು ಹಿಮ್ಮೆಟ್ಟಿತು. ದೇಶವೆಲ್ಲ 600 ಚಿಂದಿಯಾಗಿ ಎಲ್ಲಿ ಹರಿದೀತೋ ಎಂಬ ಭಯ ತಪ್ಪಿತು. ಸಂಸ್ಥಾನಗಳು ತಮ್ಮ ಪ್ರತ್ಯೇಕತೆಯನ್ನು ಬಿಟ್ಟುಕೊಟ್ಟು ಭಾರತೀಯವಾದವು. ಈ ಸಂಸ್ಥಾನಗಳ ಅರಸುತನ, ಸೈನ್ಯಸಜ್ಜು, ಧನ ಆಡಳಿತ, ಗಳಿಕೆಯ ಮೂಲಗಳು, ರೈಲ್ವೆ, ಅಧಿಕಾರ, ಬಾವುಟ ಎಲ್ಲ ಭಾರತಕ್ಕೆ ಸಂದವು. ಅರಸರಲ್ಲಿ ಹಿರಿಯರಾದ ನಾಲ್ಕಾರು ಜನ ಮಾತ್ರ ರಾಜಪ್ರಮುಖರಾಗಿಯೂ ಸದರ್-ಇ-ರಿಯಾಸತ್ ಆಗಿಯೂ ಉಳಿದರು. ನಾಳೆ ಇವರು ಹೆಚ್ಚೆಂದರೆ ಗೌರ್ನರುಗಳಾದಾರು. ಇವರು ಆಳುತ್ತಿದ್ದ ಪ್ರದೇಶಗಳು ಪ್ರತ್ಯೇಕ ಜೀವನವನ್ನು ಕಳೆದುಕೊಂಡು ಭಾರತದ ಭೂಪಟದಲ್ಲಿ ಒಂದಾಗಲು ಹೊಸಕಾಲದ ಏಳ್ಗೆಗೆ ಅಗತ್ಯವಾದ ಒಂದು ರಾಜ್ಯಾಂಗ ಸ್ಥಾಪಿತವಾಯಿತು. ಸರ್ವರ ಕ್ಷೇಮ ದೃಷ್ಟಿಯುಳ್ಳ, ಸಮಷ್ಟಿಹಿತನಿಷ್ಠವಾದ ಆಡಳಿತ ಪದ್ಧತಿ ನಡೆಯತಕ್ಕದ್ದೆಂದು ಈಗ ನಿರ್ಣಯವಾಗಿದೆ. ಈ ನಾಡಿನ ಸಂಪನ್ನತೆಗಾಗಿ ಮೊದಲ ಪಾಂಚವಾರ್ಷಿಕ ಯೋಜನೆ ರಚಿತವಾಗಿ, ಆ ಮಜಲು ಸುಮಾರು ಮುಗಿದು ಇನ್ನೂ ಪ್ರಬಲವಾದ ಎರಡನೆಯ ಯೋಜನೆ ಆರಂಭವಾಗಿ ಜನ ಹಿತವನ್ನು ಸಾಧಿಸಲು ಬಯಸುತ್ತಿದೆ. ಇದು ಕೃತಕಾರ್ಯವಾಗಲು ಹೊಸತಾಗಿ ಭಾರತದ ಪ್ರಾಂತಗಳ ಗಡಿ ವ್ಯವಸ್ಥೆ ಆಗಬೇಕು. ಇಲ್ಲವಾದರೆ ಯೋಜನೆಗಳಲ್ಲಿ ಕೆಲಸದ ವಿಚಕ್ಷಣೆಯೂ ವ್ಯಯದ ವಿತರಣೆಯೂ ಸರಿಯಾಗವೆಂದು ಸ್ಪಷ್ಟಪಟ್ಟಿದೆ.

'Jurisdictional difficulties sometimes hinder planning and stand in the way of a co-ordinated advance along the whole front' ಎಂಬ ಮಾತು ರಾಷ್ಟ್ರ ರಾಷ್ಟ್ರಗಳ ನಡುವೆ ಬಾಳಕೆಗೆ ಎಷ್ಟು ಹೊಂದುವುದೋ ಅಷ್ಟೇ ಚೆನ್ನಾಗಿ ಭರತಖಂಡದ ಆಡಳಿತ ಭಾಗಗಳಿಗೂ ಹೊಂದುತ್ತದೆ.

ಪುನರ್‌ರಚನೆ ಹೀಗೆ ಒಟ್ಟು ಭಾರತದ ಅಗತ್ಯ. ಅಲ್ಲಿನ ಎಲ್ಲ ಭಾಗಗಳಲ್ಲಿಯೂ ಒಂದು ಜೀವಗುಣ ಹರಿಯುವಂತೆಯೂ, ಅನ್ಯೋನ್ಯ ಸಮರಸ ಉಂಟಾಗುವಂತೆಯೂ, ಸುಮಾರು ಬಹುಜನದ ಬಯಕೆ ಸಲ್ಲುವಂತೆಯೂ, ರಾಜ್ಯದ ಏಕತೆ ಸುರಕ್ಷಣೆಗಳಿಗೆ ಸಾಧಕವಾಗುವಂತೆಯೂ ಸಂಸ್ಥಾನದ ಗಡಿಗಳ ನಿಷ್ಕರ್ಷೆ ಮಾಡುವುದು ಸೂಕ್ತವೆಂದು ಕೇಂದ್ರ ಸರ್ಕಾರವೂ ಶಾಸನ ಸಭೆಗಳೂ ತೀರ್ಮಾನಿಸಿವೆ. ಆ ಬಗೆಗೆ ಸಲಹೆ ಕೊಡಲು ಏರ್ಪಟ್ಟ ಫಜ್ಲಲ್ ಅಲಿ ಸಮಿತಿ ಪ್ರತ್ಯೇಕತಾವಾದಿಗಳನ್ನೂ ಏಕತಾವಾದಿಗಳನ್ನೂ ಅಪವಾದಿಗಳನ್ನೂ ಏನನ್ನೂ ಅರಿಯದಂತಹವರನ್ನು ಕೂಡ,

ಕೇಳಿ—ಅಭಿಪ್ರಾಯ ಸಂಗ್ರಹಿಸಿ ವರದಿ ಕೊಟ್ಟಿತು. ಸದ್ಯಕ್ಕೆ ದೊಡ್ಡದೊಡ್ಡ ಪ್ರದೇಶಗಳಾಗಿ ವಿಂಗಡಣೆಯಾಗುವುದೇ ಮೇಲು, ತುಂಬ ಚಿಕ್ಕ ಪ್ರದೇಶಗಳು ಬೇಡ ಎಂಬಂತಹ ಮಾತು ಬಲಿತು, ಈಗಿನ ಏರ್ಪಾಡುಗಳು ನಡೆಯುವಂತಿವೆ. ಆ ದೃಷ್ಟಿಯಿಂದಲೇ ಭಾರತಕ್ಕೆಲ್ಲ 5–6 ಮಹಾ ಸಲಹಾ ಮಂಡಲಗಳನ್ನು ಸ್ಥಾಪಿಸಬೇಕೆಂದು ಈಗ ಯೋಚನೆ ಹುಟ್ಟಿರುವುದು. ಅದರಲ್ಲಿ ಸಂಯುಕ್ತ ಮೈಸೂರು ಕರ್ನಾಟಕಕ್ಕೆ ಅವಕಾಶ ದೊರೆತುದು ಸಾಧಾರಣವಾಗಿ ನಮ್ಮ ಭಾಗ್ಯವಾಗಬೇಕು. ನಮ್ಮ ಸ್ಥಾನ, ಮಾನ, ಸಂಸ್ಕೃತಿ ಎಲ್ಲವೂ ಇದರಿಂದ ಬೆಳೆಯಬಲ್ಲವಾದ್ದರಿಂದ.

ಆದರೆ ಹೊಸಬೆಸೆದ ಈ ಬಗೆಯ ಸಂಸ್ಥಾನ ಕೆಲವರಿಗೆ ರುಚಿಸಿಲ್ಲ. ಕೆಲವು ಜನರಿಗೆ ಸರಿಯಲ್ಲ, ಪ್ರಯೋಜನಕರವಲ್ಲ ಎಂದು ತೋರುತ್ತಿರುವುದೂ ನಿಜ. ಇದು ಜನತೆಯೆಲ್ಲದರ ಅಭಿಪ್ರಾಯವೆಂಬಂತೆ ಮಾತ್ರ ನಿಲವು ನಿಲ್ಲಬಾರದು. ಇದೂ, ಅಲ್ಲಿ ಇಲ್ಲಿ ಒಂದೆರಡು ನಷ್ಟಗಳೆಂಬಂತಹವೂ ನಾಡನ್ನು ಸರಿಯಾಗಿ ನೋಡದಿರುವವರ ಮೇಲ್ಗಣ್ಣಿಗೆ ಕಾಣಿಸುತ್ತಿವೆ. ನಾಳೆಗೆ ಇವು ಯಾವುವೂ ಹಾಗೆಯೇ ಉಳಿಯಲಾರವು. ಒಂದೆರಡು ವರ್ಷಗಳ ಕಷ್ಟ, ಕಾರ್ಪಣ್ಯ, ಅಪರಿಚಿತತೆ ಕಳೆದು ನಾಳೆಗೆ ಸ್ನೇಹವಾಗಿ, ಬಾಂಧವ್ಯವಾಗಿ ತಿರುಗುವುದು ಖಂಡಿತ. ಮೈಸೂರಲ್ಲೊಂದರಲ್ಲೇ ಅಲ್ಲ. ಪುನರ್ ರಚಿತವಾದ ಎಲ್ಲ ಸಂಸ್ಥಾನಗಳಲ್ಲಿಯೂ ಹೀಗೇ. ಇದನ್ನು ಅಲಿ ಸಮಿತಿ ವಿವರಿಸಿದೆ. ಎಲ್ಲರೂ ಸೌಮನಸ್ಯದಲ್ಲಿ ಕೂಡಿ ಒಟ್ಟು ಭರತಖಂಡದ ನಾಳೆಯ ಮಂಗಳವನ್ನು ಸಾಧಿಸೋಣ, ಯಾರೂ ಎಲ್ಲವನ್ನೂ ಒಪ್ಪುವುದೂ ಎಲ್ಲರನ್ನೂ ಒಪ್ಪಿಸುವುದೂ ಹೇಗೆ ಸಾಧ್ಯ ಎಂಬುದು ಸಮಿತಿಯ ವಾದ, ಕೇಂದ್ರದ ವಾದ, ಶಾಸನ ಮಂದಿರಗಳ ವಾದ, ಕಾಂಗ್ರೆಸ್ ಮಹಾನಾಯಕರ ವಾದ, ಇತರ ಅನೇಕ ರಾಜಕೀಯ ಪಕ್ಷಗಳವರ ವಾದ. ಹೀಗಿರುವಾಗ ಏಕದೇಶವಾದ ಜನಾಭಿಪ್ರಾಯವೊಂದು ತನ್ನೊಂದಕ್ಕೇ ಪ್ರಾಶಸ್ತ್ಯ ಕೊಡಬೇಕೆನ್ನುವುದು, ಸಣ್ಣ ಸಣ್ಣ ಪ್ರದೇಶಗಳನ್ನು ಬೇರೆಯಾಗಿ ಉಳಿಸಬೇಕೆನ್ನುವುದು ಸರಿಯಾಗದು. ಪ್ರಜಾತಂತ್ರ ನೆಲಸಿದ ರಾಜ್ಯಗಳಲ್ಲಿ ಜನತೆಯ ಬಹುಮತದ ಒಪ್ಪಿಗೆಯಾದರೆ ಉಳಿದವರು ಅದನ್ನು ಒಪ್ಪುವುದು ಸಂಪ್ರದಾಯ.

ಅಲ್ಲದೆ ನಮ್ಮಂಥ ನಾಡಿನಲ್ಲಿ ಪ್ರಜಾಭಿಪ್ರಾಯ ಯಾವುದು? ನಾಯಕರದೆ, ಏನೂ ತಿಳಿಯದ ಹಳ್ಳಿಯ ಸಾಮಾನ್ಯರದೆ? ಓದುಬರಹ ಬಾರದೆ, ಲೋಕಸ್ಥಿತಿ ಅರಿಯದೆ ಬಡಕಲಾಗಿ, ಗಾಡಿಗಳಲ್ಲಿ ತುಂಬಿಕೊಂಡು ತಂದು ಮತಕೊಡಿಸಿ ಹಿಂದಕ್ಕೆ ಕಳಿಸುವ ಜನವೇ ಇನ್ನೂ ಬಹುಭಾಗ ಈ ನಾಡಿನಲ್ಲಿ. ಈಚೆಗೆ ಶಾಸನ ಸಭೆಯ ಮುಂದೆ ಪ್ರದರ್ಶನ ಮಾಡಲು ಇಂಥ ಮಂದಿ ಬಂದು ನೆರೆದಿತ್ತೆಂದು ಕೇಳಿದ್ದೇವೆ. ಹಳ್ಳಿಗಳಿಗೆ ಹೋಗಿ, ಇಂಡಿಯಾ ಅಥವಾ ಭರತಖಂಡ ಎಂದರೇನು? ಭಾರತದಲ್ಲಿ ಎಷ್ಟು ಸಂಸ್ಥಾನಗಳಿವೆ? ಅವುಗಳಲ್ಲಿ ಹತ್ತರ ಹೆಸರು ಹೇಳಿ ಎಂದೋ, ಮಂತ್ರಿಗಳಲ್ಲಿ ನಾಲ್ವರ ಹೆಸರು ಹೇಳಿ ಎಂದೋ, ಡಿಲ್ಲಿಗೆ, ಕಾಶಿಗೆ, ರಾಮನಾಡಿಗೆ ಎಷ್ಟು ದೂರ ಎಂದೋ, ಪೆಪ್ಸು ಎಂದರೇನು ಎಂದೋ ಕೇಳಿದರೆ ಎಷ್ಟು ಮಂದಿ ಸರಿಯಾಗಿ ಉತ್ತರ ಹೇಳಬಲ್ಲರು? ನಮ್ಮ ರಾಜಕೀಯ ಜೀವನದ ಒಂದು ಮರ್ಮವನ್ನು ಕಂಡವರೂ, ಅರ್ಥ ಮಾಡಿಕೊಳ್ಳಬಲ್ಲವರೂ, ಹತ್ತು ಸಾವಿರಕ್ಕೆ ಎಷ್ಟು ಮಂದಿ ಇದ್ದಾರು? ಆದ್ದರಿಂದ ಜನ ಸಾಮಾನ್ಯರ ಅಭಿಪ್ರಾಯಕ್ಕೆ ತಕ್ಕಂತೆ ಎಂಬ ಮಾತಿಗೆ ನೆಲೆಯಿಲ್ಲ, ಹುರುಳಿಲ್ಲ. (ಅವರ ಹೆಸರಲ್ಲಿ ಚುನಾವಣೆಗಳ ಮೊದಲಿಕೆಗಳನ್ನು ನಾಯಕರು ಮಾಡಿಕೊಳ್ಳುವುದು ಸರಿಯಾಗದೇನೊ. ಚುನಾವಣೆಗಳ ಬಣ್ಣ ಬೇರೆ.) ಒಂದು ಹಳ್ಳಿಯವರೆಲ್ಲ ಸೇರಿ ಭೂಮಿ ಚಪ್ಪಟೆಯಾಗಿದೆಯೆಂದು ತೀರ್ಮಾನ ಕೊಟ್ಟರು ಎಂಬ ವಿಳಾಸದ ಕಿಪ್ಲಿಂಗರ ಕತೆಯುಂಟು! ಆದರೆ ಅಂತಹ ಬಹುಮತ ನಿರ್ಣಯಗಳಿಂದ ಭೂಸ್ವರೂಪ ವ್ಯತ್ಯಾಸವಾಗಲಿಲ್ಲ! ಹಿಂದಿನ ಕಾಲ ಮೇಲೊ? ಸ್ವಾತಂತ್ರ್ಯದ ಈಚಿನ ಕಾಲ ಮೇಲೊ? ಎಂದು ಕೇಳಿದರೆ. ಜನಸಾಮಾನ್ಯರ ಉತ್ತರದಿಂದ ನಮಗೆಲ್ಲ ತೃಪ್ತಿಯಾದೀತೆ? ಇದು, ಪ್ರಾಧಾನ್ಯದಿಂದ, ಮುಂದಾಳುಗಳ ಮತ್ತು ನಾಯಕರ ಪ್ರಶ್ನೆ. ಅವರ ಪಾಲಿಗೂ ನಿರ್ಣಯಕ್ಕೂ ನಿಲ್ಲುವ ವಿಚಾರ. ಆಡಳಿತ ಪದ್ಧತಿ ಯಾವುದೇ ಆಗಲಿ ಪ್ರಜಾ ಹಾಗೂ ಸತ್ತ, ಹೀಗೂ ಸತ್ತ ಎಂಬ ಅಪವಾದ ಬಾರದಂತೆ ನಾಯಕರು ನಡಸಿಕೊಡಬೇಕು. ಜನತೆಯನ್ನು ದೊಡ್ಡ ಗುರಿಗಳಿಗೆ ನಡಸಿ ಬದುಕಿಸಬೇಕು. ಇವೊತ್ತಿನ ದರ್ಶನ, ಸಾಹಸ ಅದು. ಅದೇ ಪುಣ್ಯವೂ ಚರಿತಾರ್ಥತೆಯೂ ಆಗಲಿ.

ಆಡಳಿತಕ್ಕೆ ಯಾವ ಗಾತ್ರದ ಸಂಸ್ಥಾನ ಸರಿ ಎಂಬುದನ್ನು ನಿರ್ಣಯಿಸಬಲ್ಲವರು ಯಾರು? ಆಡಳಿತ ಒಂದು ಯಂತ್ರ. ಕೆಲಸಕ್ಕೆ ತಕ್ಕಂತೆ ಒಂದು ಯಂತ್ರ ದುಡಿಯಲಾರದಾದರೆ ಇನ್ನೊಂದನ್ನು ನಿಯ

ಮಿಸಿಕೊಳ್ಳುತ್ತಾರೆ. 7000 ಮೈಲಿಗಳ ದೂರದ ಲಂಡನ್ ವೈಟ್ ಹಾಲಿಂದ ಈ ನಾಡನ್ನು ಆಡಳಿತದ ಒಂದು ತುಕಡಿಯಾಗಿ ಬ್ರಿಟಿಷರು ಜಬರ್ದಸ್ತಾಗಿ ನಡಸಿದರು. ಅವರ ಆಡಳಿತ ವ್ಯವಸ್ಥೆ ಜಾಳಿನ್ನಬಲ್ಲ ಧೀರರು ಯಾರು? ಹಾಗೆಯೇ ಅಕ್ಕಲಕೋಟೆ, ಧರ್, ಮಾಂಗ್ರೋಲ್ ಸಂಸ್ಥಾನಗಳು ಉತ್ತರ ಪ್ರದೇಶದ (U. P.) ಸಮುಕ್ಕೂ ಸಂಸ್ಥಾನಗಳೇ ಆಗಿ ಮೆರೆಯಲಿಲ್ಲವೇನು? ಆಡಳಿತ ಆ ಎಲ್ಲೂ ಚೆನ್ನಾಗಿಯೇ ನಡೆದಿರಬಲ್ಲದು; ಕಲ್ಲು, ಕಾಡು, ಜಾನುವಾರು, ಜನವರ್ಗ ಎಂಥ ಬಗೆಯನ್ನಾಗಲಿ, ಎಂಥ ತೊಡಕಿನದನ್ನಾಗಲಿ ಶಕ್ತರಾದ ಆಡಳಿತಗಾರರು ಆಳುತ್ತಾರೆ;—ಪೊಲೀಸ್ ಬಲ ಸೈನ್ಯಶಕ್ತಿ ಅವರ ಬೆನ್ನಿಗೆ ಇರುವವರೆಗೂ. ಕೈಬಿಡದೆ ಮೇಲಿನ ಅಧಿಕಾರಿಗಳು ಅವರನ್ನು ಕಾಪಾಡುವವರೆಗೂ, ಪ್ರಜಾಸತ್ತಾತ್ಮಕ ಪ್ರಭಾವವಿಲ್ಲದ ಬೇರೆ ಬಗೆಯ ರಾಜ್ಯತಂತ್ರ ತನ್ನ ಪ್ರಜೆಗಳೆಲ್ಲರ ಸೌಖ್ಯವನ್ನೂ ಕಡ್ಡಾಯವಾಗಿ ಇನ್ನೂ ಚೆನಾಗಿ ಬೆಳಸಬಲ್ಲದು–(ಉದಾ. ಇಂದಿನ ರಷ್ಯಾ, ಹಿಟ್ಲರ್ ಜರ್ಮನಿ, ಇಂದಿನ ಚೀಣಾ, ಈಜಿಪ್ಟ್) ಆಡಳಿತದ ಪರಮ ಪ್ರಭಾವವನ್ನು ಹೇರಿ; ಜನದ ಸೊಲ್ಲು ಕಟ್ಟಿ; ಉಸಿರು ಕಟ್ಟಿಸಿ. ಆಡಳಿತದ ದೃಷ್ಟಿ ಎಂಬ ವಾದವನ್ನೇ ಎತ್ತಿದರೆ C. R. ಅಂಥ ಮಹನೀಯರೇ ಹೇಳುವಂತೆ— S. R. C. ವರದಿಯನ್ನೇ ಅಲ್ಲ, ನಮ್ಮ ಈಗಿನ 27 ಸಂಸ್ಥಾನಗಳನ್ನು ರದ್ದುಮಾಡಿ ಭರತಖಂಡವನ್ನೆಲ್ಲಾ ಸುಮಾರು ಸಾವಿರ ಜಿಲ್ಲೆಗಳಾಗಿ ವಿಂಗಡಿಸಿ ಕೇಂದ್ರ ಬಲದಿಂದ ಅತ್ಯುತ್ತಮ ಆಡಳಿತ ಸ್ಥಾಪಿಸಿ ದೇಶಕ್ಕೆ ಬೇಗನೆ ಸರ್ವತೋಮುಖವಾದ ಅಭಿವೃದ್ಧಿ ತರಬಹುದು. ಎಷ್ಟು ಜನ ರಾಜಕೀಯದವರು ಇದಕ್ಕೆ ಕಬೂಲು? ಎಷ್ಟು ಶಾಸನ ಸಭೆಗಳು, ಸಮಿತಿಗಳು, ಮಂತ್ರಿ ಉಪಮಂತ್ರಿ ಮಂಡಲಗಳು, ಈ ವಿಧಾನವನ್ನು ಒಪ್ಪಿಯಾವು? ಅವಕ್ಕೆಲ್ಲ ನಾಳೆ ಬದುಕು ಹೇಗೆ? ಅವಲ್ಲವೇ ಪ್ರಜೆಗಳ ಅಧಿಕೃತ ಪ್ರತಿನಿಧಿಗಳು?

ಅಲ್ಲದೆ, ಕೇವಲ ಆಡಳಿತಕ್ಕಾಗಿ ಆಡಳಿತವಲ್ಲ! ಜನಜೀವನದ ಸೌಭಾಗ್ಯಗಳನ್ನೂ, ನಯಗಳನ್ನೂ ಬೆಳಸುವುದಕ್ಕಿಂತ ನಾಡನ್ನು ಆಳುವುದು ಆಡಳಿತದ ಹೆಚ್ಚಿನ ಗುರಿಯಾದೀತೆ? Unpractical, Impracticable ಎಂಬುದು ಆಡಳಿತದವರ (Administrators) ಮಹಾಸ್ತ್ರ. ಅವರಿಗೆ ಉದಾರಚರಿತರಾದ ರಾಜ್ಯಹಿತದರ್ಶನವುಳ್ಳ Statesmen ಅನ್ನು ಕಂಡರೆ ವಿನೋದ! ಭರತಖಂಡದ ಸೌಂದರ್ಯ ಸಕಲಾವಯವ ಸಂಪುಷ್ಟಿಯಿಂದ ಬೆಳೆಯಬೇಕೆಂದಾಗಿ ಪುನರ್ವಿಂಗಡಣೆ ನಡೆಯುತ್ತಿದೆ. ಅದನ್ನು ಅರ್ಥಮಾಡಿಕೊಂಡು ಕೇಂದ್ರದೊಡನೆ ಸಹಕರಿಸುವುದು ಶ್ರೇಯಸ್ಕರ.

ಇನ್ನೊಂದು ಕಡೆಯಿಂದ ನೋಡೋಣ: ಮೈಸೂರ ಹೊರಗಿನ ಕನ್ನಡಿಗರು ದರಿದ್ರರಲ್ಲ; ಅಸಂಸ್ಕೃತರಲ್ಲ; ರಾಜಕೀಯ ಚರಿತ್ರೆ ಇಲ್ಲದವರಲ್ಲ; ಸ್ವಾತಂತ್ರ್ಯಕ್ಕಾಗಿ ನಮಗಿಂತ ಹೆಚ್ಚುಕಾಲ, ಹೆಚ್ಚಾಗಿ ಹೋರಾಡಿದವರು. ಅವರ ಹೊಲ ಮನೆ, ಧನ ಧಾನ್ಯಸಂಪತ್ತಿ, ದುಡಿತ ಕುಶಲತೆ, ವ್ಯಾಪಾರ ಉದ್ಯೋಗ, ನದಿ ಕಾಡು ನೀರ್ಬೀಳು, ಕರೆ ರೇವು ಬಂದರು, ಸಾಹಸ ಕಾರ್ಯದಕ್ಷತೆ ಎಲ್ಲವನ್ನೂ ತಂದು ಕನ್ನಡಿಗರೆಲ್ಲರ ಜೀವನಕ್ಕೆ ಸುರಿಯುತ್ತಾರೆ. ಅವರು ಆಢ್ಯರು. ನಮ್ಮದನ್ನು ಅವರು ಕಿತ್ತುಕೊಳ್ಳುವುದಿಲ್ಲ. ಅವರದನ್ನು ನಾವು ಬೇಡಬೇಕಿಲ್ಲ. ಇಬ್ಬರದೂ ಸೇರಿ ನಾಡಸಂಪತ್ತು. ಮೈಸೂರಿನದಲ್ಲ, ಕರ್ನಾಟಕ ಮಾತ್ರದ್ದಲ್ಲ, ಇದೆಲ್ಲ ಭರತಖಂಡದ್ದು. ಭರತಖಂಡದ ಕೇಂದ್ರ ಸರ್ಕಾರವೇ ನಾವು ನಮ್ಮ ಅಭಿವೃದ್ಧಿ ಕಾರ್ಯಗಳಿಗಾಗಿ ಮಾಡಿದ ಇಪ್ಪತ್ತು ಕೋಟಿ ರೂಪಾಯಿ ಸಾಲಕ್ಕೆ ಹೊಣೆ ಹೊತ್ತು ನಮ್ಮ ಕೆಲಸ ಹಗುರವಾಗುವಂತೆ ಮಾಡಿದೆ. ದಾನ ಅವರದಾಗಿರುವಾಗ ನಷ್ಟ ಯಾರಿಗೆ? ನಾವು ಉಳಿದವರಿಗೆ ಕೊಡುತ್ತಿದ್ದೇವೆಂಬ ಮಾತಿಗಾದರೂ ಏನು ಬುಡವುಂಟು? ಇನ್ನಷ್ಟು ಹಣವನ್ನು ನಮ್ಮ ಅಭಿವೃದ್ಧಿಗಾಗಿ ಪುನಃ ನಮ್ಮ ಮೇಲೆ ಸುರಿದಿದ್ದಾರೆ; ಮತ್ತಷ್ಟು ಸುರಿದು, ಇಲ್ಲಿನ ಬದುಕನ್ನು ಇನ್ನೂ ಹರಗಿ ಹಸನು ಮಾಡಲೆಂದೇ ಇಂಥ ವಿಂಗಡಣೆಯನ್ನು ಕೈಕೊಂಡಿರುವುದು. ಎಲ್ಲಿ ಕೊರೆ ಕಂಡರೂ ತುಂಬಿಕೊಡಬೇಕಾದವರು, ಕೊಡಲು ಸಾಧ್ಯವಿರುವವರು ಅವರು. ಅವರ ಕೈ ಕೊಡುಗೆಯನ್ನು ಉತ್ತಮಪಡಿಸಿಕೊಳ್ಳಬೇಕಾದ್ದು ನಮ್ಮ ಅಗತ್ಯ. ಅದಕ್ಕೆ ಜನಶಕ್ತಿ ಈ ರೀತಿ ಹೆಚ್ಚಾಗಿ ದೊರೆಯಲೆಂದು ನಾವು ಯೋಚಿಸಬೇಡವೆ? ಅಂಥ ಸಮಯದಲ್ಲಿ ಕರ್ನಾಟಕದ ಮಾತು ಒಡೆದು ಕೀಳಾಗಬಾರದು. ಸಭೆ, ಸಲಹಾ ಮಂಡಲಗಳಲ್ಲಿ ನಮ್ಮ ಮಾತೂ ತೂಕದ ಮಾತಾಗಬೇಕಿದೆ.

ಮೈಸೂರ ಹೊರಗಿನವರು ಒಂದು ವಿಶ್ವವಿದ್ಯಾನಿಲಯವನ್ನು ನಡಸುತ್ತಿದ್ದಾರೆ. ಅವರು ಭರತಖಂಡದ ಬೇರೆ ಬೇರೆ ಭಾಗಗಳವರಂತೆ ಹೆಚ್ಚು ತೆರಿಗೆ ತೆರುತ್ತಿರುವರೇನೊ? ಆದರೆ, ತಮಗೆ ದುಡಿವವರಿಗೆ ನಮಗಿಂತ

ಹೆಚ್ಚು ಸಂಬಳ ಸಾರಿಗೆ, ಬತ್ತೆಯ ಕೊಡುತ್ತಿದ್ದಾರೆ. ಅಲ್ಲದೆ ಒಟ್ಟು ನಾಡಿನ ತೆರಿಗೆ ಪದ್ಧತಿಯಲ್ಲಿ ಜನದ ಹೊರೆ, ಹೊಣೆ ಎಲ್ಲೆಲ್ಲೂ ಇನ್ನುಮುಂದೆ ಏರಲಿದೆ. ಏರದೆ ಮಾರ್ಗವಿಲ್ಲ. ಈಗಿರುವಂತೆ ಉಳಿಯದು. ಎಷ್ಟು ಪ್ರಮಾಣದಲ್ಲಿ ಹಿಂದೆ ಮನು ಮಾಂಧಾತಾದಿ ಇತಿಹಾಸ ಪುರುಷರು ತೆರಿಗೆಯೆತ್ತುತ್ತಿದ್ದರೋ ಆ ಷಡ್ಭಾಗಕ್ಕಿಂತ ನಮ್ಮ ನಾಡಿನಲ್ಲಿ ತೆರಿಗೆ ಇಂದು ಇನ್ನೂ ಕಡಮೆಯಾಗಿದೆ ಎಂಬುದನ್ನು ಬಲ್ಲವರು ಬಲ್ಲರು. ಷಡ್ಭಾಗವೇ ಏನು? ಉತ್ಪತ್ತಿಯ ಚತುರ್ಭಾಗ ತ್ರಿಭಾಗವನ್ನು ರಾಜಭಾಗವೆಂದು ಒದ್ದು ಕಿತ್ತುಕೊಳ್ಳುತ್ತಿದ್ದ ಕಾಲಗಳಿದ್ದುವು. ಇಲ್ಲಿನ ಪ್ರಜಾತ್ವ ಒಂದು. ಅದರ ಅಖಂಡ ಭೋಗದ ಮನೋವೃತ್ತಿ ಇಲ್ಲಿ ಬೆಳೆಯಬೇಕು. ಎಲ್ಲಿಯೇ ಆಗಲಿ ಇರಬಹುದಾದ ಏರು ಪೇರು ಅಳಿದು ಅವಕಾಶ ಅನುಕೂಲಗಳ ಸಮತೆ ಹಬ್ಬಬೇಕು – ಎಂಬುದಲ್ಲವೆ ಭಾರತದ ಇಂದಿನ ದೃಷ್ಟಿ? ನಾವು ಅಧಿಕರೆಂಬ ಬೀಗು ಕರಗಿದ ಹೊರತು, ಸುಖ ಸೌಕರ್ಯ ನಿರ್ವಿಘ್ನಗಳು ಎಲ್ಲ ಭಾಗದವರಿಗೂ ಹಂಚಿದ ಹೊರತು ಇಂದಿನ ರಾಜತಂತ್ರದ ಗುರಿ ಸಾಧಿಸದು.

ನಾಡಿನಲ್ಲಿ ಬಹುದಿನದಿಂದ ರಾಜಕೀಯ ರಂಗಗಳಲ್ಲಿ ಹೆಸರುಪಡೆದು ಉಪಕಾರಿಗಳಾಗಿ ದುಡಿದಿರುವ ಮೈಸೂರಿನ ಕೆಲವರು ಮಾನ್ಯರು ಯಾವ ಭೀತಿ, ಸಂಶಯ, ಲೋಭ, ಮೋಹಗಳನ್ನೂ ಇಟ್ಟುಕೊಳ್ಳದೆ ಈ ವರ್ಷ ಮೂಡಲಿರುವ ಕರ್ನಾಟಕಕ್ಕೆ–ಅದರ ಹೆಸರು ಯಾವುದೇ ಆಗಲಿ, ಹಿರಿಯರೊಬ್ಬರೆಂದಂತೆ ಮೈಸೂರು (i. e. ಕರ್ನಾಟಕ) ಎಂದೋ, ಕರ್ನಾಟಕ (i. e. ಮೈಸೂರು) ಎಂದೋ, ಮೈಸೂರು – ಕರ್ನಾಟಕ ಎಂದೋ, ಸಂಯುಕ್ತ ಮೈಸೂರು ಕರ್ನಾಟಕ ಎಂದೋ ಯಾವುದೋ ಒಂದು – ಸುಮುಖರಾಗಲಿ ಎಂದು ಬೇಡುತ್ತೇವೆ. ಅಂಥ ಸುಮುಖತೆ ಇಂದು ನಾಳೆಗೆ ಕೊಡುವ ಕಾಣಿಕೆ. ನಾಳೆಗಾಗಿ ಪಡುವ ಅಲ್ಪ ಸ್ವಲ್ಪ ಇರುಸು ಮುರುಸು. ಹೊಸತೊಂದು ಬದುಕು ಬೆಸಲಾಗುತ್ತಿರುವಾಗ ತಾಯ ಸೂಲ್ಮುಲುಕನ್ನು ಹೆಚ್ಚಾಗಿಸಬಾರದು. ಒಳಗಿರುವ ಮಗುವನ್ನು ಶಸ್ತ್ರಕ್ರಿಯೆಯಿಂದ ಹೊರತೆಗೆಯಬೇಕಾದ ಅಗತ್ಯ ಮಗುವಿನ ಅಪಕೀರ್ತಿಗಾಗಲಿ ತಾಯ ಆರೋಗ್ಯಕ್ಕಾಗಲಿ ತಟ್ಟದಂತೆ ನಮ್ಮವರು ನಡಸಿಕೊಡಬೇಕೆಂದು **ನುಡಿ** ಬೇಡುತ್ತದೆ.

ಕರ್ನಾಟಕವಾಗಿ ಎಲ್ಲರೂ ಕೂಡುವುದು ಅಗತ್ಯವೆಂದು ಬಹುಮಟ್ಟಿಗೆ ತೀರ್ಮಾನವಾಗಿದೆ. ಯಾರಲ್ಲಿ ಯಾರೂ ವಿಲೀನ – ವಿಲಯನ – ಆಗಬೇಕಿಲ್ಲ. ಲಯದ ಮಾತುಬೇಡ. ಇಬ್ಬರೂ ಕೂಡಿ, ಒಂದು. ಹೀಗಿರುವಾಗ ಕೂಡುವುದಕ್ಕೇ ತಕರಾರು ಮಾಡುತ್ತಿರುವ ಭಾಗದವರು ತಮಗಿಂತ ಅಧಿಕ ಸಂಖ್ಯೆಯ, ಅಧಿಕ ವಿಸ್ತಾರದ ಜನ ಬಯಸುತ್ತಿರುವ ಇತಿಹಾಸ ಪ್ರಸಿದ್ಧವಾದ ಹೆಸರನ್ನು ಬಿಟ್ಟು ಇಷ್ಟವಿಲ್ಲದವರು ಒತ್ತುತ್ತಿರುವ ಹೆಸರನ್ನು ಉಳಿಸಿರೆಂದು ಕೇಳಲು ನಮಗೆ ಸಂಕೋಚವಾಗಬೇಡವೆ?

ಮೈಸೂರಿಗೆ ಹಿರಿಮೆ ಬಂದದ್ದು ಎಲ್ಲ ದೊಡ್ಡದಕ್ಕೂ ಆಶ್ರಯ ಕೊಟ್ಟು ಎಲ್ಲವನ್ನೂ ಬೆಳಸಿಕೊಂಡು ಬಂದಾಗ. ಜೈನ, ಬೌದ್ಧ, ಶೈವ, ವೈಷ್ಣವ, ಮುಸ್ಲಿಮ, ಕ್ರಿಸ್ತ, ಪಾರಸಿಕ ಎಲ್ಲದಕ್ಕೂ ಇದು ಒಲಿದ ಭೂಮಿಯಾದಾಗ. ಪಕ್ಷಪಾತ, ವಿರೋಧ ಇಲ್ಲದೆ ಎಲ್ಲವನ್ನೂ ತಾಯಂತೆ ಪೋಷಿಸಿದಾಗ. ಎಲ್ಲ ಗುಣ ಶ್ರೇಯಸ್ಸುಗಳಿಗೂ ಅವಕಾಶ ಕಲ್ಪಿಸಲು ಮುಂದೆ ನಿಂತು ಸಿದ್ಧವಾದಾಗ. ಅಂಥ ಅವಕಾಶ ಈಗ ಇನ್ನಷ್ಟು ಅತಿಶಯವಾಗಿ ದೊರೆತಿದೆ. ಇಂದು ನಾವು ಸೆಡೆತು ಅಸೌಮನಸ್ಯದಿಂದಿರುವುದು ಅಕೀರ್ತಿಕರ.



---

ಸಂಪಾದಕರು : ಶ್ರೀ ವಿ. ಸೀತಾರಾಮಯ್ಯ, ಎಂ. ಎ., ಪ್ರಕಾಶಕರು : ಕನ್ನಡ ಸಾಹಿತ್ಯ ಪರಿಷತ್ತು ;
ಮುದ್ರಕರು : ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-2

Reg. No. M. 3975—January 1956

Licensed to post without
pre-payment. LicenseNo.6

# ಮೈಸೂರು ಸರ್ಕಾರದ ಜೀವ ವಿಮಾ ಇಲಾಖೆ

**(ಸಾರ್ವಜನಿಕ ಶಾಖೆ)**






**ಅಂಕಿ ಅಂಶಗಳೇ ನುಡಿಯುತ್ತವೆ**

**1954 - 55ನೇ ಸಾಲಿನಲ್ಲಿ 1.82 ಕೋಟಿ ರೂ.ಗಳಿಗೂ ಮೀರಿದ ಹೊಸ ವ್ಯವಹಾರ**



## ನಿಧಿ 4.79 ಕೋಟಿ ರೂಪಾಯಿಗಳನ್ನು ಮೀರಿದೆ

## ವಿಮಾ ಮೊಬಲಗು 13.87 ಕೋಟಿ ರೂಪಾಯಿಗಳು



## ಪಾವತಿಯಾದ ಮೊಬಲಗು 2.45 ಕೋಟಿ ರೂಪಾಯಿಗಳಿಗೆ ಮೀರಿದೆ

## ಹಂಚಿರುವ ಬೋನಸ್

| | | |
|---|---|---|
| **ಸಂಪೂರ್ಣ ಜೀವವಿಮೆಗಳಿಗೆ** | — | **20 ರೂಪಾಯಿಗಳು** |
| **ಎಂಡೋಮೆಂಟ್ (ಅವಧಿಕ) ವಿಮೆಗಳಿಗೆ** | — | **17 ರೂಪಾಯಿಗಳು** |

ಮತ್ತಷ್ಟು ತಗ್ಗಿಸಿದ ದರದ ಕಂತುಗಳು



ವಾಹನಗಳ ಮೇಲೂ ತಗ್ಗಿಸಿದ ದರದ ಕಂತುಗಳ ಮೇಲೆ ವಿಮೆ ಮಾಡಲಾಗುತ್ತದೆ

ಬಿ. ಎಂ. ಶ್ರೀಕಂಠಯ್ಯ ಅಚ್ಚುಕೂಟ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು-೨